

# Manual of Tagavi and its Accounts

(Government Loans to Landholders)

## Bombay

PREPARED BY

**F. G. HARTNELL ANDERSON**, M.A., I.C.S.

[Published under Financial Department Resolution No. 2676
dated 13th September 1916]

*SECOND EDITION*

---

## ತಗಾಯಿ ಕೈಪಿಡಿಯು ಹಾಗೂ ಅವರ ಲೆಕ್ಕಗಳು

(ಭೂಮಿಗಳನ್ನು ಧಾರಣ ಮಾಡುವವರಿಗೆ ಕೊಡಲಾಗುವ ಸರಕಾರೀ ಸಾಲಗಳು)

## ಮುಂಬಯಿ

ಎಫ್. ಜಿ. ಹಾರ್ಟ್‌ನೆಲ್ ಅಂಡರ್‌ಸನ್, ಎಮ್.ಎ.,
ಆಯ್.ಸಿ.ಎಸ್., ಇವರಿಂದ ತಯಾರಿಸಲ್ಪಟ್ಟದ್ದು

[ಸನ್ [illegible]
ಫೈನಾನ್ಸ್ [illegible]
[illegible]]

[illegible]

BOMBAY
PRINTED AT THE GOVERNMENT CENTRAL PRESS
1951

# ಅನುಕ್ರಮಣಿಕೆ.

## ಭಾಗ ೧.

---

## ೨ನೇ ಭಾಗ.

### ಲೆಕ್ಕಗಳು.

ಪುಟಗಳು.

# ಸಂಕೇತಾಕ್ಷರಗಳು.

| | |
|---|---|
| ಅ. ಜ. .... | .... ಅಕೌಂಟೆಂಟ್ ಜನರಲ್. |
| ಅ. ಕಾ. .... | .... ತಾಲೂಕಿನ ಅವಲ ಅಥವಾ ಪ್ರಥಮ ಕಾರಕೂನನು. |
| ಹೊ. ಸಾ. (ಆಕ್ಟ).... | .... ಹೊಲ ಮಾರುವವರ ಸಾಲಗಳ (ಸನ್ ೧೮೭೯ನೇ ಇಸವಿಯ ೧೭ನೇ) ಆಕ್ಟ. |
| ಕ. .... | .... ಜಿಲ್ಲೆಯ ಕಲೆಕ್ಟರನು. |
| ಸ. ಇ. .... | .... ಸರ್ಕಲ್ ಇನ್ಸ್ಪೆಕ್ಟರನು |
| ಕಮಿ. .... | .... ಆಯಾ ಭಾಗದ ಅಥವಾ ಸಿಂಧದ ಕಮಿಶನರನು. |
| ಸ್ಥಾ. ಸ. .... | .... ಸ್ಥಾನಿಕ ಸರಕಾರ. |
| ಹು. ಡೆ. ಕ. .... | .... ಹುಜೂರ ಡೆಪ್ಯುಟಿ ಕಲೆಕ್ಟರ ಹಾಗೂ ಟ್ರೆಝುರೀ ಅಮಲದಾರನು. |
| ಕು. .... | .... ಕುಲಕರ್ಣಿ ಅಥವಾ ಇತರ ಗ್ರಾಮದ ಶಾನಭೋಗನು. |
| ಕಾ. .... | .... ತಾಲೂಕಿನೊಳಗಿನ ಜಗಾಯಿಯ ಸಂಬಂಧದ ಪತ್ರವ್ಯವಹಾರವ ಹಾಗೂ ತ. ಸ. ಜನೇಪ್ಪರ ತಾಬೆಯುಳ್ಳ ಕಾರಕೂನನು. |
| ಭೂ. ಸು. ಸಾ. (ಆಕ್ಟ) | .... ಭೂಮಿಯ ಸುಧಾರಣೆಯನ್ನು ಮಾಡುವ ಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟ (ಸನ್ ೧೮೮೩ನೇ ಇಸವಿಯ ೧೯ನೇ ಆಕ್ಟ). |
| ಭೂ. ಮ. .... | .... ಭೂಮಿಯ ಮಹಸೂಲು. |
| ಮಾ. .... | .... ಮಾಮಲೇದಾರ ಅಥವಾ (ಸಿಂಧದಲ್ಲಿ) ಮುಖ್ತ್ಯಾರಕಾರ ಮತ್ತು ಸಂದರ್ಭದ ಮೇಲಿಂದ ಹೊರ್ತುಪಡಿಸಿದ ಹೊರ್ತು ಇದರಲ್ಲಿ ಮಹಾಲಕರಿಯು ಸಮಾವೇಶವಾಗುತ್ತದೆ. |
| ಪ್ರಾ. .... | .... ತಾಲೂಕಿನ ಅಥವಾ ಪ್ರಾಂತದ ತಾಬೆಯುಳ್ಳ ಅಸಿಸ್ಟಂಟ ಅಥವಾ ಡೆಪ್ಯುಟಿ ಕಲೆಕ್ಟರನು. |
| ಸೆ. ಸ್ಟೇ .... | .... ಸೆಕ್ರೆಟರಿ ಆಫ್ ಸ್ಟೇಟ ಫಾರ್ ಇಂಡಿಯಾ ಇನ್ ಕೌನ್ಸಿಲ್. |
| ಕಲಮು .... | .... (ಭೂ. ಸು. ಸಾ. ಅಥವಾ ಹೊ. ಸಾ.) ಆಕ್ಟಿನ ಕಲಮು. |

| | | |
|---|---|---|
| ತಾ. | .... | .... ಸ್ಪಷ್ಟವಾಗಿ ಹೊರ್ತುಪಡಿಸದಿದ್ದರೆ, ತಾಲೂಕಿನಲ್ಲಿ ಮಹಾಲಿನ ಅಥವಾ ಪೇಠಾದ ಸಮಾವೇಶವಾಗುತ್ತದೆ. |
| ತ. ನ. | .... | .... ತಗಾಯಿ ನಮೂನೆ. |
| ಟ್ರೆ. ಅ. | .... | .... ಟ್ರೆಝುರೀ ಅಮಲದಾರ. |
| ಗ್ರಾ. | .... | .... ಗ್ರಾಮ. |
| ಎ. ಎ. | .... | .... ಎಕ್ಸಿಕ್ಯೂಟಿವ್ ಎಂಜಿನಿಯರ. |

ಸಹಿಯೆಂಬ ಶಬ್ದದಲ್ಲಿ, ಯಾವನೊಬ್ಬ ಓದುಬರೆಯಲಿಕ್ಕೆ ಬಾರದಿದ್ದ ಮನುಷ್ಯನ ಹೆಬ್ಬೊಟ್ಟಿನ ಗುರ್ತಿನ ಸಮಾವೇಶವು ಯಾವಾಗಲೂ ಆಗುತ್ತದೆ. ಓದುಬರೆಯಲಿಕ್ಕೆ ಬರುತ್ತಿದ್ದ ಮನುಷ್ಯನ ಪರಿಚಯವು ಖುದ್ದ ಅಮಲದಾರನಿಗೆ ಇಲ್ಲದಿದ್ದರೆ, ಅವನ ಹೆಬ್ಬೊಟ್ಟಿನ ಗುರ್ತನ್ನು, ಅವನು ಎರಡನೇ ಮನುಷ್ಯನೆಂದು ಹೇಳದಂತೆಯೂ, ಅವನ ಗುರ್ತು ಹಚ್ಚುವಲ್ಲಿ ದೋಷವಾಗದಂತೆಯೂ ಮಾಡುವ ಬಗ್ಗೆ ಉಪಾಯವೆಂದು ತಕ್ಕೊಳ್ಳತಕ್ಕದ್ದು. (ಎಫ್. ೪೧೧೬–೦೯) ಆದರೆ, ಯಾವನೊಬ್ಬ ಓದುಬರೆಯಲಿಕ್ಕೆ ಬಾರದಿದ್ದ ಮನುಷ್ಯನ ಪರಿಚಯವು ಅಮಲದಾರನಿಗೆ ಚನ್ನಾಗಿದ್ದರೆ, ಮತ್ತು ಅವನು ಇನಾಮದಾರನೆಂದು ಅಥವಾ ಜೋತನೆಂದು ಖ್ಯಾತಿಪಡೆದ ಮನುಷ್ಯನಿದ್ದರೆ ಮತ್ತು ಅವನು ಒಂದು ಮೊಹರನ್ನು ಉಪಯೋಗಿಸುತ್ತಿದ್ದರೆ, ಅವನು ತನ್ನ ಹೆಬ್ಬೊಟ್ಟಿನ ಗುರ್ತಿನ ಬದಲಾಗಿ ತನ್ನ ಮೊಹರನ್ನು ಮಾಡಬಹುದು. ಹೆಬ್ಬೊಟ್ಟಿನ ಗುರ್ತನ್ನು ತಕ್ಕೊಳ್ಳುವ ಸಾಧನಗಳೂ ಶಾಯಿಯೂ ಸ್ಟೇಶನರೀ ಸುಪರಿಂಟೆಂಡೆಂಟನಿಂದ ಪೂರೈಸಲ್ಪಡುತ್ತವೆ (ಎಫ್. ೩೩೦೮–೧೦).

ಈ ಯಾವತ್ತು ಕಾನೂನುಗಳಲ್ಲಿ ಹಾಗೂ ಟಿಪ್ಪಣಿಗಳಲ್ಲಿ ಕಂಡುಬರುವ ಅರ್ಜಿ, ಸಾಲ ತಕ್ಕೊಳ್ಳುವವನು, ಕೊಡುವವನು, ಶರ್ತುಗಳು, ಚೌಕಸಿ ಮಾಡುವವನು ಅಥವಾ ಚೌಕಸಿಯು, ಬಡ್ಡಿ, ಸಾಲ, ವಸೂಲಿ, ಸೂಟುಗಳು, ತಹಕೂಬಿಗಳು, ಜಾಮೀನು, ಕಂತು ಮತ್ತು ಇಂಥ ಇತರ ಶಬ್ದಗಳು, ಸಂದರ್ಭದ ಮೇಲಿಂದ ಅವುಗಳಿಗೆ ಸ್ಪಷ್ಟವಾಗಿ ಎರಡನೇ ಅರ್ಥವಿದ್ದ ಹೊರ್ತು, ಇವೆರಡೂ ಆಕ್ಟುಗಳಲ್ಲಿ ಉಲ್ಲೇಖಿಸಿದ ತಗಾಯಿ ಸಾಲಕ್ಕೆ ಸಂಬಂಧಿಸುತ್ತವೆಂದು ತಿಳಿಯತಕ್ಕದ್ದು.

ಸರಕಾರೀ ಠರಾವುಗಳನ್ನು, ಅವುಗಳ ಖಾತೆ (ಪ್ರಾರಂಭದ ಹೆಸರನ್ನು ಬರೆದು), ನಂಬರು, ವರ್ಷ (ಕೊನೆಯವೆರಡು ಸಂಖ್ಯೆಗಳನ್ನು ಬರೆದು) ಇವುಗಳನ್ನು ಬರೆದು ಉಲ್ಲೇಖಿಸಲಾಗಿದೆ: ಉದಾ—ಎಫ್. ೧೧೩೨–೦೦ ಅಂದರೆ, ಫೈನಾನ್ಸ್ ಡಿಪಾರ್ಟಮೆಂಟಿನ ಸನ್ ೧೯೦೦ನೇ ಇಸವಿಯ ಸರಕಾರೀ ಠರಾವು ನಂಬರು ೧೧೩೨. ಆದರೆ ಸೆಕ್ರೆಟೇರಿಯೇಟದಲ್ಲಿ ನಂಬರುಗಳನ್ನು ಕೊಡುವ ಹೊಸ ಪದ್ಧತಿಯನ್ನು ಸ್ವೀಕರಿಸಿದ್ದರಿಂದ, ಪೂರ್ಣ ತಾರೀಖುಗಳನ್ನು ಕೊಡಲಾಗಿದೆ.

---

ಮಿ. ಜೋಗಳೇಕರವರು ಸಂಪೂರ್ಣವಾಗಿ ತಯಾರಿಸಿದ ಕೆಲಸವನ್ನು ಪ್ರಕಟಿಸುವದಕ್ಕೆ ಅವಶ್ಯವಿರುವಷ್ಟರ ಮಟ್ಟಿಗೆ ಸುಧಾರಿಸುವದು, ಸಂಕ್ಷಿಪ್ತಗೊಳಿಸುವದು ಹಾಗೂ ಅನಾವಶ್ಯಕ ಮಜಕೂರನ್ನು ತೆಗೆದುಹಾಕುವದಷ್ಟೇ ನನ್ನ ಕೆಲಸವಾಗಿತ್ತು. ನಾನು ಮಾಡಿದ ಒಂದೇ ಒಂದು ಹೊಸ ಸುಧಾರಣೆಯೆಂದರೆ, ತಗಾಯಿ ವರ್ಷವು ಹಾಗೂ ನಗದೀ ವರ್ಷವು ಈಗ ಒಂದೇ ಆಗಿ ಮಾಡಲಾಗಿದೆ. ಇದೀ ತಗಾಯಿ ವರ್ಷವು, ಜೂನ ತಿಂಗಳ ೩೦ನೇ ತಾರೀಖಿಗೆ ಮುಗಿಯುವ ಮಹಸೂಲಿನ ವರ್ಷದೊಂದಿಗಾಗಲಿ ಮಾರ್ಚ ತಿಂಗಳ ೩೧ನೇ ತಾರೀಖಿಗೆ ಮುಗಿಯುವ ನಗದೀ ವರ್ಷದೊಂದಿಗಾಗಲಿ ಸರಿಯಾಗುವಂತೆ ಮಾಡುವ ಬಗ್ಗೆ ಸೂಚನೆಗಳನ್ನು ಮಾಡಲಾಗಿತ್ತು. ಆದರೆ ಇವೆರಡೂ ಸೂಚನೆಗಳು ವ್ಯಾವಹಾರಿಕವಾಗಿದ್ದಿಲ್ಲ. ಆದರೆ ನಾವು ಈಗ ತಗಾಯಿ ವರ್ಷವನ್ನು ಎರಡು ಸರಿಯಾದ ಭಾಗಗಳಾಗಿ ವಿಭಾಗಿಸಿ, ಒಂದು ಭಾಗವು ಮಾರ್ಚ ತಿಂಗಳ ೩೧ನೇ ತಾರೀಖಿಗೆ ಮುಗಿಯುವಂತೆಯೂ, ಮತ್ತೊಂದು ಭಾಗವು ಸಪ್ಟೆಂಬರ ತಿಂಗಳ ೩೦ನೇ ತಾರೀಖಿಗೆ ಮುಗಿಯುವಂತೆಯೂ ಮಾಡಿದ್ದೇವೆ. ಇವೆರಡೂ ಅರ್ಧಭಾಗಗಳನ್ನು ಯಾವ ಕ್ರಮದಿಂದ ತಕ್ಕೊಂಡು ಒಟ್ಟುಗೂಡಿಸಿದರೂ ಅವುಗಳಲ್ಲಿ ಒಂದು ಪೂರ್ಣ ವರ್ಷದ ವ್ಯವಹಾರಗಳೆಲ್ಲವೂ ಬರುತ್ತವೆ. ಆದ್ದರಿಂದ ಅಕೌಂಟಂಟ ಜನರಲರವರ ಅಂಕೆಗಳೊಂದಿಗೆ ಸರಿಹೋಗುವ ನಗದೀ ವರ್ಷದ ಸಲುವಾಗಿ ಒಂದು ಪೂರ್ಣ ಲೆಕ್ಕವು ದೊರೆಯುತ್ತದೆ ಹಾಗೂ ಕಾರಭಾರದ ಅಥವಾ ಮಹಸೂಲಿನ ವರ್ಷಕ್ಕೆ ಸಾಕಷ್ಟು ಮಟ್ಟಿಗೆ ಸರಿಹೋಗುವ ಸಪ್ಟೆಂಬರ ತಿಂಗಳ ೩೦ನೇ ತಾರೀಖಿಗೆ ಮುಗಿಯುವ ಮತ್ತೊಂದು ವರ್ಷದ ಲೆಕ್ಕವೂ ದೊರೆಯುತ್ತದೆ. ಇದರ ಹೊರತಾಗಿ, ಎಫ್. ೧೭೧೭–೧೧ರಲ್ಲಿ ಮಂಜೂರ ಮಾಡಿದ ಲೆಕ್ಕಗಳಲ್ಲಿಯೂ, ಎಫ್. ೧೭೪೮–೧೧ರಲ್ಲಿ ಮಂಜೂರ ಮಾಡಿದ ಬಾಂಡಿನ ನಮೂನೆಗಳಲ್ಲಿಯೂ ಬೇರೆ ಯಾವದೇ ಮಹತ್ವದ ಬದಲಾವಣೆಯನ್ನು ಮಾಡಿರುವದಿಲ್ಲ. ಕಾರಕೂನಕೀ ಕೆಲಸವನ್ನು ಕಡಿಮೆ ಮಾಡುವವರ ಸಲುವಾಗಿಯೂ, ಲೆಕ್ಕಗಳೊಳಗಿನ ಕೆಲವು ಆಸನಗಳನ್ನು ತೆಗೆದುಹಾಕುವದರ ಸಲುವಾಗಿಯೂ ಅನೇಕ ಹಂಚಿಕೆಗಳನ್ನು ಕೈಕೊಳ್ಳಲಾಗಿದೆ, ಮತ್ತು ಇದರ ಪರಿಣಾಮವಾಗಿ, ಸನ್ ೧೯೧೧ನೇ ಇಸವಿಯಲ್ಲಿದ್ದ ಲೆಕ್ಕಗಳ ಆಸನಗಳ ಒಟ್ಟು ಸಂಖ್ಯೆಯನ್ನು ೧೪೯ರಿಂದ ೧೦೭ಕ್ಕೆ ಇಳಿಸಲಾಗಿದೆ. ಇತರ ಕಿರಕೋಳ ಸುಧಾರಣೆಗಳ ಪೈಕಿ ಮುಖ್ಯವಾದ ಸುಧಾರಣೆಯೆಂದರೆ, ಪ್ರತಿಯೊಬ್ಬ ಸಾಲಗಾರನ ಲೆಕ್ಕವನ್ನು,—ಅದು ಮುಗಿದರೂ ಕೂಡ ಅದನ್ನು ಬೇರೆಯಾಗಿ ತೆಗೆಯಲಿಕ್ಕೆ ಬಾರದಂತೆ—ಯಾವದೊಂದು ಹೊಲಿದ ಪುಸ್ತಕದಲ್ಲಿಡದೆ, ಪ್ರತ್ಯೇಕ ಹಾಳೆಗಳಲ್ಲಿ ಬರೆದಿಟ್ಟು ಫೈಲ ಮಾಡಿಡುವದಿರುತ್ತದೆ.

ರಿಮೆಂಬ್ರೆನ್ಸರ್ ಆಫ್ ಲೀಗಲ್ ಅಫೇಅರ್ಸರವರಿಂದ ಸುಧಾರಿಸಲ್ಪಟ್ಟು ಗ್ಯಾಝೇಟಿನಲ್ಲಿ ಪ್ರಸಿದ್ಧಿಸಲ್ಪಟ್ಟ ಕಾನೂನುಗಳಲ್ಲಿ, ಇಲ್ಲಿ ಪ್ರಸಿದ್ಧಿಸಲಾದ ಕಾನೂನುಗಳಲ್ಲಿರದ ಕೆಲವು ಔಪಚಾರಿಕ ಹೆಚ್ಚುಕಡಿಮೆಗಳನ್ನು ಕಾಣಬಹುದು.

ಯಾವದೇ ತಪ್ಪಾಗಿ ಛಾಪಿಸಿದ್ದನ್ನು ಅಥವಾ ತಪ್ಪನ್ನು ಅಥವಾ ತಪ್ಪಾಗಿ ಎತ್ತಿಬರೆಯಲಾದ ಸಂಗತಿಯನ್ನು ತಿಳಿಸಬೇಕೆಂದು ಗ್ರಂಥಕಾರನ ವಿನಂತಿಯಿರುತ್ತದೆ.

ಪುಣೆ: ಎಫ್. ಜಿ. ಎಚ್. ಎಂಡರಸನ್.

ತಾರೀಖು ೧ನೇ ಆಗಸ್ಟ ಸನ್ ೧೯೧೪ನೇ ಇಸವಿ.

# ಭಾಗ ೧

# India Act No. XIX of 1883.

## ಸನ್ ೧೮೮೩ನೇ ಇಸವಿಯ ಹಿಂದುಸ್ಥಾನದ ಆಕ್ಟು ನಂಬರು ೧೯.

(ಸನ್ ೧೮೯೯ನೇ ಇಸವಿಯ ೧೫ನೇ, ಸನ್ ೧೯೦೬ನೇ ಇಸವಿಯ ೫ನೇ, ಸನ್ ೧೯೦೮ನೇ ಇಸವಿಯ ೧೬ನೇ ಹಾಗೂ ಸನ್ ೧೯೧೪ನೇ ಇಸವಿಯ ೪ನೇ ಆಕ್ಟುಗಳಿಂದ ಸುಧಾರಿಸಲ್ಪಟ್ಟಂತೆ.)

ಹಿಂದುಸ್ಥಾನದ ಗವರ್ನರ ಜನರಲ ಇನ್ ಕೌನ್ಸಿಲರವರಿಂದ ಪಾಸ ಮಾಡಲ್ಪಟ್ಟದ್ದು.

ಸನ್ ೧೮೮೩ನೇ ಇಸವಿಯ ಅಕ್ಟೋಬರ ತಿಂಗಳ ೧೨ನೇ ತಾರೀಖಿನ ದಿವಸ ಗವರ್ನರ ಜನರಲರವರ ಸಮ್ಮತಿಯು ದೊರೆಯಿತು.

### ಹೊಲದ ಸಂಬಂಧದಿಂದ ಸುಧಾರಣೆಗಳನ್ನು ಮಾಡುವಗೋಸ್ಕರ ಸರಕಾರದಿಂದ ಸಾಲಗಳು ಕೊಡಲ್ಪಡುವ ವಿಷಯದ ಕಾಯದೆಯನ್ನು ಒಟ್ಟುಗೂಡಿಸಿ ಸುಧಾರಿಸುವ ವಿಷಯದ ಆಕ್ಟು.

ಹೊಲದ ಸಂಬಂಧದಿಂದ ಸುಧಾರಣೆಗಳನ್ನು ಮಾಡುವಗೋಸ್ಕರ ಸರಕಾರದಿಂದ ಸಾಲಗಳು ಕೊಡಲ್ಪಡುವ ವಿಷಯದ ಕಾಯದೆಯನ್ನು ಒಟ್ಟುಗೂಡಿಸಿ ಸುಧಾರಿಸುವದು ವಿಹಿತವಿರುವದರಿಂದ, ಇದರ ಮೇಲಿಂದ ಈ ಕೆಳಗಿನಂತೆ ಠರಾಯಿಸಿರುತ್ತದೆ:—

೧. ಸಂಕ್ಷಿಪ್ತ ಹೆಸರು.—(೧) ಈ ಆಕ್ಟಿಗೆ, ಸನ್ ೧೮೮೩ನೇ ಇಸವಿಯ ಭೂಮಿಯ ಸುಧಾರಣೆಯನ್ನು ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟು ಎಂದೆನ್ನಬಹುದು.

ಸ್ಥಾನಿಕ ವ್ಯಾಪ್ತಿ. ಪ್ರಾರಂಭ.—(೨) ಇದು ಇಡೀ ಬ್ರಿಟಿಶ ಹಿಂದುಸ್ಥಾನಕ್ಕೆ ಲಾಗೂ ಅದೆ; ಆದರೆ, ಸ್ಥಾನಿಕ ಸರಕಾರವು, ಸ್ಥಾನಿಕ ಸರಕಾರೀ ಗ್ಯಾಝೇಟಿನಲ್ಲಿ ಜಾಹೀರನಾಮೆ ಕೊಟ್ಟು, ಈ ಬಗ್ಗೆ ನೇಮಿಸಬಹುದಾದ ತಾರೀಖಿನ ವರೆಗೆ, ಅದು ಬ್ರಿಟಿಶ ಹಿಂದುಸ್ಥಾನದ ಯಾವದೇ ಭಾಗದಲ್ಲಿ ಅಮಲಿನಲ್ಲಿ ಬರಲಿಕ್ಕಿಲ್ಲ.

೨. ಸನ್ ೧೮೭೧ನೇ ಇಸವಿಯ ೨೬ನೇ ಆಕ್ಟು ಮತ್ತು ಸನ್ ೧೮೭೬ನೇ ಇಸವಿಯ ೨೧ನೇ ಆಕ್ಟು ರದ್ದ ಮಾಡಲ್ಪಟ್ಟವೆ.—(೧) ಸನ್ ೧೮೭೧ನೇ ಇಸವಿಯ ಭೂಮಿಯನ್ನು ಸುಧಾರಿಸುವ ವಿಷಯದ ಆಕ್ಟು ಮತ್ತು ಸನ್ ೧೮೭೬ನೇ ಇಸವಿಯ ೨೧ನೇ ಆಕ್ಟು (ಸನ್ ೧೮೭೧ನೇ ಇಸವಿಯ ಭೂಮಿಯನ್ನು ಸುಧಾರಿಸುವ ವಿಷಯದ ಆಕ್ಟನ್ನು ಸುಧಾರಿಸುವ ಆಕ್ಟು) ಈ ಆಕ್ಟುಗಳನ್ನು, ಈ ಆಕ್ಟು ಅಮಲಿನಲ್ಲಿ ಬರುವ ಮುಂಚೆ ಕೊಡಲ್ಪಟ್ಟ ಮುಂಗಡ ರಕಮುಗಳನ್ನು ವಸೂಲು ಮಾಡುವ ಸಂಗತಿಯನ್ನು ಹೊರ್ತು

ಇಂಥ ಮುಂಗಡ ರಕಮುಗಳ ಸಂಬಂಧದಿಂದ ಸರಕಾರಕ್ಕೆ ತಗಲಿದ ವೆಚ್ಚಗಳನ್ನು ವಸೂಲು ಮಾಡುವ ಸಂಗತಿಯನ್ನು ಹೊರ್ತುಪಡಿಸಿ, ರದ್ದ ಮಾಡತಕ್ಕದ್ದು.

(೨) ಈ ಆಕ್ಟು ಅಮಲಿನಲ್ಲಿ ಬರುವ ಮುಂಚೆ ಪಾಸ ಮಾಡಿದಂಥ ಅಥವಾ ಹೊರಡಿಸಿದಂಥ ಯಾವದಾದರೂ ಆಕ್ಟಿನಲ್ಲಿ, ಕಾಯದೆಯಲ್ಲಿ ಅಥವಾ ಜಾಹೀರನಾಮೆಯಲ್ಲಿ ಆ ಆಕ್ಟುಗಳ ಪೈಕಿ ಯಾವದಾದರೂ ಆಕ್ಟಿಗೆ ಉಲ್ಲೇಖ ಮಾಡಲ್ಪಟ್ಟಿದ್ದರೆ, ಸದರಿ ಉಲ್ಲೇಖವು, ಶಕ್ಯವಿರುವಷ್ಟರ ಮಟ್ಟಿಗೆ, ಈ ಆಕ್ಟಿಗೆ ಅಥವಾ ಈ ಆಕ್ಟಿನ ತತ್ಸಮಾನವಾದ ಭಾಗಕ್ಕೆ ಲಾಗು ಇರುವಂತೆ ಓದಲ್ಪಡತಕ್ಕದ್ದು.

೩. "ಕಲೆಕ್ಟರ" ಎಂಬದರ ವ್ಯಾಖ್ಯೆ.—ಈ ಆಕ್ಟಿನಲ್ಲಿ "ಕಲೆಕ್ಟರನು" ಅಂದರೆ, ಯಾವದೊಂದು ಜಿಲ್ಹೆಯ ಭೂಮಿಯ ಮಹಸೂಲಿನ ಕಲೆಕ್ಟರನು ಅಥವಾ ಡೆಪ್ಯುಟಿ ಕಮಿಶನರನು, ಅಥವಾ ಯಾವ ಅಮಲದಾರನಿಗೆ ಸ್ಥಾನಿಕ ಸರಕಾರದವರು ಈ ಆಕ್ಟಿನನ್ವಯ ಕಲೆಕ್ಟರನ ಕೆಲಸಗಳನ್ನು ಮಾಡುವದಕ್ಕಾಗಿ ಹೆಸರಿನಿಂದ ಅಥವಾ ಆತನ ಹುದ್ದೆಯ ನಾತೆಯಿಂದ ಅಧಿಕಾರ ಕೊಡುವರೋ ಅಂಥ ಯಾವನಾದರೂ ಅಮಲದಾರನು ಎಂದು ಅರ್ಥವಾಗುತ್ತದೆ.

೪. ಯಾವ ಕಾರಣಗಳಿಗೋಸ್ಕರ ಈ ಆಕ್ಟಿನನ್ವಯ ಸಾಲವಾಗಿ ಹಣ ಕೊಡಬಹುದೋ ಆ ಕಾರಣಗಳು.—(೧) ಯಾವದಾದರೂ ಸುಧಾರಣೆಯನ್ನು ಮಾಡುವ ಕಾರಣದ ದೆಸೆಯಿಂದ, ಆ ಸುಧಾರಣೆಯನ್ನು ಮಾಡುವ ಹಕ್ಕು ಇರುವ ಯಾವನಾದರೂ ಮನುಷ್ಯನಿಗೆ ಅಥವಾ ಆ ಮನುಷ್ಯನ ಸಮ್ಮತಿಯಿಂದ ಯಾವನಾದರೂ ಎರಡನೇ ಮನುಷ್ಯನಿಗೆ, ಸ್ಥಾನಿಕ ಸರಕಾರದವರ ಕಡೆಯಿಂದ ಈ ಬಾಬತಿನಲ್ಲಿ ಯಾವ ಅಮಲದಾರನಿಗೆ ಆಗಾಗ್ಯೆ ಅಧಿಕಾರ ಕೊಡಲ್ಪಡಬಹುದೋ ಆ ಅಮಲದಾರನು, ೧೦ನೇ ಕಲಮಿನನ್ವಯ ಮಾಡಲ್ಪಡಬಹುದಾದ ಕಾನೂನುಗಳಿಗೊಳಪಟ್ಟು, ಈ ಆಕ್ಟಿನನ್ವಯ ಸಾಲವಾಗಿ ಹಣ ಕೊಡಬಹುದು.

(೨) "ಸುಧಾರಣೆಯು" ಅಂದರೆ, ಯಾವ ಕೆಲಸದ ಮೂಲಕ ಭೂಮಿಯು ಬಾಡಿಗೆಯ ಬೆಲೆಯು ಬೆಳೆಯುತ್ತದೋ ಅಂಥ ಯಾವದಾದರೂ ಕೆಲಸವು ಎಂದರ್ಥವಾಗುತ್ತದೆ ಮತ್ತು ಅದರಲ್ಲಿ, ಕೆಳಗೆ ಬರೆದ ಸಂಗತಿಗಳ ಸಮಾವೇಶವಾಗುತ್ತದೆ, ಅಂದರೆ:—

(ಅ) ಹೊಲದ ಕೆಲಸದ ಸಲುವಾಗಿ ಅಥವಾ ಹೊಲದ ಕೆಲಸದ ಬಗ್ಗೆ ಕೆಲಸಕ್ಕೆ ಹಚ್ಚಲಾದ ಮನುಷ್ಯರ ಮತ್ತು ದನಗಳ ಉಪಯೋಗದ ಸಲುವಾಗಿ ನೀರನ್ನು ಸಂಗ್ರಹಿಸುವದಕ್ಕಾಗಿ, ಪೂರೈಸುವದಕ್ಕಾಗಿ ಅಥವಾ ಹಂಚಿಕೊಡುವದಕ್ಕಾಗಿ ಬಾವಿಗಳನ್ನು, ಕೆರೆಗಳನ್ನು ಮತ್ತು ಇತರ ಕೆಲಸಗಳನ್ನು ಕಟ್ಟೋಣ;

(ಬ) ನೀರಾವರಿಯ ಸಲುವಾಗಿ ಭೂಮಿಯನ್ನು ತಯಾರ ಮಾಡೋಣ;

(ಕ) ಹೊಲದ ಕೆಲಸದ ಸಲುವಾಗಿ ಉಪಯೋಗಿಸಿದ ಭೂಮಿಯೊಳಗಿನ ಅಥವಾ ಸಾಗುವಳಿ ಮಾಡಲ್ಪಡಬಹುದಾದ ಬೀಳುಭೂಮಿಯೊಳಗಿನ ನೀರು ತೆಗೆದುಹಾಕೋಣ, ಅದನ್ನು, ನದಿಗಳ ಅಥವಾ ಬೇರೆ ಜಲಾಶಯಗಳ ಕೆಲಭಾಗವನ್ನು ಮಣ್ಣು ಹಾಕಿ ಹುಗಿದು, ಸಂಪಾದಿಸೋಣ, ಅಥವಾ ನೀರಿನ ಪೂರಿನಿಂದ ಅಥವಾ ಸವೆಯೋಣದರಿಂದ ಅಥವಾ ನೀರಿನಿಂದ ಆಗುವ ಇತರ ಲುಕಸಾನದಿಂದ ಕಾಪಾಡೋಣ;

(ಡ) ಹೊಲದ ಕೆಲಸದ ಸಲುವಾಗಿ, ನೀರಿದ್ದ ಭಾಗವನ್ನು ಮಣ್ಣು ಹಾಕಿ ಹುಗಿದು ಭೂಮಿಯನ್ನು ಸಂಪಾದಿಸೋಣ, ಭೂಮಿಯನ್ನು ಸಾಫ ಮಾಡೋಣ, ಅದಕ್ಕೆ ಆವಾರ ಹಾಕೋಣ, ಅಥವಾ ಅದರಲ್ಲಿ ಶಾಶ್ವತ ವಾದ ಕಾಯಮು ಸುಧಾರಣೆಯನ್ನು ಮಾಡೋಣ;

(ಇ) ಮೇಲೆ ಹೇಳಿದ ಕೆಲಸಗಳ ಪೈಕಿ ಯಾವವಾದರೂ ಕೆಲಸಗಳನ್ನು ಪುನಃ ಚಾಲೂ ಮಾಡೋಣ, ಅಥವಾ ಪುನಃ ಕಟ್ಟೋಣ, ಅಥವಾ ಅವುಗಳಲ್ಲಿ ಹೆಚ್ಚುಕಡಿಮೆ ಮಾಡೋಣ ಅಥವಾ ಅವುಗಳನ್ನು ಬೆಳಿಸೋಣ; ಮತ್ತು

(ಫ) ಸ್ಥಾನಿಕ ಸರಕಾರದವರು, ಸ್ಥಾನಿಕ ಸರಕಾರೀ ಗ್ಯಾಝೇಟಿನಲ್ಲಿ ಜಾಹೀರ ನಾಮೆ ಕೊಟ್ಟು, ಯಾವ ಕೆಲಸಗಳನ್ನು, ಈ ಆಕ್ಟಿನ ಕಾರಣಗಳ ಸಲು ವಾಗಿ, ಸುಧಾರಣೆಗಳೆಂದು ಆಯಾ ಕಾಲದಲ್ಲಿ ಜಾಹೀರ ಮಾಡುವರೋ ಅಂಥ ಇತರ ಕೆಲಸಗಳು.

೫. ಸಾಲಗಳ ದೆಸೆಯಿಂದ ಕೊಟ್ಟಂಥ ಅರ್ಜಿಗಳ ತಜವೀಜು ಮಾಡುವ ರೀತಿಯು.—(೧) ಈ ಆಕ್ಟಿನನ್ವಯ ಸಾಲಗಳ ದೆಸೆಯಿಂದ ಅರ್ಜಿಯು ಮಾಡಲ್ಪ ಟ್ಟಾಗ್ಗೆ, ಯಾವ ಅಮಲದಾರನಿಗೆ ಆ ಅರ್ಜಿಯನ್ನು ಮಾಡಿರುವದೋ ಆ ಅಮಲದಾರ ನಿಗೆ ಆ ಅರ್ಜಿಯ ವಿಷಯವಾಗಿ ಎಲ್ಲ ಜನರಿಗೆ ನೋಟೀಸು ಕೊಡುವದು ಯೋಗ್ಯವ ದೆಂದು ಕಂಡರೆ ಸದರಿ ಅಮಲದಾರನು, ಯಾವ ರೀತಿಯನ್ನು ಸ್ಥಾನಿಕ ಸರಕಾರವು ಆಯಾ ಕಾಲದಲ್ಲಿ ಫರ್ಮಾಯಿಸುವದೋ ಆ ರೀತಿಯಿಂದ, ಆ ಸಾಲ ಕೊಡುವದಕ್ಕೆ ಹರಕತು ಹೇಳುವ ಜನರಿಗೆ ಗೊತ್ತುಪಡಿಸಿದ ಕಾಲದಲ್ಲಿ ಮತ್ತು ಸ್ಥಳದಲ್ಲಿ ಹಾಜರಾಗಿ ತಮ್ಮ ಹರಕತುಗಳನ್ನು ಹೇಳಬೇಕು ಎಂಬ ಮಜಕೂರಿನ ಒಂದು ನೋಟೀಸನ್ನು ಪ್ರಸಿದ್ಧಪಡಿಸಬಹುದು.

(೨) ಪೋಟ-ಕಲಮು (೧)ರನ್ವಯ ಕಳುಹಿಸಲ್ಪಟ್ಟ ಪ್ರತಿಯೊಂದು ಹರಕತಿನ ವಿಷಯುಕ್ಕೆ ಆ ಅಮಲದಾರನು ವಿಚಾರ ಮಾಡಿ, ಅದನ್ನು ಕಬೂಲು ಮಾಡಿದ ಅಥವಾ ತಿರಸ್ಕರಿಸಿದ ಬಗ್ಗೆ ಲೇಖೀ ಹುಕುಮನ್ನು ಮಾಡಬೇಕು:

ಆದರೆ ಗೊತ್ತುಪಡಿಸುವದೇನಂದರೆ, ಯಾವಾಗ್ಯೆ ಹರಕತಿನಿಂದ ಉಪಸ್ಥಿತವಾದ ಪ್ರಶ್ನವು ದಿವಾಣೀ ಕೋರ್ಟಿನಿಂದಲ್ಲದೆ ಇತರ ರೀತಿಯಿಂದ ಸಮಾಧಾನಕರವಾಗಿ ನಿರ್ಣಯಿಸಲ್ಪಡಲಾರದೆಂದು ಸದರಿ ಅಮಲದಾರನು ಅಭಿಪ್ರಾಯಪಡುವನೋ ಆಗ್ಯೆ, ಆ ಪ್ರಶ್ನದ ನಿಕಾಲೆಯಾಗುವ ವರೆಗೆ ಆ ಅರ್ಜಿಯ ಮೇಲಿಂದ ತಾನು ಕೆಲಸ ನಡಿಸುವ ದನ್ನು ಅವನು ಮುಂದೆ ಹಾಕಬೇಕು.

೬. ಸಾಲಗಳನ್ನು ತಿರುಗಿ ಕೊಡುವ ಮುದ್ದತು.—(೧) ಈ ಆಕ್ಟಿನನ್ವಯ ಕೊಟ್ಟಂಥ ಪ್ರತಿಯೊಂದು ಸಾಲವು, ಅದನ್ನು ನಿಜವಾಗಿ ಕೊಟ್ಟ ತಾರೀಖಿನಿಂದ, ಅಥವಾ ಅದನ್ನು ಹಪ್ತೆಗಳಿಂದ ಕೊಟ್ಟಿದ್ದರೆ, ಕಡೆಯ ಹಪ್ತೆಯನ್ನು ನಿಜವಾಗಿ ಕೊಟ್ಟ ತಾರೀಖಿನಿಂದ ಯಾವ ಮುದ್ದತು, ಆಯಾ ಕಾಲದಲ್ಲಿ ಈ ಆಕ್ಟಿನನ್ವಯ ಮಾಡಲ್ಪಟ್ಟ ಕಾನೂನುಗಳ ಮೂಲಕ ನಿರ್ಣಯಿಸಲ್ಪಡುವದೋ ಆ ಮುದತಿನಲ್ಲಿ (ಜಾಮೀನ [illegible] ಅಥವಾ ಬೇರೆ ರೀತಿಯಾಗಿ) ಹಪ್ತೆಗಳಿಂದ ತಿರುಗಿ ಕೊಡಲ್ಪಡುವಂತೆ [illegible].

(೨) ಮೇಲಿನಂತೆ ನಿರ್ಣಯಿಸಿದ ಮುದತು ಸಾಮಾನ್ಯವಾಗಿ ಮೂವತ್ತೈದು ವರ್ಷಗಳಿಗಿಂತ ಹೆಚ್ಚಿರಬಾರದು.

(೩) ಸ್ಥಾನಿಕ ಸರಕಾರವು ಸದರಿ ಮುದತನ್ನು ನಿರ್ಣಯಿಸುವ ವಿಷಯದ ಕಾನೂನುಗಳನ್ನು ಮಾಡುವಾಗ್ಗೆ ಆ ಮುದತು ಮೂವತ್ತೈದು ವರ್ಷಗಳ ವರೆಗಿರಬೇಕೋ ಅಥವಾ ಅದು ಮೂವತ್ತೈದು ವರ್ಷಗಳಿಗಿಂತ ಹೆಚ್ಚು ಇರಬೇಕೋ ಎಂಬದನ್ನು ವಿಚಾರ ಮಾಡುವಾಗ, ಯಾವ ಕೆಲಸದ ಸಲುವಾಗಿ ಸಾಲ ಕೊಟ್ಟಿರುವದೋ ಆ ಕೆಲಸದ ಬಾಳಿಕೆಯ ಕಡೆಗೆ ಹಾಗೂ ಯಾವ ಪೀಳಿಗೆಯ ಮನುಷ್ಯರಿಗೆ ಆ ಕೆಲಸದಿಂದ ಪ್ರತ್ಯಕ್ಷ ಲಾಭ ಆಗುವದೋ ಆ ಪೀಳಿಗೆಯ ಜನರು ಆ ಕೆಲಸದ ಖರ್ಚು ಕೊಡುವದು ಇಷ್ಟವೋ ಹ್ಯಾಗೆ ಎಂಬದರ ಕಡೆಗೆ ಲಕ್ಷ್ಯವನ್ನು ಕೊಡಬೇಕು.

೭. ಸಾಲವಾಗಿ ಕೊಟ್ಟ ಹಣವನ್ನು ವಸೂಲು ಮಾಡೋಣ.—(೧) ೧೦ನೇ ಕಲಮಿನನ್ವಯ ಮಾಡಲ್ಪಡಬಹುದಾದ ಕಾನೂನುಗಳಿಗೆ ಒಳಪಟ್ಟು, ಈ ಆಕ್ಟಿನನ್ವಯ ಕೊಡಲ್ಪಟ್ಟ ಎಲ್ಲ ಸಾಲಗಳು, ಅವುಗಳ ಮೇಲೆ ಯಾವದೇ ಬಡ್ಡಿಯನ್ನು ತೆಗೆದುಕೊಳ್ಳತಕ್ಕದ್ದು ಇದ್ದರೆ, ಅಂಥ ಯಾವತ್ತು ಬಡ್ಡಿಯು, ಮತ್ತು ಆ ಹಣವನ್ನು ಕೊಡುವಲ್ಲಿ ಯಾವದೇ ಖರ್ಚು ಆಗಿದ್ದರೆ ಅಂಥ ಯಾವತ್ತು ಖರ್ಚು, ಅವು ಸಲ್ಲತಕ್ಕಂಥವಾದಾಗ, ಈ ಕೆಳಗಿನ ಯಾವತ್ತು ಅಥವಾ ಯಾವದೇ ರೀತಿಗಳಿಂದ ಕಲೆಕ್ಟರನಿಂದ ವಸೂಲು ಮಾಡಲ್ಪಡಬೇಕು, ಅಂದರೆ :—

(ಅ) ಸಾಲಗಾರನಿಂದ—ಅವುಗಳು ಅವನ ಕಡೆಯಿಂದ ಬರತಕ್ಕ ಭೂಮಿಯ ಮಹಸೂಲಿನ ಬಾಕಿ ಇದ್ದಂತೆ;

(ಬ) ಅವನ ಜಾಮೀನದಾರನು ಯಾವನಾದರೂ ಇದ್ದರೆ ಅವನ ಕಡೆಯಿಂದ—ಅವುಗಳು ಅವನ ಕಡೆಯಿಂದ ಬರತಕ್ಕ ಭೂಮಿಯ ಮಹಸೂಲಿನ ಬಾಕಿ ಇದ್ದಂತೆ;

(ಕ) ಯಾವ ಭೂಮಿಗೆ ಲಾಭವಾಗಬೇಕಂದು ಇಂಥ ಸಾಲವನ್ನು ಕೊಟ್ಟಿತ್ತೋ ಆ ಭೂಮಿಯಿಂದ—ಅವುಗಳು ಆ ಭೂಮಿಯ ಸಂಬಂಧದಿಂದ ಬರತಕ್ಕ ಭೂಮಿಯ ಮಹಸೂಲಿನ ಬಾಕಿ ಇದ್ದಂತೆ;

(ಡ) ಪುರವಣಿಯ ತಾರಣವನ್ನು ಕೊಟ್ಟಿದ್ದರೆ ಆ ತಾರಣದೊಳಗಿನ ಆಸ್ತಿಯಿಂದ—ಯಾವ ಭೂಮಿಯ ಬಗ್ಗೆ ಭೂಮಿಯ ಮಹಸೂಲು ಕೊಡತಕ್ಕದ್ದಿರುವದೋ ಆ ಭೂಮಿಯ ಹೊರ್ತು ಇತರ ಸ್ಥಾವರ ಆಸ್ತಿಯನ್ನು ಮಾರಿ ಭೂಮಿಯ ಮಹಸೂಲು ವಸೂಲು ಮಾಡುವ ರೀತಿಯಂತೆ:

ಆದರೆ ಗೊತ್ತುಪಡಿಸುವದೇನಂದರೆ, ಯಾವದಾದರೂ ಭೂಮಿಯ ಸಂಬಂಧದಿಂದ (ಕ) ರಕಮಿನನ್ವಯ ನಡಿಸಿದ ಕೆಲಸದ ಮೇಲಿಂದ ಸದರಿ ಸಾಲವನ್ನು ಕೊಡುವ ಹುಕುಮಿನ ತಾರೀಖಿನ ಮುಂಚೆ, ಆ ಭೂಮಿಯ ಬಗ್ಗೆ ಯಾವನು ಸಾಲವನ್ನು ಪಡೆದಿದ್ದನೋ ಅವನ ಹಿತಸಂಬಂಧದ ಹೊರ್ತು ಇತರ ಯಾವದಾದರೂ ಹಿತಸಂಬಂಧವಿದ್ದರೆ ಆ ಹಿತಸಂಬಂಧಕ್ಕೆ, ಮತ್ತು ಆ ಹಿತಸಂಬಂಧವನ್ನು ಒತ್ತೆಗೆ ಇಟ್ಟುಕೊಂಡವರ ಅಥವಾ ಆ ಹಿತಸಂಬಂಧದ ಮೇಲೆ ಯಾವ ಮನುಷ್ಯರ ಬೇಡುವಿಕೆಗಳಿರುವವೋ ಆ ಮನುಷ್ಯರ ಹಿತಸಂಬಂಧಕ್ಕೆ, ಮತ್ತು ಬೇರೊಬ್ಬ ಮನುಷ್ಯನ

ಸಮ್ಮತಿಯಿಂದ ಅನೇ ಕಲಮಿನನ್ವಯ ಸಾಲಕ್ಕೆ ಕೊಡಲ್ಪಟ್ಟಾಗ್ಗೆ, ಆ ಬೇರೊಬ್ಬ ಮನುಷ್ಯನ ಹಿತಸಂಬಂಧಕ್ಕೆ ಮತ್ತು ಆ ಹಿತಸಂಬಂಧವನ್ನು ಒತ್ತೆಗೆ ಇಟ್ಟುಕೊಂಡವರ ಅಥವಾ ಆ ಹಿತಸಂಬಂಧದ ಮೇಲೆ ಯಾವ ಮನುಷ್ಯರ ಬೇಡುವಿಕೆಗಳು ಇರುವವೋ ಆ ಮನುಷ್ಯರ ಹಿತಸಂಬಂಧಕ್ಕೆ ಬಾಧಕ ಬರುತ್ತದೆಂದು ತಿಳಿಯಬಾರದು.

(೨) ಇಂಥ ಯಾವದೊಂದು ಸಾಲದ ಮುದ್ದಲು ಅಥವಾ ಖರ್ಚಿನ ಬಗ್ಗೆ ಬರತಕ್ಕದ್ದಾದ ಯಾವದಾದರೊಂದು ರಕಮು ಬಾಕಿಯಿದ್ದಾಗ ಅಥವಾ ಯಾವದಾದರೂ ಪುರವಣಿಯು ಬಾಕಿಯಿರುವಾಗ ಭೂಮಿಯ ಮಾಲಿಕನು ಬೇರೆಯವರಿಗೆ ಕೊಟ್ಟಿದ್ದಾಗ್ಗೆ ಅಥವಾ ಪೋಟ-ಕುಳನು (ಗೇಣಿದಾರನು) ಒತ್ತೆದಾರನು ಕಬಜೆದಾರನ ಕಡೆಯಿಂದ ಅಥವಾ ಇಂಥ ಯಾವದಾದರೂ ಅನ್ಯರಿಂದ ವಸೂಲು ಮಾಡಿದ್ದಾಗ್ಗೆ, ಪ್ರಸಂಗವಿದ್ದಂತೆ, ಆ ಕಬಜೆದಾರನು ಅಥವಾ ಆ ಭೂಮಿಯ ಮಾಲಿಕನು ಅರ್ಜಿಯನ್ನು ಮಾಡಲಾಗಿ, ಆ ರಕಮನ್ನು ಅವನ ಕಡೆಯಿಂದ ಕಲೆಕ್ಟರನು, ಸಾಲ ತೆಗೆದುಕೊಂಡವನ ಕಡೆಯಿಂದ ಅಥವಾ ಯಾವ ಭೂಮಿಗೆ ಲಾಭವಾಗಬೇಕೆಂದು ಸಾಲವನ್ನು ಕೊಟ್ಟಿತ್ತೋ ಆ ಭೂಮಿಯಿಂದ ಪೋಟ-ಕಲಮು (೧)ರಲ್ಲಿ ಗೊತ್ತುಪಡಿಸಿದ ರೀತಿಯಿಂದ ವಸೂಲು ಮಾಡಬೇಕು.

(೩) ಈ ಕಲಮಿನನ್ವಯ ವಸೂಲು ಮಾಡುವ ಕಲೆಕ್ಟರನು, ಈ ಕಲಮಿನ ಮೇಲಿಂದ ವಸೂಲು ಮಾಡಲ್ಪಟ್ಟ ಬಾಕಿಗಳ ಬೇರೆಬೇರೆ ರೀತಿಗಳನ್ನು ಯಾವ ಕ್ರಮದಿಂದ ಅನುಸರಿಸುವನೋ ಆ ಕ್ರಮವನ್ನು ನಿರ್ಣಯಿಸುವದು ಅವನ ಮರ್ಜಿಯನ್ನನುಸರಿಸತಕ್ಕದ್ದು.

೮. ಸಾಲಕೊಡುವ ವಿಷಯದ ಹುಕುಮು ಕೆಲವು ಮಾತುಗಳಲ್ಲಿ ನಿರ್ಣಾಯಕವದೆ.—ಯಾತರಲ್ಲಿ ಹೇಳಿದ ಮನುಷ್ಯನಿಗೆ ಅಥವಾ ಅವನ ಸಮ್ಮತಿಯಿಂದ, ಅದರಲ್ಲಿ ವರ್ಣಿಸಿದ ಕೆಲಸವನ್ನು ಮಾಡುವ ಕಾರಣದ್ದಾಗಿ, ಅದರಲ್ಲಿ ಹೇಳಿದ ಭೂಮಿಯ ಲಾಭಕ್ಕಾಗಿ [illegible] ಈ ಆಕ್ಟಿನನ್ವಯ ಸಾಲಗಳನ್ನು ಕೊಡುವದಕ್ಕೆ ಅಧಿಕಾರ ಹೊಂದಿದ ಅಂಮಲದಾರನ ಸಹಿಯುಳ್ಳ ಯಾವದೊಂದು ಲೇಖಿ ಹುಕುಮು, ಆ ಆಕ್ಟಿನ ಕಾರಣಗಳ ಉದ್ದೇಶಗಳ, ಈ ಕೆಳಗಿನ ವಿಷಯಗಳ ಬಗ್ಗೆ ನಿರ್ಣಾಯಕ ಪುರಾವೆಯಾಗುವದು—

(ಅ) ವರ್ಣಿಸಿದ ಕೆಲಸವು ಈ ಆಕ್ಟಿನ ಅರ್ಥದ ಪ್ರಕಾರ ಸುಧಾರಣೆಯಾಗಿರುತ್ತದೆ;

(ಬ) ಅದರಲ್ಲಿ ಹೇಳಿದ ಮನುಷ್ಯನಿಗೆ ಹುಕುಮಿನ ತಾರೀಖಿಗೆ ಇಂಥ ಸುಧಾರಣೆಯನ್ನು ಮಾಡಲಿಕ್ಕೆ ಹಕ್ಕು ಇತ್ತು; ಮತ್ತು

(ಕ) ಸದರಿ ಸುಧಾರಣೆಯು ಸದರಿ ನಮೂದಿಸಿದ ಭೂಮಿಗೆ ಹಿತ ಮಾಡುವಂಥಾದ್ದಿರುತ್ತದೆ.

೯. ಸಂಯುಕ್ತ ಸಾಲಗಾರರೊಳಗಿನ ಪರಸ್ಪರ ಪಾತ್ರತೆಯು.—ಗ್ರಾಮದ ಒಂದು ಮಂಡಳಿಯ ಜನರಿಗೆ ಅಥವಾ ಯಾರಾದರೂ ಬೇರೆ ಜನರಿಗೆ ಈ ಆಕ್ಟಿನನ್ವಯ

ಸಾಲದ ಸಂಬಂಧದಿಂದ ಕೊಡತಕ್ಕ ಯಾವತ್ತು ರಕಮನ್ನು ಕೊಡುವ ಬಗ್ಗೆ ಸರಕಾರಕ್ಕೆ ಅವರೆಲ್ಲರು ಒಟ್ಟಾಗಿ ಅಥವಾ ಬೇರೆಬೇರೆಯಾಗಿ ಬದ್ಧರಾಗಿರುತ್ತಾರೆಂಬ ಶರ್ತುಗಳ ಮೇಲೆ, ಸಾಲ ಕೊಟ್ಟಿದ್ದಾಗ್ಗೆ, ಮತ್ತು ಆ ರಕಮಿನ ಎಷ್ಟು ಭಾಗವನ್ನು ತಮ್ಮೊಳಗಿನ ಪ್ರತಿಯೊಬ್ಬನು ಕೊಡುವದಕ್ಕೆ ಬದ್ಧನಿರುವನೋ ಆ ಭಾಗವನ್ನು ತೋರಿಸುವ ಒಂದು ಪತ್ರಕವನ್ನು ಸಾಲ ಕೊಡುವ ವಿಷಯದ ಹುಕುಮಿನ ಮೇಲೆ ಬರೆದು, ಅದರ ಮೇಲೆ, ಅವರ ಪೈಕಿ ಪ್ರತಿಯೊಬ್ಬನು ಹಾಗೂ ಹುಕುಮು ಮಾಡುವ ಅಮಲದಾರನು ಸಹಿ ಮಾಡಿದ್ದಾಗ್ಗೆ, ಆ ಪತ್ರಕವು, ಆ ರಕಮಿನ ಆ ಭಾಗವನ್ನು ಕೊಡುವದಕ್ಕೆ ಅವರಲ್ಲಿ ಪ್ರತಿಯೊಬ್ಬ ಮನುಷ್ಯನು ತಮ್ಮತಮ್ಮೊಳಗೆ ಬದ್ಧನಾಗಿರುವ ಬಗ್ಗೆ ನಿರ್ಣಾಯಕ ಪುರಾವೆಯಾಗುವದು.

೧೦. ಕಾನೂನುಗಳನ್ನು ಮಾಡುವ ಅಧಿಕಾರ.—ಸ್ಥಾನಿಕ ಸರಕಾರವು, ಕೆಳಗೆ ಬರೆದ ಸಂಗತಿಗಳ ಬಗ್ಗೆ ಠರಾವು ಮಾಡುವದರ ಡಿಸೆಯಿಂದ ಈ ಆಕ್ಟಿಗೆ ಅನುಸಾರವಾಗಿರುವಂಥ ಕಾನೂನುಗಳನ್ನು, ಸ್ಥಾನಿಕ ಸರಕಾರೀ ಗ್ಯಾಝೇಟಿನಲ್ಲಿ ಜಾಹೀರನಾಮೆ ಪ್ರಸಿದ್ಧಪಡಿಸಿ, ಆಯಾ ವೇಳೆಯಲ್ಲಿ ಮಾಡಬಹುದು :—

(ಅ) ಸಾಲಗಳ ಬಗ್ಗೆ ಅರ್ಜಿಗಳನ್ನು ಮಾಡುವ ರೀತಿ;

(ಬ) ಯಾವ ಅಮಲದಾರರಿಗೆ ಸಾಲ ಕೊಡುವ ಅಧಿಕಾರವದೆಯೋ ಆ ಅಮಲದಾರರು;

(ಕ) ಸಾಲಗಳ ಬಗ್ಗೆ ಮಾಡಿದ ಅರ್ಜಿಗಳ ಸಂಬಂಧದ ಚೌಕಶಿಯನ್ನು ನಡಿಸುವ ರೀತಿ ಮತ್ತು ಆ ಚೌಕಶಿಗಳನ್ನು ನಡಿಸುವ ಅಮಲದಾರರಿಂದ ನಡಿಸಲ್ಪಡತಕ್ಕ ಅಧಿಕಾರಗಳು ;

(ಡ) ಸಾಲದ ಹಣವನ್ನು ಯೋಗ್ಯರೀತಿಯಿಂದ ವಿನಿಯೋಗಿಸುವದಕ್ಕೆ ಮತ್ತು ಅದನ್ನು ತಿರುಗಿ ಕೊಡುವದಕ್ಕೆ ತೆಗೆದುಕೊಳ್ಳತಕ್ಕ ತಾರಣದ ಪ್ರಕಾರವು, ಯಾವ ಬಡ್ಡಿಯಿಂದ ಸಾಲ ಕೊಡತಕ್ಕದ್ದೋ ಆ ಬಡ್ಡಿಯ ದರ, ಮತ್ತು ಸಾಲವನ್ನು ಯಾವ ಶರ್ತುಗಳಿಂದ ಕೊಡತಕ್ಕದ್ದೋ ಆ ಶರ್ತುಗಳು, ಮತ್ತು ಸಾಲ ಕೊಡುವ ರೀತಿ ಮತ್ತು ವೇಳೆ;

(ಇ) ಯಾವ ಕೆಲಸಗಳ ಸಲುವಾಗಿ ಸಾಲ ಕೊಟ್ಟಿರುವದೋ ಆ ಕೆಲಸಗಳ ತಪಾಸಣೆ;

(ಫ) ಕೊಟ್ಟ ಸಾಲವನ್ನು, ಅದರ ಮೇಲೆ ತೆಗೆದುಕೊಳ್ಳತಕ್ಕ ಬಡ್ಡಿಯನ್ನು ಮತ್ತು ಅದನ್ನು ಕೊಡುವಲ್ಲಿ ಆದಂಥ ಖರ್ಚನ್ನು ಎಷ್ಟು ಹಪ್ತೆಗಳಿಂದ ಹಾಗೂ ಯಾವ ರೀತಿಯಿಂದ ಕೊಡಬೇಕೋ ಆ ಹಪ್ತೆಗಳು ಹಾಗೂ ರೀತಿಯು;

(ಗ) ಸಾಲ ಕೊಟ್ಟ ಸಂಬಂಧದಿಂದ ಆದ ಖರ್ಚಿನ ಮತ್ತು ಆ ಬಗ್ಗೆ ಕೊಟ್ಟ ರಕಮುಗಳ ಲೆಕ್ಕ ಇಡುವ ಮತ್ತು ತಪಾಸಣೆ ಮಾಡುವ ರೀತಿಯು; ಮತ್ತು

(ಹ) ಈ ಆಕ್ಟನ್ನು ಅಮಲಿನಲ್ಲಿ ತರುವದಕ್ಕೆ ಸಂಬಂಧಿಸುವ ಇತರ ಯಾವತ್ತು ಸಂಗತಿಗಳು.

೧೧. **ಮಾಡಿದ ಸುಧಾರಣೆಗಳನ್ನು ಭೂಮಿಯ ಮಹಸೂಲಿನ ಆಕಾರವನ್ನು ಗೊತ್ತುಪಡಿಸುವಾಗ್ಗೆ ಎಣಿಸಬಾರದು.**—ಈ ಆಕ್ಟಿನನ್ವಯ ಕೊಟ್ಟ ಸಾಲದ ಸಹಾಯದಿಂದ ಭೂಮಿಯನ್ನು ಸುಧಾರಿಸಿದಾಗ್ಗೆ, ಹೀಗೆ ಸುಧಾರಿಸಿದ್ದರಿಂದ ಆದಂಥ ಬೆಲೆಯ ಬೆಳವಣಿಗೆಯನ್ನು ಆ ಭೂಮಿಯ ಮೇಲಿನ ಭೂಮಿಯ ಮಹಸೂಲಿನ ಆಕಾರಣೆಯನ್ನು ಪುನಃ ಮಾಡುವಾಗ ಲೆಕ್ಕದಲ್ಲಿ ಹಿಡಿಯಬಾರದು.

ಆದರೆ ಗೊತ್ತುಪಡಿಸುವದೇನೆಂದರೆ :—

(೧) ಬೀಳುಭೂಮಿಯನ್ನು ಸಾಧಿಸಿ ಅಥವಾ ನೀರು ಹಾಯದೆ ಇದ್ದಂಥ ದರದಿಂದ ಆಕಾರಿಸಿದ ಭೂಮಿಯನ್ನು ನೀರು ಹಾಯುವಂತೆ ಮಾಡಿ ಸುಧಾರಣೆಯುಂಟಾಗಿದ್ದರೆ, ಇಂಥ ಹೆಚ್ಚಾದ ಬೆಲೆಯನ್ನು, ಸ್ಥಾನಿಕ ಸರಕಾರವು ಮಾಡತಕ್ಕ ಕಾನೂನುಗಳಿಂದ ಗೊತ್ತುಪಡಿಸಲ್ಪಡಬಹುದಾದ ಮುದ್ದತು ತೀರಿದ ಬಳಿಕ ಲೆಕ್ಕದಲ್ಲಿ ಹಿಡಿಯಬಹುದು.

(೨) ಈ ಆಕ್ಟು ಪಾಸಾಗದೆ ಇದ್ದರೆ, ಭೂಮಿಯ ಯಾವ ಮಹಸೂಲಿನ ಆಕಾರಣೆಯ ವಿಷಯದಲ್ಲಿ ತಕರಾರು ಮಾಡಬಹುದಾಗಿತ್ತೋ ಅದರ ಹೊರ್ತು ಬೇರೆ ರೀತಿಯಿಂದ ತಕರಾರು ಮಾಡುವದಕ್ಕೆ ಯಾವ ಮನುಷ್ಯನಿಗೂ ಈ ಕಲಮಿನೊಳಗಿನ ಯಾವದೇ ಮಜಕೂರಿನ ಮೇಲಿಂದ ಹಕ್ಕು ಉಂಟಾಗಲಿಕ್ಕಿಲ್ಲ.

೧೨. [ಮುಂಬಯಿ ಪ್ರಾಂತಕ್ಕೆ ಅಥವಾ ಸಿಂಧಕ್ಕೆ ಹಾಗೂ ಇರುವದಿಲ್ಲ.]

# India Act No. XII of 1884.

## ಸನ್ ೧೮೮೪ನೇ ಇಸವಿಯ ಹಿಂದುಸ್ಥಾನದ ಆಕ್ಟು ನಂಬರು ೧೨.

(ಸನ್ ೧೯೦೬ನೇ ಇಸವಿಯ ೬ನೇ ಆಕ್ಟಿನಿಂದ ಮತ್ತು ಸನ್ ೧೯೧೪ನೇ ಇಸವಿಯ ೪ನೇ ಆಕ್ಟಿನಿಂದ ಸುಧಾರಿಸಲ್ಪಟ್ಟಂತೆ.)

ಹಿಂದುಸ್ಥಾನದ ಗವರ್ನರ ಜನರಲ ಇನ್ ಕೌನ್ಸಿಲರವರಿಂದ ಪಾಸ ಮಾಡಲ್ಪಟ್ಟದ್ದು.

(ಸನ್ ೧೮೮೪ನೇ ಇಸವಿಯ ಜುಲೈ ತಿಂಗಳ ೨೪ನೇ ತಾರೀಖಿನ ದಿವಸ ಗವರ್ನರ ಜನರಲ್ಲರವರ ಸಮ್ಮತಿಯು ದೊರೆಯಿತು.)

ಸನ್ ೧೮೭೯ನೇ ಇಸವಿಯ ಉತ್ತರ ಹಿಂದುಸ್ಥಾನದ ತಕಾವಿಯ ಬಾಬತಿನ ಆಕ್ಟನ್ನು ಸುಧಾರಿಸುವ ವಿಷಯದ ಹಾಗೂ ಅದರ ವ್ಯಾಪ್ತಿಯನ್ನು ಬೆಳಿಸುವವರ ವಿಷಯದ ಆಕ್ಟು.

ಸನ್ ೧೮೭೯ನೇ ಇಸವಿಯ ಉತ್ತರ ಹಿಂದುಸ್ಥಾನದ ತಕಾವಿಯ ಬಾಬತಿನ ಆಕ್ಟನ್ನು ಸುಧಾರಿಸುವ ಬಗ್ಗೆ ಮತ್ತು ಅದನ್ನು ಬ್ರಿಟಿಶ ಹಿಂದುಸ್ಥಾನದ ಯಾವದಾದರೂ ಭಾಗಕ್ಕೆ ಲಾಗೂ ಮಾಡುವ ಬಗ್ಗೆ ತಜವೀಜು ಮಾಡುವದು ಯೋಗ್ಯವದೆ; ಆದದರಿಂದ ಇದರ ಮೇಲಿಂದ ಈ ಕೆಳಗಿನಂತೆ ಗೊತ್ತುಪಡಿಸಿರುತ್ತದೆ.

೧. ಸಂಕ್ಷಿಪ್ತ ಹೆಸರು.—(೧) ಈ ಆಕ್ಟಿಗೆ, ಸನ್ ೧೮೮೪ನೇ ಇಸವಿಯ ಹೊಲ ಮಾಡುವವರ ಸಾಲಗಳ ಆಕ್ಟು ಎಂದು ಕರೆಯಬಹುದು; ಮತ್ತು

(೨) ಪ್ರಾರಂಭ.—ಅದು, ಸನ್ ೧೮೮೪ನೇ ಇಸವಿಯ ಆಗಸ್ಟ ತಿಂಗಳ ೧ನೇ ತಾರೀಖಿನ ದಿವಸ ಅಮಲಿನಲ್ಲಿ ಬರುವದು.

೨. ಸ್ಥಾನಿಕ ವ್ಯಾಪ್ತಿಯು.—(೧) ಈ ಕಲಮೂ ಮೂರನೇ ಕಲಮೂ ಇಡೀ ಬ್ರಿಟಿಶ ಹಿಂದುಸ್ಥಾನಕ್ಕೆ ಲಾಗೂ ಅವೆ;

(೨) ಈ ಆಕ್ಟಿನ ಉಳಿದ ಭಾಗವು, ಯಾವ ಪ್ರದೇಶಗಳ ರಾಜ್ಯಕಾರಭಾರವು ಮುಂಬಯಿಯ ಗವರ್ನರ ಇನ್ ಕೌನ್ಸಿಲ, ವಾಯುವ್ಯ ಪ್ರಾಂತದ ಹಾಗೂ ಪಂಜಾಬದ ಲೆಫ್ಟನೆಂಟ ಗವರ್ನರರು ಮತ್ತು ಅಯೋಧ್ಯಾ, ಮಧ್ಯಪ್ರಾಂತ, ಆಸಾಮ ಹಾಗೂ ಅಜಮೀರ ಇಲ್ಲಿಯ ಚೀಫ ಕಮಿಶನರ, ಇವರು ಅನುಕ್ರಮವಾಗಿ ನಡಿಸುತ್ತಾರೋ ಆ ಪ್ರದೇಶಗಳಿಗೆ ಮಾತ್ರ ಪ್ರಥಮತಃ ಲಾಗೂ ಅದೆ.

(೩) ಆದರೆ ಇತರ ಯಾವದಾದರೂ ಸ್ಥಾನಿಕ ಸರಕಾರಕ್ಕೆ, ಸರಕಾರೀ ಗ್ಯಾಝೇಟಿನಲ್ಲಿ ಜಾಹೀರನಾಮೆಯನ್ನು ಪ್ರಸಿದ್ಧಿಸಿ, ಈ ಆಕ್ಟಿನ ಉಳಿದ ಭಾಗವನ್ನು ತನ್ನ ತಾಬೆಯೊಳಗಿನ ಎಲ್ಲಾ ದೇಶಕ್ಕೆ ಅಥವಾ ಅದರ ಯಾವದಾದರೂ ಭಾಗಕ್ಕೆ ಕಾಲಕಾಲದಲ್ಲಿ ಲಾಗೂ ಮಾಡುವ ಅಧಿಕಾರವದೆ.

೩. ಸನ್ ೧೮೭೯ನೇ ಇಸವಿಯ ೧೦ನೇ ಆಕ್ಟನ್ನು ಮತ್ತು ಸನ್ ೧೮೮೩ನೇ ಇಸವಿಯ ೧೯ನೇ ಆಕ್ಟಿನ ೬ನೇ ಹಾಗೂ ೫ನೇ ಕಲಮುಗಳನ್ನು ರದ್ದ ಪಡಿ

ಸೋಣ.—(೧) ಯಾವ ತಾರೀಖಿಗೆ ಈ ಆಕ್ಟು ಅಮಲಿನಲ್ಲಿ ಬರುವದೋ ಆ ತಾರೀಖಿಗೆ ಹಾಗೂ ಆ ತಾರೀಖಿನಿಂದ, ಸನ್ ೧೮೭೯ನೇ ಇಸವಿಯ ಉತ್ತರ ಹಿಂದುಸ್ಥಾನದ ತಕಾವಿ ಬಾಬತಿನ ಆಕ್ಟು, ಮತ್ತು ಸನ್ ೧೮೭೬ನೇ ಇಸವಿಯ ಮುಂಬಯಿಯ ರೆವಿನ್ಯೂ ಹುಕುಮತ್ತಿನ ಆಕ್ಟಿನ ೪ನೇ ಮತ್ತು ೫ನೇ ಕಲಮುಗಳು, ಈ ಆಕ್ಟು ಅಮಲಿನಲ್ಲಿ ಬರುವ ಮುಂಚೆ ಕೊಡಲ್ಪಟ್ಟ ತಕಾವಿ ಮತ್ತು ಅದರ ಬಡ್ಡಿಯನ್ನು ವಸೂಲ ಮಾಡುವ ಸಂಬಂಧದಿಂದ ಮಾತ್ರ ಹೊರ್ತುಪಡಿಸಿ, ರದ್ದ ಆಗತಕ್ಕದ್ದು.

(೨) ಆ ಆಕ್ಟುಗಳನ್ವಯ ಮಾಡಿದ ಎಲ್ಲಾ ಕಾನೂನುಗಳು ಈ ಆಕ್ಟಿನನ್ವಯ ಮಾಡಲ್ಪಟ್ಟಿರುತ್ತವೆಂದು ತಿಳಿಯಬೇಕು.

೪. ಕಾನೂನುಗಳನ್ನು ಮಾಡುವ ಸ್ಥಾನಿಕ ಸರಕಾರದವರ ಅಧಿಕಾರ.—(೧) ಸ್ಥಾನಿಕ ಸರಕಾರದವರಿಗೆ, ಸಾಗುವಳಿ ಮಾಡಲಿಕ್ಕೆ ಯೋಗ್ಯವಿರುವ ಭೂಮಿಯ ಮಾಲಿಕರಿಗೆ ಹಾಗೂ ವಹಿವಾಟ ಮಾಡುವವರಿಗೆ, ಸಂಕಟ ಪರಿಹಾರ ಮಾಡುವದಕ್ಕಾಗಿ, ಬೀಜಗಳನ್ನಾಗಲಿ, ದನಗಳನ್ನಾಗಲಿ ಕೊಂಡುಕೊಳ್ಳುವದಕ್ಕಾಗಿ, ಅಥವಾ ಸನ್ ೧೮೮೩ನೇ ಇಸವಿಯ ಭೂಮಿಯ ಸುಧಾರಣೆಯನ್ನು ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟಿನಲ್ಲಿ ಹೇಳಲ್ಪಡದಿದ್ದ, ಹೊಲದ ಕೆಲಸಗಳಿಗೆ ಸಂಬಂಧವಿರುವ ಬೇರೆ ಯಾವದಾದರೂ ಕಾರಣಕ್ಕಾಗಿ ಸಾಲ ಕೊಡುವ ವಿಷಯದಲ್ಲಿ ಆಯಾ ಕಾಲದಲ್ಲಿ ಕಾನೂನುಗಳನ್ನು ಮಾಡುವ ಅಧಿಕಾರವಿದೆ.

(೨) ಇಂಥ ಎಲ್ಲ ಕಾನೂನುಗಳು ಸ್ಥಾನಿಕ ಸರಕಾರೀ ಗ್ಯಾಝೇಟಿನಲ್ಲಿ ಪ್ರಕಟಿಸಲ್ಪಡಬೇಕು.

೫. ಸಾಲಗಳನ್ನು ವಸೂಲು ಮಾಡೋಣ.—ಇಂಥ ಕಾನೂನುಗಳನ್ವಯ ಕೊಡಲ್ಪಟ್ಟ ಪ್ರತಿ ಒಂದು ಸಾಲವು, ಆ ಬಗ್ಗೆ ಯಾವದೇ ಬಡ್ಡಿಯು ತೆಗೆದುಕೊಳ್ಳಲ್ಪಡುತ್ತಿದ್ದರೆ, ಅಂಥ ಯಾವತ್ತು ಮತ್ತು ಅದನ್ನು ಕೊಡುವ ಸಂಬಂಧದಿಂದಲೂ ವಸೂಲ ಮಾಡುವ ಸಂಬಂಧದಿಂದಲೂ ಯಾವದೇ ಖರ್ಚು ಆಗಿದ್ದರೆ ಆ ಎಲ್ಲ ಖರ್ಚು, ಅವು ಸಲ್ಲತಕ್ಕಂಥವಾದಾಗ, ಯಾವ ಮನುಷ್ಯನಿಗೆ ಸಾಲವನ್ನು ಕೊಟ್ಟಿರುವದೋ ಅವನ ಕಡೆಯಿಂದ, ಅಥವಾ ಅದನ್ನು ತೀರಿಸುವದಕ್ಕಾಗಿ ಯಾವನು ಜಾಮೀನ ಆಗಿರುವನೋ ಆತನ ಕಡೆಯಿಂದ, ಇಂಥ ಸಾಲವನ್ನು ಯಾವ ಮನುಷ್ಯನಿಗೆ ಕೊಟ್ಟಿರುವದೋ ಆ ಮನುಷ್ಯನ ಕಡೆಯಿಂದ ಅಥವಾ ಅವನ ಜಾಮೀನದಾರನ ಕಡೆಯಿಂದ ಬರಬಹುದಾದ ಭೂಮಿಯ ಮಹಸೂಲಿನ ಬಾಕಿ ಇದ್ದಂತೆ ಅಥವಾ ಅವನ್ನು ವಸೂಲು ಮಾಡುವದರಲ್ಲಿ ಆದ ಖರ್ಚು ಇದ್ದಂತೆ, ವಸೂಲು ಮಾಡಲ್ಪಡತಕ್ಕದ್ದು.

೬. (ಭೂಮಿಯ ಸುಧಾರಣೆಯನ್ನು ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟಿನ ೭ನೇ ಕಲಮಿನಂತೆಯೇ ಇರುತ್ತದೆ.)

---

# ಪ್ರಸ್ತಾವನೆ.

ಈ ಕೈಪಿಡಿಯಲ್ಲಿರುವ ತತ್ವಗಳನ್ನು ಸಿಂಧಕ್ಕೆ ಲಾಗೂ ಮಾಡಿರುತ್ತದೆ, ಎಫ್. ೧೨೩–೧೭.

ಈ ಸಮಗ್ರ ವಿಷಯದ ಮೇಲಿನ ಒಂದು ಮಹತ್ವದ ಅವಲೋಕನವನ್ನು ಎಫ್. ೪೨೯–೦೫ ಇದರೊಡನೆ ಹಿಂದುಸ್ಥಾನ ಸರಕಾರದವರು ಪ್ರಸಿದ್ಧಿಸಿದ್ದರು, ಮತ್ತು ಅದನ್ನು, ಸನ್ ೧೯೦೫ನೇ ಇಸವಿಯ ಮುಂಬಯಿ ಸರಕಾರೀ ಗ್ಯಾಝೇಟಿನ ೧೬೫೬ರಿಂದ ೧೬೬೧ರ ವರೆಗಿನ ಪುಟಗಳಲ್ಲಿ (ಇಂಗ್ರಜಿಯಲ್ಲಿ) ಛಾಪಿಸಲಾಗಿತ್ತು.

ಈ ಆಕ್ಟುಗಳ ಆರ್ಥಿಕ ಉದ್ದೇಶವನ್ನು ಸ್ಪಷ್ಟ ಮಾಡುವದು ಅವಶ್ಯವಿರುತ್ತದೆ. ಸ್ಥಾನಿಕ ಸರಕಾರದವರು ಕೊಟ್ಟ ಸಾಲಗಳು, ಹೊಲ ಮಾಡುವವನಿಗೆ ದೊರೆಯುವ ಇತರ ಯಾವತ್ತು ಖಾಸಗಿ ಭಂಡವಾಳದಿಂದ ದೊರೆಯುವ ಸಹಾಯದ ಬದಲಾಗಿ ಇರಬೇಕೆಂದು ಎಂದಿಗೂ ಯೋಚಿಸಿರುವದಿಲ್ಲ. ಕೆಲವು ಕ್ಷೇತ್ರಗಳಲ್ಲಿ ಬಡ್ಡಿಯ ದರವು ಕಡಿಮೆ ಇದ್ದು ಹೊಲ ಮಾಡುವವರ ಪತ್ತು ಹೆಚ್ಚಾಗಿರುತ್ತದೆ. ತಗಾಯಿ ಕಾನೂನುಗಳ ಶರ್ತುಗಳಿಗಿಂತ ಕಡಿಮೆ ದರದಿಂದ ಅಥವಾ ಅಷ್ಟೇ ದರದಿಂದ ಖಾಸಗಿ ಸಾಲಗಳು ದೊರೆಯುವಂತಿದ್ದಾಗ, ತಗಾಯಿ ಸಾಲಗಳನ್ನೆಂದಿಗೂ ಕೊಡದೆ, ಅವುಗಳನ್ನು ಇತರ ಕ್ಷೇತ್ರಗಳ ಸಲುವಾಗಿ ಕಾಯ್ದಿಡಬೇಕು. ಕೆಲವು ಸಾರೆ, ಬಹಳ ಭದ್ರವಾದ ಕಾರಣಗಳ ಮೇಲೆ ಹಾಗೂ ಬಹಳ ಲಾಭದಾಯಕವಾಗಬಹುದಾದ ಯೋಜನೆಗಳ ಸಲುವಾಗಿ ದೊಡ್ಡ ರಕಮಿನ ಸಾಲಗಳನ್ನು ಬೇಡಲಾಗುತ್ತದೆ. ಇವು ಕೂಡ ತಗಾಯಿ ಸಾಲಗಳಿಗೆ ಯೋಗ್ಯವಾಗಿರುವದಿಲ್ಲ. * ಈ ಯೋಜನೆಗಳು ಮೇಲೆ ಕಂಡುಬರುವಷ್ಟು ಲಾಭದಾಯಕವಿದ್ದರೆ, ಇವುಗಳ ಯೋಜಕರು ಸರಕಾರದಿಂದ ದೊರೆಯುವ ಸಾಲದ ಶರ್ತುಗಳ ಮೇರೆಗೆ ಬ್ಯಾಂಕುಗಳಿಂದಲೂ, ಇತರ ಹಣ ಸಾಲ ಕೊಡುವ ಸಂಸ್ಥೆಗಳಿಂದಲೂ ಸಾಲವನ್ನು ಪಡೆಯಬಹುದು. ಸರಕಾರದವರ ಹಾಗೂ ಸದ್ವ್ಯಕ್ತಿರುವ ಸುಸಂಘಟಿತ ಹಣ ಸಾಲ ಕೊಡುವ ಸಂಘಗಳ ನಡುವೆ ಯಾವದೇ ಸ್ಪರ್ಧೆ ಇರತಕ್ಕದ್ದಲ್ಲ. ಸುಖವಸ್ತು ವರ್ಗಗಳಿಗೆ ಅಥವಾ ಬುದ್ಧಿಜೀವಿ ವರ್ಗಗಳಿಗೆ ಸಾಲ ಕೊಡುವದಕ್ಕೆ ಯಾವದೇ ಅಡ್ಡಿಯಿಲ್ಲ; ಆದರೆ ಸಾಮಾನ್ಯವಾಗಿ ಇಂಥ ಜನರು ತಮಗೆ ಬೇಕಾಗುವ ಹಣವನ್ನು ತಾವೇ ಒದಗಿಸಿಕೊಳ್ಳಲಿಕ್ಕೆ ಸಮರ್ಥರಿರುತ್ತಾರೆ.

೨. ಯಾವ ಜನರು ದೀರ್ಘೋದ್ಯೋಗಿಗಳಾಗಿರುವದಿಲ್ಲವೋ, ಮಿತವ್ಯಯಿಗಳಾಗಿರುವದಿಲ್ಲವೋ ಹಾಗೂ ಮಾಡಿಕೊಂಡ ಕರಾರುಗಳ ಶರ್ತುಗಳನ್ನನುಯಿಸಿ ನಡೆಯುವದಕ್ಕೆ ಸಾಕಷ್ಟು ಆಸ್ಥೆಯನ್ನು ವಹಿಸುವದಿಲ್ಲವೋ ಮತ್ತು ಯಾವ ಜನರು ಸಾಲದ ಭಾರದಿಂದ ನರಳುತ್ತಾರೋ ಅಂಥ ಜನರಿಗೆ ತಗಾಯಿ ಸಾಲ ಕೊಡುವದು ವ್ಯರ್ಥವು. ದುಷ್ಕಾಳದಲ್ಲಿ (ದುಷ್ಕಾಳದ ಮೇಲಿನ ಪ್ರಕರಣವನ್ನು ನೋಡಿರಿ) ಇವುಗಳ ಪೈಕಿ ಕೆಲವು ಸಂಗತಿಗಳಲ್ಲಿ ಇತರ ಪರಿಸ್ಥಿತಿಗಳ ಮೂಲಕ ಸ್ವಲ್ಪ ಮಟ್ಟಿಗೆ ಬದಲಾವಣೆಯಾಗುವದುಂಟು. ಮಿತವ್ಯಯಿಗಳಾಗಿದ್ದು ಸಾಮಾನ್ಯವಾಗಿ ಮುಂದು

---

* ಎಫ್. ೨೯೦೨–೧೯ ಇದರಲ್ಲಿ, ಬಹಳ ಭೂಮಿಗಳನ್ನು ಧಾರಣ ಮಾಡಿದ ಒಬ್ಬ ಮನುಷ್ಯನಿಗೆ ೮೦೦೦ ರೂಪಾಯಿಗಳನ್ನು ಎಣ್ಣೆಯ ಎಂಜಿನದ ಪಂಪನ್ನು ನಿಲ್ಲಿಸುವದರ ಸಲುವಾಗಿ ಕೊಡಲಾಗಿತ್ತು.

ಬರಿಯುತ್ತಿರುವ ಒಕ್ಕಲಿಗರು ಭಂಡವಾಳದ ಅಭಾವದಿಂದಾಗಲಿ, ಮಳೆಬೆಳೆಗಳಿಲ್ಲದ್ದರಿಂದ ತಾತ್ಕಾಲಿಕವಾಗಿ ಕುಗ್ಗಿದ್ದರಿಂದಾಗಲಿ ಅಡಚಣಿಗೊಳಗಾಗಿದ್ದರೆ, ಇಂಥ ಜನರು ತಗಾಯಿಯನ್ನು ಪಡೆಯಲಿಕ್ಕೆ ಅತಿಯೋಗ್ಯರಿರುತ್ತಾರೆಂದು ಹೇಳಬಹುದು. ಸಾಲಗಳು ಖಂಡಿತವಾಗಿ ವಸೂಲಾಗುವವೆಂಬ ಕಾರಣದಿಂದಲೇ ಅಯೋಗ್ಯ ಕೆಲಸಗಳ ಸಲುವಾಗಿ ಸಾಲಗಳನ್ನು ಕೊಡುವದು ತಪ್ಪುಳ್ಳದ್ದೂ, ಅನೈತಿಕವೂ, ಅಯುಕ್ತವೂ ಆಗಿದ್ದು, ಇದರ ಮೂಲಕವಾಗಿ ಹೆಚ್ಚು ಅರ್ಹರಾದ ಕರ್ಜದಾರರಿಗೆ ಅನ್ಯಾಯವಾಗುತ್ತದೆ (ಆರ್. ೮೫೬–೬೭ ಇವರ ೫ನೇ ಪ್ಯಾರಾ).

೩. "ಸಾಮರ್ಥ್ಯ" ಎಂಬ ಪಾರಿಭಾಷಿಕ ಶಬ್ದವನ್ನು ವ್ಯಾಖ್ಯಾಯಿಸುವದು ಮಹತ್ವದ್ದಿರುತ್ತದೆ. ಪ್ರತಿಯೊಬ್ಬ ಹೊಲ ಮಾಡುವವನಿಗೆ ಎಲ್ಲಕ್ಕೂ ಮೊದಲು ತನ್ನ ಹೊಟ್ಟೆಯನ್ನೂ ತನ್ನ ಕುಟುಂಬದವರ ಹೊಟ್ಟೆಯನ್ನೂ ತುಂಬಬೇಕಾಗುತ್ತದೆ. ಆ ಮೇಲೆ, ಬೀಜದ ಸಲುವಾಗಿಯೂ, ಜನಾವರಗಳನ್ನು ಸಾಕುವದರ ಸಲುವಾಗಿಯೂ, ಸಾಗುವಳಿಯ ಸಂಬಂಧದಿಂದ ಮಾಡಬೇಕಾದ ಇತರ ಯಾವತ್ತು ಅತ್ಯಾವಶ್ಯಕ ಖರ್ಚುಗಳ ಸಲುವಾಗಿಯೂ ಅವನ ಹತ್ತರ ಹಣವು ಇರಬೇಕಾಗುತ್ತದೆ. ಮೇಲಾಗಿ, ಅವನು ತನ್ನ ಭೂಮಿಯ ಮಹಸೂಲಿನ ಆಕಾರಣಿಯನ್ನೂ ಕೊಡಬೇಕಾಗುತ್ತದೆ. ಇವೆಲ್ಲ ಗರಜುಗಳನ್ನು ಪೂರೈಸಿಕೊಂಡ ನಂತರ ಅವನೊಡನೆ ಏನಾದರೂ ಹಣವು ಉಳಿದರೆ ಅದು, ಭೂಮಿಯ ಸುಧಾರಣೆಗಾಗಿಯಾಗಲಿ, ಸದರಿ ಭೂಮಿಯ ಸುಧಾರಣೆಗಾಗಿ ಮಾಡಿದ್ದ ಸಾಲವನ್ನು ತೀರಿಸುವದಕ್ಕಾಗಲಿ ಉಪಯೋಗವಾಗುತ್ತದೆ. ಇಂಥ ಯಾವದಾದರೂ ಹೆಚ್ಚಿನ ಹಣವು ಉಳಿಯುವದೋ ಇಲ್ಲವೋ ಎಂಬದರ ಅಂದಾಜು ಮಾಡುವಾಗ, ಹೀಗೆ ಸುಧಾರಣೆಯನ್ನು ಮಾಡಿದ ಬಳಿಕ ಯೋಗ್ಯವಾಗಿ ಅದರ ಉತ್ಪನ್ನವು ಎಷ್ಟಾಗಬೇಕೆಂಬದನ್ನು ಕುರಿತು ನಾವು ವಿಚಾರ ಮಾಡತಕ್ಕದ್ದು. ಯಾವನೊಬ್ಬ ಜಮೀನದಾರನು ಬಾವಿಯನ್ನು ಅಗೆದು, ತನ್ನ ಒಣ ಖುಷ್ಕಿಯ ಭೂಮಿಯನ್ನು ತೋಟವಾಗಿ ರೂಪಾಂತರಿಸಿದರೆ, ಅವನ ಒಟ್ಟು ಉತ್ಪನ್ನವು ಸ್ವಾಭಾವಿಕವಾಗಿ ಹೆಚ್ಚಾಗುವದು, ಮತ್ತು ಅವನು ಸಾಗುವಳಿಗಾಗಿ ಹೆಚ್ಚಿನ ರಕಮನ್ನು ಖರ್ಚು ಮಾಡಿದ ಬಳಿಕವೂ, ಸಾಲ ಮುಂತಾದ್ದನ್ನು ತೀರಿಸುವದಕ್ಕಾಗಿ ಅವನೊಡನೆ ಮುಂಚಿಗಿಂತ ಹೆಚ್ಚು ಹಣವು ಉಳಿಯುವದು. ಯಾವದೊಂದು ವಾಡಿಕೆಯ ಹಂಗಾಮಿನಲ್ಲಿ ಯಾವನೊಬ್ಬ ವಿಶಿಷ್ಟ ಜಮೀನದಾರನು ತನ್ನ ಭೂಮಿಯನ್ನು ಸುಧಾರಿಸುವದರ ಸಲುವಾಗಿ ಅಥವಾ ಎತ್ತುಗಳನ್ನು ಕೊಂಡುಕೊಳ್ಳುವದರ ಸಲುವಾಗಿ ಅಥವಾ ಇತರ ಶೇತಕೀ ಭಂಡವಾಳದ ಸಲುವಾಗಿ ಮಾಡಿದ ಸಾಲವನ್ನು ತೀರಿಸುವದಕ್ಕಾಗಿ ಅವನ ಹತ್ತರ ಉಳಿಯಬಹುದಾದ ಹೆಚ್ಚಿನ ರಕಮಿಗೆ ಅವನ "ಸಾಮರ್ಥ್ಯ" ಎಂಬದಾಗಿ ನಾವು ಅರ್ಥ ಮಾಡುತ್ತೇವೆ.

೪. ಯಾವನೊಬ್ಬ ಹೊಲ ಮಾಡುವವನು, ಯಾವದೊಂದು ವಾಡಿಕೆಯ ಹಂಗಾಮಿನಲ್ಲಿ, ೬ ತಿಂಗಳ ವರೆಗೆ ಮಾತ್ರ ಮತ್ತು ಬೆಳೆಯು ಉತ್ತಮವಾಗಿ ಬೆಳೆದ ವರ್ಷದಲ್ಲಿ ೯ ತಿಂಗಳ ವರೆಗೆ ಮಾತ್ರ, ಆದರೆ, ದುಷ್ಕಾಳದಲ್ಲಿ ೩ ತಿಂಗಳ ಅಥವಾ ಅದಕ್ಕೂ ಕಡಿಮೆ ಕಾಲದ ವರೆಗೆ ಮಾತ್ರ, ತನ್ನ ಹಾಗೂ ತನ್ನ ಕುಟುಂಬದವರ ಉದರ ನಿರ್ವಾಹವನ್ನು ಮಾಡುವಷ್ಟು ಭೂಮಿಯನ್ನು ಧಾರಣ ಮಾಡಿದರೆ, ಅವನಿಗೆ "ಸಾಮರ್ಥ್ಯ"ವಿರುವದಿಲ್ಲವೆಂಬದು ಸ್ಪಷ್ಟವದೆ. ಇತರ ಯಾವದೊಂದು ಉದ್ಯೋಗದಲ್ಲಿ (ಉದಾ: ಮುಂಬಯಿಯ ಯಾವದೊಂದು ಗಿರಣಿಯಲ್ಲಿ) ಹೆಚ್ಚಿನ ಸಂಬಳದಿಂದ ಅವನು ಹೆಚ್ಚಿಗೆ ಹಣವನ್ನು ಗಳಿಸಬಹುದೆಂಬದು ನಿಜವು. ಆದನು ತನ್ನ ಭೂಮಿ

ಯಲ್ಲಿ ಮೂರು ತಿಂಗಳ ವರೆಗೆ ದುಡಿದು ಆರು ತಿಂಗಳ ಸಲುವಾಗಿ ಆಹಾರವನ್ನು ಸಂಗ್ರಹಿಸಿಡಬಹುದು, ಮತ್ತು ಯಾವದೊಂದು ಗಿರಣಿಯಲ್ಲಿ ೯ ತಿಂಗಳ ವರೆಗೆ ಕೆಲಸಮಾಡಿ ವರ್ಷದ ಕೊನೆಗೆ ೩ ತಿಂಗಳ ಕೂಲಿಯ ರಕಮು ಅಥವಾ ಇದಕ್ಕಿಂತಲೂ ಹೆಚ್ಚಿನ ರಕಮು ಅವನ ಹತ್ತರ ಉಳಿಯಬಹುದು. ಆದರೆ ಸದರಿ ಮನುಷ್ಯನು ನಿಜವಾಗಿ ಮಿತವ್ಯಯಿಯಾಗಿದ್ದು ದೀರ್ಘೋದ್ಯೋಗಿಯಾಗಿದ್ದರೆ ಮಾತ್ರ ಹೀಗಾಗುವದು ಶಕ್ಯವಿದೆ. ಆದರೆ ಅನೇಕ ಸಾರೆ ಹೀಗೆ ಬೇರೆ ಬೇರೆ ಕೆಲಸಗಳ ತಜವೀಜು ಮಾಡು ವದು ಕಠಿಣವಿರುತ್ತದೆ; ಯಾಕೆಂದರೆ, ಹೊಲದಲ್ಲಿ ಮಾಡಬೇಕಾದ ಮೂರು ತಿಂಗಳ ಕೆಲಸವನ್ನು ಒಂದೇ ಸವನೆ ಮಾಡುವದು ಶಕ್ಯವಿರದೆ, ಅದನ್ನು ಬೇರೆ ಬೇರೆ ಕಾಲಗಳಲ್ಲಿ ಮಾಡಬೇಕಾಗುತ್ತದೆ, ಮತ್ತು ಹೊಲದ ಕೆಲಸಕ್ಕೆ ಅಡ್ಡಿಯಾಗದಂತೆ ಎರಡನೇ ಉದ್ಯೋಗವನ್ನು ಸಾಗಿಸುವದು ಬಹಳೇ ಕಠಿಣವೆನಿಸುವದು. ಮೇಲಾಗಿ, ಮನೆಯಲ್ಲಿ ಆರು ತಿಂಗಳ ಬಗ್ಗೆ ಸಾಕಾಗುವಷ್ಟು ಆಹಾರವಿರುವದರಿಂದ ಅದು ಮುಗಿಯುವ ವರೆಗೆ ಮನೆಯನ್ನು ಬಿಟ್ಟು ಗಿರಣಿಯಲ್ಲಿ ಕೆಲಸಕ್ಕೆ ಹೋಗಲಿಕ್ಕೆ ಮನಸ್ಸಾಗುವದಿಲ್ಲವೆಂಬದು ಸ್ಪಷ್ಟವದೆ. ಆದ್ದರಿಂದ ತನ್ನ ಉಪಜೀವನ ನಿರ್ವಾಹಕ್ಕೆ ಸಾಕಾಗುವಷ್ಟು ಭೂಮಿಯಿಲ್ಲದ ಮನುಷ್ಯನ ಮಾರ್ಗದಲ್ಲಿ ಒಂದು ನೈತಿಕ ಅಡಚಣಿ ಯಿರುತ್ತದೆ. ಅವನು ತನ್ನ ಭೂಮಿಯನ್ನು ಸುಧಾರಿಸುವ ಬಗ್ಗೆ ಹಣವನ್ನು ವೆಚ್ಚ ಮಾಡಿ ತನ್ನ ಉತ್ಪನ್ನವನ್ನು ಹೆಚ್ಚಿಸುವದರ ಬದಲಾಗಿ, ಅವನು ಆ ಹಣವನ್ನೆಲ್ಲ ಮನೆಯಲ್ಲಿಯೇ ಕೂತು ವೆಚ್ಚಮಾಡುವ ಸಂಭವವಿದೆ, ಮತ್ತು ಅವನು ತನ್ನ ಕೈಯಲ್ಲಿ ಏನೂ ಹಣವಿರುವದಿಲ್ಲವೆಂದು ಅವನಿಗೆ ಕಂಡುಬಂದ ತರುವಾಯವೇ ಕೆಲ ಸಕ್ಕೆ ಹೊರಡುವದುಂಟು. ಇದರ ಮೂಲಕ, ಅವನು ಒಂದು ವರ್ಷದ ಪೈಕಿ ಆರು ತಿಂಗಳಲ್ಲಿ ಅರ್ಧಮರ್ಧ ಬೇಸಾಯ ಮಾಡಿಯೂ, ಉಳಿದ ಆರು ತಿಂಗಳಲ್ಲಿ ಮತ್ತು ವರ್ಷದ ಉಳಿದ ಕಾಲದಲ್ಲಿ ಅರ್ಧಮರ್ಧ ಗಿರಣಿಯಲ್ಲಿ ದುಡಿದೂ ಏನೂ ಉಳಿ ತಾಯವಿಲ್ಲದೆ ಚಡಪಡುತ್ತಾನೆ ಮತ್ತು ಅವನು ಭೂಮಿಯ ಗೊಬ್ಬರಕ್ಕಾಗಿ ಅಥವಾ ಭೂಮಿಯಲ್ಲಿ ಇತರ ಸುಧಾರಣೆಗಳನ್ನು ಮಾಡಲಿಕ್ಕಾಗಿ ಹಣವನ್ನು ಖರ್ಚು ಮಾಡ ಲಿಕ್ಕೆ ಎಂದಿಗೂ ಸಮರ್ಥನಾಗದ್ದರಿಂದ, ಅವನ ಭೂಮಿಯ ಕಸುವು ಕುಗ್ಗಿ ಅದು "ಶೋಷಿತ"ವಾಗುತ್ತದೆ. ಮಿ. ಜಿ. ಎಫ್. ಕೀಟಿಂಜರವರ "ದಕ್ಷಿಣದಲ್ಲಿಯ ಗ್ರಾಮ ಗಳ ಆರ್ಥಿಕ ಸ್ಥಿತಿ" ಎಂಬ ಮಹತ್ವದ ಒಂದು ಪುಸ್ತಕದಲ್ಲಿ ೫೨-೫೩ನೇ ಪುಟಗಳಲ್ಲಿ, ಲಾಭದಾಯಕವಲ್ಲದ ಭೂಮಿಗಳ ವಿಷಯವನ್ನು ಕುರಿತು ಕೂಲಂಕಷವಾಗಿ ವಿವೇಚಿಸ ಲಾಗಿದೆ. ಆರ್. ೪೫೫೩-೧೯೨೮ರ ೭ನೇ ಪ್ಯಾರಾವನ್ನೂ, ಆರ್. ೫೬೪೬-೧೯೨೮ರ ೭ನೇ ಹಾಗೂ ೮ನೇ ಪ್ಯಾರಾಗಳನ್ನೂ ನೋಡಿರಿ. ಹೊಲ ಮಾಡುವವರಿಗೆ ಕೊಡುವ ಸಾಲಗಳ (ಎಫ್. ೧೮೮೧, ತಾರೀಖು ೧೫ನೇ ಜುಲೈ ಸನ್ ೧೯೩೮ನೇ ಇಸವಿ) ಬಾಬತಿನಲ್ಲಿ ರಿಪೋರ್ಟು ಮಾಡಲ್ಪಟ್ಟ ದುರುಪಯೋಗಗಳಿಗೆ ಭೂ. ಸು. ಸಾಲಗಳು ಪಾತ್ರವಾಗಲಿಕ್ಕಿಲ್ಲೆಂದು ಸರಕಾರದವರು ಅಭಿಪ್ರಾಯಪಡುತ್ತಾರೆ. ನೇಮಿಸಿಕೊಟ್ಟ ಯಾವದೊಂದು ರಕಮನ್ನು ತಮಗೆ ಕೊಡಬೇಕೆಂದು ಬೇರೆ ಬೇರೆ ಜನರು ಬೇರೆ ಬೇರೆ ಕೆಲಸಗಳ ಸಲುವಾಗಿ ಮಾಗಣಿ ಮಾಡುತ್ತಿದ್ದರೆ, ವಾಡಿಕೆಯ ಕಾಲಗಳಲ್ಲಿ, ಭೂಮಿಯ ಸುಧಾರಣೆ ಮಾಡುವಗೋಸ್ಕರ ಕೊಡಲ್ಪಡುವ ಸಾಲಗಳಿಗೆ ಅಗ್ರತೆಯನ್ನು ಕೊಡಬೇಕೆಂದು ನಾವು ಇದರ ಮೇಲಿಂದ ಊಹಿಸಬಹುದು.

"ಲಾಭದಾಯಕವಲ್ಲದ ಭೂಮಿಗಳನ್ನು" ಧಾರಣ ಮಾಡುವವನಿಗೆ (ಆರ್. ೪೫೫೩-೧೯೨೮-೭ನೇ ಪ್ಯಾರಾ) ಹಣ ಸಾಲ ಕೊಡುವದು ಬಹಳ ಅಪಾಯ

ತರವೆಂದು ಮೇಲಿನ ವಿಚಾರಗಳ ಮೇಲಿಂದ ಕಂಡುಬರುವದು. ಆ ಮನುಷ್ಯನು ಬಹಳ ಮಿತವ್ಯಯಿಯಾಗಿದ್ದಾನೆಂದು ನಮಗೆ ಗೊತ್ತಿದ್ದರೆ, ನಾವು ಕೆಲವು ಸಾರೆ ಇಂಥ ಸಾಲ ಕೊಡುವ ಸಾಹಸಕ್ಕೆ ಕೈಯೊಡ್ಡಬಹುದು, ಹಾಗೂ ಹೆಸರಾದ ವ್ಯಕ್ತಿಗಳಿಗೆ ಸಾಲ ಕೊಡದಂತೆ ಮಾಡಲಿಕ್ಕಾಗಿ, ಯಾವದೊಂದು ಸಹಕಾರೀ ಸಂಘದ ಅಥವಾ ಸವಸಾಯಿಕ ಬ್ಯಾಂಕಿನ ಮೂಲಕ ಹೆಚ್ಚಿನ ಜಾಮೀನು ದೊರೆಯುವಂತಿದ್ದರೆ, ಹೀಗೆ ಸಾಲವನ್ನು ಕೊಡಬಹುದು. ಸಾಲ ಪಡೆಯುವವನ "ಸಾಮರ್ಥ್ಯ"ಕ್ಕಿಂತ ಹೆಚ್ಚಿಗೆ ಅವನಿಗೆ ಸಾಲ ಕೊಡದಂತೆ ನಾವು ಜಾಗರೂಕರಾಗಿರಬೇಕು. ಯಾವದೊಂದು ಸಾಲವನ್ನು ಕೊಡಬೇಕೆಂದು ಹುಕುಮು ಮಾಡುವಾಗ ಅದರಲ್ಲಿ "ಸಾಮರ್ಥ್ಯವು" [ಚೌಕಸಿಯ ನಮೂನೆಯ ಬಾಬು ೯ (೧೦)] ಎಷ್ಟಿದೆಂಬದನ್ನು ನಿರ್ಣಯಿಸುವದು ಎಲ್ಲಕ್ಕೂ ಹೆಚ್ಚಿನ ಮಹತ್ವದ ಸಂಗತಿಯಿರುತ್ತದೆ.

೬. ಈ ಸಾಮರ್ಥ್ಯವನ್ನು ಗೊತ್ತುಮಾಡಲಿಕ್ಕಾಗಿ, ಅವನ ವಾರ್ಷಿಕ ಮಾಗಣಿಯ ಬಗ್ಗೆ ಆಧಾರವಾಗುತ್ತದೆ. ಇದರ ಮೇಲಿಂದಲೇ ಎಷ್ಟು ವರ್ಷಗಳಲ್ಲಿ ಸಾಲವನ್ನು ಹಿಂತಿರಿಗಿ ಕೊಡಬಹುದೆಂಬದನ್ನು ನಿರ್ಣಯಿಸಲಿಕ್ಕೆ ಬರುತ್ತದೆ. ಸಾಲದ ಕಂತಿನ ರಕಮು ಸಾಲ ಪಡೆಯುವವನ ವಾರ್ಷಿಕ "ಸಾಮರ್ಥ್ಯ"ಕ್ಕಿಂತ ಹೆಚ್ಚಿಗಿದ್ದರೆ, ಅವನಿಗೆ ಹಣವನ್ನು ಸಾಲ ಕೊಟ್ಟು ಅದನ್ನು ೧೦ ವರ್ಷಗಳಲ್ಲಿ ಹಿಂತಿರಿಗಿ ಕೊಡಬೇಕೆಂದು ಕಂತುಗಳನ್ನು ಗೊತ್ತುಮಾಡುವದು ವ್ಯರ್ಥವು.

೭. ಮುಂದೆ ಲಾಭವಾಗುವ ಸಂಭವವನ್ನು ಮುಂದಿಟ್ಟುಕೊಂಡು ಸಾಲ ಕೊಡದಿರುವದು ಒಂದು ಅತೀ ಮಹತ್ವದ ಸಂಗತಿಯಾಗುತ್ತದೆ. ನೀರಾವರಿಯ ಕೆಳಗಿರುವ ಒಳ್ಳೇ ಫಲವತ್ತಾದ ಭೂಮಿಯು ಒಂದು ಎಕರೆಗೆ ೩೦೦ ರೂಪಾಯಿ ಕ್ರಯವಿರುತ್ತದೆಂದು ತಿಳಿಯೋಣ. ಈ ಬೆಲೆಯು ೩೫೦ ರೂಪಾಯಿಗಳಾಯಿತೆಂದರೆ ಇಂಥ ಭೂಮಿಯನ್ನು ಧಾರಣ ಮಾಡುವ ಅನೇಕ ಜನರು ಅದನ್ನು ಮಾರಲಿಕ್ಕೆ ಇಚ್ಛೆಪಡುವ ಸಂಭವವಿದೆ. ಈ ಭೂಮಿಗಳನ್ನು ಸಾಗು ಮಾಡುವದರಿಂದ ಒದಗುವ ಖಂಡವಾರದ ರೂಪದ ಲಾಭವು ೩೦೦ರಿಂದ ೩೫೦ ರೂಪಾಯಿಗಳಿಗಿಂತ ಹೆಚ್ಚಿಗೆ ಆಗಲಿಕ್ಕಿಲ್ಲವೆಂದು ಇದರ ಮೇಲಿಂದ ಸ್ಪಷ್ಟವಾಗುತ್ತದೆ. ಈಗ ೪೦೦ ರೂಪಾಯಿಯನ್ನು ಖರ್ಚುಮಾಡಿ ಇಂಥ ಒಂದು ಎಕರೆ ಒಣ ಪ್ರದೇಶದ ಭೂಮಿಯನ್ನು ನೀರಾವರಿಯ ಭೂಮಿಯಾಗಿ ಮಾಡಿದರೆ ಲಾಭವಾಗುವದೋ? ಲಾಭವಾಗದೆಂಬದು ಸ್ಪಷ್ಟವಿದೆ. ಸಧ್ಯದ ಒಣ ಪ್ರದೇಶದ ಬೆಲೆಯು ಕನಿಷ್ಠ ಪಕ್ಷಕ್ಕೆ ೫೦ ರೂಪಾಯಿಯಿದೆ. ಸದರಿ ಭೂಮಿಯ ಮೇಲೆ ಇನ್ನೂ ೪೦೦ ರೂಪಾಯಿಗಳನ್ನು ಖರ್ಚುಮಾಡಿ ಅದನ್ನು ನೀರಾವರಿಯ ಭೂಮಿಯನ್ನಾಗಿ ಮಾಡಿದರೆ, ನಾವು ೩೫೦ ರೂಪಾಯಿಗಳಿಗೆ ಮಾರಲಿಕ್ಕೆ ದೊರೆಯುವದನ್ನು, ನಿಜವಾಗಿ ೪೫೦ ರೂಪಾಯಿ ಖರ್ಚುಮಾಡಿ ಪಡೆದಂತಾಗುತ್ತದೆ. ಹೀಗಿದ್ದರೂ ಕೂಡ, ವಿಚಾರವಿಲ್ಲದೆ ತಗಾಯಿ ಸಾಲವನ್ನು ತೆಗೆದು, ಅದರ ಸಹಾಯದಿಂದ ಕೆಲವು ಸಾರೆ ಪ್ರತಿ ಎಕರೆಗೆ ಸುಧಾರಣೆಗಳಿಗಾಗಿ ೫೦೦ ರೂಪಾಯಿಗಳಿಂದ ೧೦೦೦ ರೂಪಾಯಿಗಳ ವರೆಗೆ ಖರ್ಚು ಮಾಡಿದ ಅಥವಾ ಮಾಡಯೋಚಿಸಿದ ಸಂಗತಿಯನ್ನು ನಾವು ಕೇಳುತ್ತಿದ್ದೇವೆ.

೮. ಹೊಲ ಮಾಡುವವನ ಹತ್ತಿರ ಕೆಲಸ ನಡಿಸುವದರ ಸಲುವಾಗಿ, ಹಾಗೂ ದುರಸ್ತಿ ಮುಂತಾದವುಗಳ ಸಲುವಾಗಿ ಬೇಕಾಗುವ ಹೆಚ್ಚಿನ ರಕಮಿಲ್ಲದಿದ್ದರೆ, ಅಥವಾ ಅವನ ಯಂತ್ರವು ಸವೆದುಹೋದರೆ, ಅದರ ಬದಲಾಗಿ ಎರಡನೇಯದನ್ನು ಕೊಳ್ಳುವದರ ಸಲುವಾಗಿ ಅವನೊಡನೆ ಹೆಚ್ಚಿನ ರಕಮಿಲ್ಲದಿದ್ದರೆ,

ಸುಧಾರಣೆಯ ಖರ್ಚನ್ನು ಮಾತ್ರ ಕೊಟ್ಟಾಗ್ಗೆ, ಬಾವಿಯನ್ನು ಅಗಿಯುವದಕ್ಕೆ, ಅಥವಾ ಪಂಪನ್ನು ನಿಲ್ಲಿಸುವದಕ್ಕೆ ಹಾಗೂ ಇತರ ಕೆಲಸಗಳಿಗೆ ಸಾಲಗಳನ್ನು ಕೊಡತಕ್ಕದ್ದಲ್ಲ. ಕೆಲವು ಸಾರೆ, ತನ್ನ ಸುಧಾರಣೆಗಳ ಯಾವದೇ ತರದ ಉಪಯೋಗ ಮಾಡಿಕೊಳ್ಳುವದಕ್ಕಾಗಿ ಅವನಿಗೆ ಬೇಕಾಗುವ ಬೀಜಗಳನ್ನು ಹಾಗೂ ಗೊಬ್ಬರವನ್ನು ಕೊಳ್ಳುವದರ ಸಲುವಾಗಿ ಅವನ ಹತ್ತರ ಹಣವಿರುವದಿಲ್ಲ. ಸಾಲಗಳನ್ನು ಮಂಜೂರ ಮಾಡುವವನು ಇವೆಲ್ಲ ಸಂಗತಿಗಳನ್ನು ಚನ್ನಾಗಿ ಪರಿಶೀಲಿಸಬೇಕು ಮತ್ತು ಯಾವತ್ತು ಚೌಕಸಿಗಳಲ್ಲಿ, ವಿಶೇಷವಾಗಿ, ಭೂ. ಸು. ಸಾಲಗಳ ಬಾಬತಿನಲ್ಲಿ, ಇವುಗಳ ಬಗ್ಗೆ ಕಾಳಜಿಪೂರ್ವಕವಾಗಿ ವಿಚಾರ ಮಾಡಬೇಕು.

೯. ಯಾವದೊಂದು ಭೂಮಿಗೆ ಹೆಚ್ಚಿಗೆ ಗೇಣಿ ಬಾರದಿದ್ದರೆ ಅಥವಾ ಅದನ್ನು ಪಟ್ಟಿಯಿಂದ ಕೊಟ್ಟರೆ ಅದರಿಂದ ಹೆಚ್ಚಿನ ಗೇಣಿಯು ಹುಟ್ಟುವಂತಿರದಿದ್ದರೆ, ಸದರಿ ಭೂಮಿಯು "ಸುಧಾರಿಸಲ್ಪಟ್ಟಿದೆಂದು" ತಿಳಿಯತಕ್ಕದ್ದಲ್ಲ. ಯೋಗ್ಯವಿಚಾರ ಮಾಡಿ ನೋಡಿದ ಪಕ್ಷಕ್ಕೆ, ಈ ಹೆಚ್ಚಿನ ಗೇಣಿಯು, ಸದರಿ ಸಾಲವನ್ನು ತೀರಿಸುವದರ ಸಲುವಾಗಿರುವ ವಾರ್ಷಿಕ ಕಂತಿಗಿಂತ ಹೆಚ್ಚಿಗಿರಬೇಕು. ಪ್ರತಿಯೊಂದು ಸುಧಾರಣೆಗೆ ಒಂದು ವಿಶಿಷ್ಟ "ಕಾಲಾವಧಿಯು" ಇರುತ್ತದೆಂಬದನ್ನು ಲಕ್ಷ್ಯದಲ್ಲಿಡಬೇಕು. ಬೀಜದ ಸಲುವಾಗಿರುವ ಸಾಲಕ್ಕೆ ಒಂದೇ ಒಂದು ವರ್ಷದ ಕಾಲಾವಧಿಯಿರುತ್ತದೆ; ಆದದರಿಂದ ಅದನ್ನು ಲಗತು ಮುಂದಿನ ಬೆಳೆಯಿಂದಲೇ ಹಿಂತಿರುಗಿ ಕೊಡಬೇಕು (ಎಫ್. ೪೧೯–೯೭, ೨೨೭೫–೯೭). ಯಾವದೊಂದು ಬೀಜದ ಸಲುವಾಗಿರುವ ಸಾಲವು ೩ ವರ್ಷಗಳಲ್ಲಿ ಹಿಂತಿರುಗಿ ಕೊಡಲ್ಪಡಬಹುದೆಂದು ಕ. ಸು. ಹುಕುಮು ಮಾಡಬಹುದು. ಜನಾವರಗಳ ಸಲುವಾಗಿರುವ ಸಾಲಕ್ಕೆ ೭ ಅಥವಾ ೮ ವರ್ಷಗಳ ಕಾಲಾವಧಿಯನ್ನು ಕೊಡಬಹುದು, ಆದರೆ ಅವುಗಳಿಗೆ ಬರುವ ಬೇನೆಯ ಹಾಗೂ ಮರಣದ ಪ್ರಸಂಗವನ್ನು ಲಕ್ಷ್ಯಕ್ಕೆ ತಂದರೆ, ಈ ಅವಧಿಯನ್ನು ಇದಕ್ಕಿಂತಲೂ ಕಡಿಮೆ ಮಾಡಬಹುದು. ಹೊಲದೊಳಗೆ ಆಳವಾಗಿ ಬೇರೂರಿದ ಕಳೆಯನ್ನು ತೆಗೆದುಹಾಕುವ ಕೆಲಸಕ್ಕಾದರೂ ಸಾಧಾರಣವಾಗಿ ಒಂದು ನಿಶ್ಚಿತ ಅವಧಿಯಿರುತ್ತದೆ ಮತ್ತು ಈ ಅವಧಿಯು, ಸದರಿ ಭೂಮಿಯಲ್ಲಿ ಪ್ರತಿವರ್ಷ ಹೊಡೆಯಲ್ಪಡುವ ರಂಟೆಯ ಪ್ರಕಾರದ ಮೇಲೆ ಅವಲಂಬಿಸಿರುತ್ತದೆ. ಬಾವಿಗೆ ಅಥವಾ ಕೆರೆಗೆ ಹೆಚ್ಚಿನ ಕಾಲಾವಧಿಯನ್ನು ಮಂಜೂರ ಮಾಡಬಹುದು, ಆದರೆ ಇವುಗಳು ಶಾಶ್ವತವಲ್ಲದ್ದರಿಂದ ಇವುಗಳನ್ನು ದುರಸ್ತು ಇಡಬೇಕಾಗುತ್ತದೆ. ಸಾಲವನ್ನು ಮುಟ್ಟಿಸಬೇಕಾದ ಅವಧಿಯು ಸುಧಾರಣೆಯ ಕಾಲಾವಧಿಗಿಂತ ಹೆಚ್ಚಿಗಿರಬಾರದು ಮತ್ತು ಅದು ಸಾಲ ತಕ್ಕೊಳ್ಳುವವನ ವಾರ್ಷಿಕ "ಸಾಮರ್ಥ್ಯ"ಕ್ಕಿಂತ ಹೆಚ್ಚಿಗಿರಬಾರದು. ಯಾವದೊಂದು ಸುಧಾರಣೆಯು ದೀರ್ಘ ಕಾಲಾವಧಿಯ ಸುಧಾರಣೆಯಾಗಿದ್ದರೆ, ಸದರಿ ಸುಧಾರಣೆಯ ಮೂಲಕ ಹೆಚ್ಚಿಗೆ ದೊರೆಯುವ ಗೇಣಿಗಿಂತ ಅಥವಾ ಉತ್ಪನ್ನಕ್ಕಿಂತ ವಾರ್ಷಿಕ ಕಂತನ್ನು ಹೆಚ್ಚಿಗಿಡುವದಕ್ಕೆ ಕೆಲವು ಕಾಲದ ವರೆಗೆ ಮಾತ್ರ ಪರವಾನಗಿ ಕೊಡಬಹುದು, ಯಾಕಂದರೆ, ಸುಧಾರಣೆಯ ಉಳಿದ ಕಾಲಾವಧಿಯಲ್ಲಿ ಹೊಲ ಮಾಡುವವನು ತನ್ನ ಲಾಭವನ್ನು ಪಡಕೊಳ್ಳುವನು. ಹೊ. ಸಾ. ಆಕ್ಟಿನ ೪ನೇ ಕಾನೂನನ್ನು ನೋಡಿರಿ.

೧೦. ತಗಾಯಿ ಸಾಲ ಬೇಡುವವನು ಅತ್ಯಂತ ದರಿದ್ರನಾಗಿರುವ ಸಂಗತಿಯು ಅತ್ಯುತ್ತಮವಾದ ಲಾಯಖಿಯಿರುತ್ತದೆಂದು ತಗಾಯಿ ಸಾಲಗಳನ್ನು ಮಂಜೂರ ಮಾಡುವ ಕೆಲವು ಜನರು ತಿಳಿಯುತ್ತಾರೆಂಬ ಸಂಗತಿಯು ಖೇದಕರವಿರುತ್ತದೆ.

ನಾವು ಸಾರ್ವಜನಿಕ ದಾನವನ್ನು ಹಂಚುವದಿದ್ದರೆ ಹೀಗೆ ತಿಳಿಯಬಹುದಾಗಿತ್ತು, ಆದರೆ ತಗಾಯಿ ಸಾಲಗಳನ್ನು ವ್ಯಾಪಾರೀ ಧೋರಣದಿಂದ ಕೊಡತಕ್ಕದ್ದಿರುತ್ತದೆ, ಮತ್ತು ಸಾಲ ತಕ್ಕೊಳ್ಳುವವನು ಅತ್ಯಂತ ದರಿದ್ರನಾಗಿರುವದು ಅತ್ಯುತ್ತಮವಾದ ಲಾಯಖಿಯಿರುವದಿಲ್ಲ. ಸಾರ್ವಜನಿಕರ ಹಣವನ್ನು ಟ್ರಸ್ಟೆಂದು ಇಟ್ಟುಕೊಂಡು ಅದನ್ನು ಎರಡನೇಯವರಿಗೆ ಕೊಡುವ ಯಾವನೊಬ್ಬ ಬ್ಯಾಂಕರನ ಪರಿಸ್ಥಿತಿಯಂತೆಯೇ, ತಗಾಯಿ ಸಾಲಗಳನ್ನು ಕೊಡುವಾಗ ಸರಕಾರದವರ ಪರಿಸ್ಥಿತಿಯಿರುತ್ತದೆ. ಬ್ಯಾಂಕರನು ಉಪಕಾರ ಮಾಡುವವನೂ, ಅನಾವಶ್ಯಕವಾಗಿ ಲಾಭ ತಕ್ಕೊಳ್ಳುವವನಲ್ಲದಂಥವನೂ ಇರುತ್ತಾನೆಂಬ ಸಂಗತಿಯು ನಿಜವಿದ್ದರೂ, ಅವನು ವ್ಯವಹಾರಿಕ ದೂರದರ್ಶಿತ್ವವನ್ನು ಉಪಯೋಗಿಸಲು ಬದ್ಧನಿರುತ್ತಾನೆ (ಆರ್. ೫೬೪೨–೧೫ನೇ ವರ ೭-೮ನೇ ಪ್ಯಾರಾಗಳು ಮತ್ತು ಸಿಂಧದ ಸಲುವಾಗಿ ಎಫ್. ೧೨೫೯–೧೫): ಆದಕಾರಣ, ಸಾಲಗಳ ವಿಷಯದಲ್ಲಿ ಚೌಕಶಿ ಮಾಡುವ ಹಾಗೂ ಸಾಲಗಳನ್ನು ಮಂಜೂರ ಮಾಡುವ ಯಾವತ್ತು ಅಮಲದಾರರು ತಮ್ಮ ಕೆಲಸದ ಆರ್ಥಿಕ ವಿಚಾರಗಳನ್ನು ಶಕ್ಯವಿದ್ದ ಮಟ್ಟಿಗೆ ಸಂಪೂರ್ಣವಾಗಿ ಅರಿತುಕೊಳ್ಳಬೇಕು. ಮಿ. ಜಿ. ಎಫ್. ಕೀಟಿಂಜರವರ, "ದಕ್ಷಿಣ ದೇಶದಲ್ಲಿಯ ಗ್ರಾಮಗಳ ಆರ್ಥಿಕ ಸ್ಥಿತಿ" ಎಂಬ ಪುಸ್ತಕವನ್ನು ಅವರು ಅವಶ್ಯವಾಗಿ ಓದತಕ್ಕದ್ದು. ಶೇತಕೀ ಸುಧಾರಣೆಗೆ ಅಡ್ಡಬರುವ ಎಲ್ಲಕ್ಕೂ ಹೆಚ್ಚಿನ ಅಡಚಣಿಯಂದರೆ ಕೂಲಿಕಾರರ ಕೊರತೆ: ಬಡ ವರ್ಗಗಳ ಜನರು ಸಾಲದ ಭಂಡವಾಳದಿಂದ ಸಾಗುವಳಿ ಮಾಡುವ ಅಪಾಯದ ಕೆಲಸಕ್ಕೆ ಕೈಯೊಡ್ಡುವವರ ಬದಲಾಗಿ, ಅವರು ಕೂಲಿಕಾರರಾಗಿ ತಮ್ಮ ನೈಜ ಸ್ಥಿತಿಯಲ್ಲಿರುವದು ಯೋಗ್ಯವು (ಆರ್. ೭೫೬–೮೧, ಮತ್ತು ಆರ್. ೪೫೫–೧೪ ಇದರ ೬ನೇ ಪ್ಯಾರಾ).

೧೧. ಭೂಮಿಯ ಸುಧಾರಣೆಗಾಗಿ ಕೊಡಲಾಗುವ ಸಾಲದ ಅವಧಿಯು ೨೦ ವರ್ಷಕ್ಕೆ ಮರ್ಯಾದಿತ ಮಾಡಲ್ಪಟ್ಟಿದೆ; ಇದಕ್ಕಿಂತಲೂ ಹೆಚ್ಚಿಗೆ ಅವಧಿಯನ್ನು ಕೊಟ್ಟಾಗ್ಯೂ, ವಾರ್ಷಿಕ ಕಂತುಗಳ ರಕಮಿನಲ್ಲಿ ಬಹಳೇ ಕಡಿಮೆ ಪ್ರಮಾಣದಲ್ಲಿ ಕಡಿಮೆಯಾಗುವದೆಂದು ಕಂಡುಬರುವದು. ಸಾಲವು ಎಷ್ಟು ಹೆಚ್ಚಿಗೆ ದೀರ್ಘ ಕಾಲಾವಧಿಯದ್ದಿರುವದೋ ಅದೇ ಪ್ರಮಾಣದಿಂದ ಬಡ್ಡಿಯ ಭಾರವು ಹೆಚ್ಚಾಗುವದು. ಮೇಲಾಗಿ, ಬಹಳ ಹೆಚ್ಚಿನ ಭಂಡವಾಳವನ್ನು ಈ ಸಾಲಗಳಲ್ಲಿ ದೀರ್ಘ-ಕಾಲದ ವರೆಗೆ ತೊಡಗಿಸಿಡಬಾರದೆಂಬದು ಮಹತ್ವದ ಸಂಗತಿಯಾಗಿದೆ. ಕಡಿಮೆ ಕಾಲಾವಧಿಯ ಸಾಲಗಳು ಸರಕಾರದವರಿಗೆ ಹೆಚ್ಚಿಗೆ ಸಮ್ಮತವಿರುತ್ತವೆ, ಯಾಕೆಂದರೆ, ಇದರ ಮೂಲಕ ಸ್ವಲ್ಪೇ ಭಂಡವಾಳದಿಂದ ಹೆಚ್ಚಿನ ಸಂಖ್ಯೆಯ ಜನರಿಗೆ ಸಹಾಯ ಮಾಡಲಿಕ್ಕೆ ಬರುತ್ತದೆ. ಯಾವದೊಂದು ಸಾಲವನ್ನು ಎಷ್ಟು ಕಂತುಗಳಿಂದ ಹಿಂತಿರಿಗಿ ಕೊಡಬೇಕೆಂಬದನ್ನು ಗೊತ್ತುಮಾಡುವಾಗ, ಹೀಗೆ ಹಿಂತಿರಿಗಿ ಕೊಡಲಿಕ್ಕೆ ಪರವಾನಗಿ ಇರುವ ಮಹಾಕಾಷ್ಠೆಯ ಕಾಲಾವಧಿಯನ್ನು ಲಕ್ಷ್ಯಕ್ಕೆ ತರುವದು ಇಷ್ಟವಿರುವದಿಲ್ಲ. ಆದರೆ ಹೀಗೆ ಮಾಡುವದರ ಬದಲಾಗಿ ನಾವು, ಸಾಲ ತಕ್ಕೊಳ್ಳುವವನ ಸಾಮರ್ಥ್ಯವನ್ನು ಲಕ್ಷ್ಯದಲ್ಲಿ ತಕ್ಕೊಳ್ಳಬೇಕು, ಮತ್ತು ಅವನ ಸಾಮರ್ಥ್ಯದ ಮರ್ಯಾದೆಯ ಮೇರೆಗೆ ಎಲ್ಲಕ್ಕೂ ಕಡಿಮೆ ಅವಧಿಯಲ್ಲಿ ಸದರಿ ಸಾಲವನ್ನು ಹಿಂತಿರಿಗಿ ಕೊಡಬೇಕೆಂದು ಅವನಿಗೆ ಫರ್ಮಾಯಿಸಬೇಕು. ೨೦ ವರ್ಷಗಳ ಕಾಲಾವಧಿಯಲ್ಲಿ ಹಿಂತಿರಿಗಿ ಕೊಡಲಿಕ್ಕೆ ಬರುವಷ್ಟು ಅವನ ಸಾಮರ್ಥ್ಯವಿಲ್ಲದಿದ್ದರೆ ಸಾಲವನ್ನು ಕೊಡುವದೇ ಅಶಕ್ಯವಾಗುತ್ತದೆ. ಸಾಲವನ್ನು ಹಿಂತಿರಿಗಿ ಕೊಡಹತ್ತಿದ ಮೊದಲಿನ

ವರ್ಷಗಳಲ್ಲಿ ಸಾಲಗಾರನು ತನ್ನ ಸಾಮರ್ಥ್ಯವಿದ್ದಷ್ಟನ್ನೇ ಕೊಡುತ್ತಿದ್ದರೂ, ಅವನು ಸುಧಾರಣೆಗಳಿಂದುಂಟಾಗುವ ಲಾಭಗಳಿಗಿಂತ ನಿಜವಾಗಿ ಹೆಚ್ಚಿಗೆ ಹಣವನ್ನು ಕೊಡುತ್ತಿದ್ದರೆ, ಅವನು ಸಾಲದಿಂದ ಎಷ್ಟು ಬೇಗನೆ ಮುಕ್ತನಾಗುವನೋ ಆ ಪ್ರಮಾಣದಿಂದ ಅವನು ಕಡಿಮೆ ಬಡ್ಡಿಯನ್ನು ಕೊಡಬೇಕಾಗುವದು ಮತ್ತು ಅಷ್ಟೇ ಬೇಗನೆ ಸುಧಾರಣೆಗಳ ಸಂಪೂರ್ಣ ಲಾಭವನ್ನು ಉಪಭೋಗಿಸಲಿಕ್ಕೆ ಶಕ್ತನಾಗುವನು.

೧೨. ಸಾಲವನ್ನು ಹಂಚಿಕೊಟ್ಟ ತಾರೀಖಿನಿಂದ ಬಡ್ಡಿಯು ಲಾಗೂ ಆಗುತ್ತದೆ, ಮತ್ತು ಸಾಲಕೊಟ್ಟ ತಾರೀಖು ಯಾವ ತ್ರೈಮಾಸಿಕದ ಅವಧಿಯಲ್ಲಿರುವದೋ ಆ ತ್ರೈಮಾಸಿಕದ ಕೊನೆಗೆ ಇದ್ದ ಸಾಲದ ರಕಮಿನ ಮೇಲೆ ಒಂದು ಪೂರ್ಣ ತ್ರೈಮಾಸಿಕದ ಬಗ್ಗೆ ಬಡ್ಡಿಯನ್ನು ಆಕಾರಿಸಲಾಗುವದು. ಇದು ನ್ಯಾಯ್ಯವಾಗಿರುತ್ತದೆ, ಯಾಕೆಂದರೆ, ಮುಂದಿನ ಯಾವತ್ತು ತ್ರೈಮಾಸಿಕಗಳಲ್ಲಿ, ಯಾವದೊಂದು ತ್ರೈಮಾಸಿಕದ ಅವಧಿಯಲ್ಲಿ ಕೊಟ್ಟ ಯಾವದೇ ರಕಮಿನ ಮೇಲೆ, ಸದರಿ ತ್ರೈಮಾಸಿಕದ ಮೊದಲನೇ ತಾರೀಖಿನಿಂದ ಹೀಗೆ ಹಣ ಕೊಟ್ಟ ತಾರೀಖಿನ ವರೆಗೆ ಯಾವದೇ ಬಡ್ಡಿಯು ಆಕಾರಿಸಲ್ಪಡಲಿಕ್ಕಿಲ್ಲ. ಸುಧಾರಣೆಯ ಮೂಲಕ ಯಾವ ವರ್ಷದಲ್ಲಿ ಸಾಲ ತಕ್ಕೊಳ್ಳುವವನ ಸಾಮರ್ಥ್ಯವು ಬೆಳೆಯುವದೋ ಆ ವರ್ಷದಿಂದ ಸಾಲ ಮುಟ್ಟಿಸುವ ಮೊದಲನೇ ವಾರ್ಷಿಕ ಕಂತನ್ನು ಗೊತ್ತುಮಾಡಬೇಕು. ಅವನು ಒಂದು ಜೋಡಿ ಎತ್ತುಗಳನ್ನು ಕೊಂಡಿದ್ದರೆ, ಅವುಗಳಿಂದ ಅವನಿಗೆ ಕೂಡಲೇ ಲಾಭವು ದೊರೆಯುವದು, ಮತ್ತು ಲಗತು ಮುಂದಿನ ಬೆಳೆಯಿಂದ ಒಂದು ಕಂತನ್ನು ಕೊಡಲು ಅವನು ಸಮರ್ಥನಾಗಬಹುದು. ಸನ್ ೧೯೩೨ನೇ ಇಸವಿಯ ನವೆಂಬರ ತಿಂಗಳಲ್ಲಿ ಅವನು ಒಂದು ಬಾವಿಯನ್ನು ಅಗಿಯಲಿಕ್ಕೆ ಪ್ರಾರಂಭಿಸಿದರೆ, ಅದು ಬಹುಶಃ ಸನ್ ೧೯೩೩ನೇ ಇಸವಿಯ ಜೂನ ತಿಂಗಳ ತನಕ ಮುಗಿಯಲಾರದು. ಹೀಗಾದರೆ, ಮುಂದಿನ ಬೇಸಿಗೆಯ ವರೆಗೆ ಅವನಿಗೆ ಬತ್ತಿಗೆ ಮಾಡಲಿಕ್ಕೆ ಹಾಗೂ ಭೂಮಿಗೆ ನೀರುಣಿಸಲಿಕ್ಕೆ ಬರಲಿಕ್ಕಿಲ್ಲ, ಮತ್ತು ಸನ್ ೧೯೩೪ನೇ ಇಸವಿಯ ಫೆಬ್ರುವರಿ-ಮಾರ್ಚ ತಿಂಗಳಲ್ಲಿ ಅವನು ತನ್ನ ಇತರ ಉತ್ಪನ್ನಗಳೊಳಗಿಂದ ಮೊದಲನೇ ಕಂತನ್ನು ಕೊಡುವ ತಜವೀಜು ಮಾಡಿದ ಹೊರತು, ಸನ್ ೧೯೩೪ನೇ ಇಸವಿಯ ಫೆಬ್ರುವರಿ ಅಥವಾ ಮಾರ್ಚ ತಿಂಗಳ ವರೆಗೆ ಸದರಿ ಕಂತನ್ನು ಅವನು ಕೊಡಲಿಕ್ಕೆ ಸಮರ್ಥನಾಗಬಹುದೆಂದು ಎಣಿಸಲಾಗದು.

೧೩. ಯಾವದೊಂದು ಸಾಲವನ್ನು ಮಂಜೂರ ಮಾಡುವಾಗ, ಸಾಲ ತಕ್ಕೊಳ್ಳುವವನ ಹತ್ತರ ತನ್ನದಾದ ಯಾವದೇ ಉತ್ಪನ್ನವಿರುವದೋ ಇಲ್ಲವೋ ಎಂಬವನ್ನು ಕೇಳಬೇಕು ಹಾಗೂ ಆ ಬಗ್ಗೆ ವಿಚಾರ ಮಾಡಬೇಕು. ಇಂಥ ಉತ್ಪನ್ನವಿರುವ ಜನರಿಗೆ ಈ ಬಗ್ಗೆ ವಿಶೇಷ ಅಗ್ರತೆಯನ್ನು ಕೊಡತಕ್ಕದ್ದು. ಉದಾಹರಣಾರ್ಥವಾಗಿ, ಯಾವ ಬಾವಿಯನ್ನು ಅಗಿಯುವ ಕೆಲಸವನ್ನು ಪ್ರಾರಂಭಿಸಲಾಗಿಲ್ಲವೋ ಅಂಥ ಬಾವಿಯನ್ನು ಅಗಿಯುವ ಕೆಲಸದ ಬಗ್ಗೆ ಹಣವನ್ನು ಸಾಲವಾಗಿ ಕೊಡುವದಕ್ಕಿಂತ, ಒಂದು-ಮೂರಾಂಶದಷ್ಟು ಅಗಿಯುವ ಕೆಲಸವು ಮುಗಿದಂಥ ಬಾವಿಯನ್ನು ಪೂರ್ಣವಾಗಿ ಅಗಿಯುವದಕ್ಕಾಗಿ ಹಣವನ್ನು ಸಾಲವಾಗಿ ಕೊಡುವದು ಎಷ್ಟೋ ಲೇಸು; ಯಾವನೊಬ್ಬ ಮನುಷ್ಯನು ಯಾವದೊಂದು ಕೆಲಸದ ಕೆಲವೊಂದು ಭಾಗವನ್ನು ಮುಗಿಸಿದ ಪಕ್ಷಕ್ಕೆ ಅವನ ಮೇಲೆ ನಂಬಿಗೆಯನ್ನಿಡಬಹುದು; ಯಾವನೊಬ್ಬ ಮನುಷ್ಯನಿಗೆ ಕೆಲವು ಉತ್ಪನ್ನದ ಮಾರ್ಗಗಳಿದ್ದ ಪಕ್ಷಕ್ಕೆ, ಅವನು ಮಿತವ್ಯಯಿಯಾಗಿದ್ದು ಹಾಗೂ

ಸಾಮರ್ಥ್ಯವಿದ್ದ ಮನುಷ್ಯನೆಂದು ಭರವಸೆಪಡಬಹುದು. ಅನೇಕ ವರ್ಷಗಳ ವರೆಗೆ ಶೇತಕೀ ಕೆಲಸವನ್ನು ಮಾಡಿದ ನಂತರ ಕೂಡ ಅವನೊಡನೆ ಯಾವವೇ ಉತ್ಪನ್ನದ ಸಾಧನಗಳಿಲ್ಲದಿದ್ದರೆ, ಅವಶ್ಯವಾಗಿ ಒಂದಿಷ್ಟು ವಿಚಾರ ಮಾಡದೆ ಅವನಿಗೆ ಸಾಲ ಕೊಡ ಬಾರದು.

೧೪. ಸಾಲವು ಮುಣುಗಿದರೆ ಸರಕಾರವು ಆ ಬಗ್ಗೆ ಯಾವದೇ ಜವಾಬದಾರಿ ಯನ್ನು ವಹಿಸುವದಿಲ್ಲ ಎಂಬ ಸಂಗತಿಯು ಈ ಸಮಗ್ರ ಸಾಲದ ಪದ್ಧತಿಯ ಒಂದು ಮಹತ್ವದ ತತ್ವವಿರುತ್ತದೆ. ಸರಕಾರವು ಈ ಮೇರೆಗೆ ಜವಾಬದಾರಿ ಯನ್ನು ವಹಿಸಿದ್ದಾದರೆ, ಜನರು ಒಂದಿಷ್ಟು ಲಾಭವನ್ನು ಪಡೆಯಬಹುದೆಂಬ ಆಶೆ ಯಿಂದ ವಿಚಾರವಿಲ್ಲದೆ ಸಾಲಗಳ ಸಲುವಾಗಿ ಅರ್ಜಿ ಮಾಡಬಹುದು, ಮತ್ತು ಅವರಿಗೆ ಲಾಭವಾಗದಿದ್ದ ಪಕ್ಷಕ್ಕೆ ಈ ನಷ್ಟದ ರಕಮನ್ನು ಸರಕಾರವು ತಮಗೆ ಸೂಟು ಬಿಟ್ಟು ತಮ್ಮನ್ನು ಸಾಲದಿಂದ ಮುಕ್ತ ಮಾಡಬೇಕೆಂದು ಇಚ್ಛೆ ಪಡಬಹುದು. ಆದ್ದರಿಂದ ಸಾರ್ವಜನಿಕರ ರಕ್ಷಣೆಯಾಗಬೇಕೆಂಬ ಉದ್ದೇಶದ ಬಗ್ಗೆಯೂ, ಸಾಲ ಕೊಡುವ ಪದ್ಧತಿಯ ರಕ್ಷಣೆಯಾಗಬೇಕೆಂಬ ಉದ್ದೇಶದ ಬಗ್ಗೆಯೂ, ಯಾವನೊಬ್ಬ ಮನುಷ್ಯನಿಗೆ ಬಾವಿ ಅಗೆಯಲಿಕ್ಕಾಗಿ ಕೊಡಲಾಗಿದ್ದ ಸಾಲದ ರಕಮನ್ನು, ಆ ಬಾವಿಯು ಪೂರ್ಣವಾಗಿ ನಿರುಪಯೋಗಿಯಾಗಿದೆ ಎಂಬ ಕಾರಣದಿಂದ ವಸೂಲು ಮಾಡದೆ ಬಿಡತಕ್ಕದ್ದಲ್ಲ. ಪ್ರಾರಂಭಿಸಲ್ಪಡುವ ಕೆಲಸವು ಮುಂದೆ ನಿರುಪಯೋಗಿ ಯಾದರೆ, ಆ ಬಗ್ಗೆ ಯಾವದೇ ಜವಾಬದಾರಿಯನ್ನು ವಹಿಸದೆ ಚೌಕಶಿ ಮಾಡುವ ಅಮಲದಾರನು ಅದೇ ಕಾಲಕ್ಕೆ ಪರೀಕ್ಷಾರ್ಥವಾಗಿ* ಬೋರಿಂಗದ ಸಲುವಾಗಿ ಶಿಫಾರಸು ಮಾಡಬಹುದು, ಮತ್ತು ಈ ರೀತಿಯಿಂದ ಪರೀಕ್ಷೆ ಮಾಡದಿದ್ದ ಯೋಚಿ ಸಿದ ಬಾವಿಯ ಸಂಬಂಧದಿಂದ ಸಾಲವನ್ನು ನಾಕಾರಿಸಬಹುದು, (ಎಫ್. ೫೩೭– ೦೮), ಅಥವಾ ಯಾವದೊಂದು ಕೆರೆಯನ್ನು ಅಥವಾ ಒಡ್ಡನ್ನು ಕಟ್ಟಬೇಕೆಂದು ಯೋಜಿಸ ಲಾಗಿದ್ದರೆ, ಅವನು ಅದರ ಬಗ್ಗೆ ಯೋಗ್ಯ ಪ್ಲಾನುಗಳನ್ನು ಬೇಡಬೇಕು ಮತ್ತು ಕೆಲ ಸದ ವಿಸ್ತಾರದ ಮಾನದಿಂದ ಅದರ ಸಲುವಾಗಿ ಎಗ್ಜಿಕ್ಯೂಟಿವ್ ಎಂಜಿನಿಯರರನ, ಅಥವಾ ಯೋಗ್ಯನಾದ ಓವರಸಿಯರರನ ಅಥವಾ ಇತರ ಯಾವನೊಬ್ಬ ತಜ್ಞನ ಮಂಜೂರಿ ಯನ್ನು ಪಡೆಯತಕ್ಕದ್ದೆಂದು ಹುಕುಮು ಮಾಡಬೇಕು. ಸರಿಯಾಗಿಲ್ಲದ ಪಾತಳಿ ಗಳಿರುವ, ಹೆಚ್ಚಿನ ನೀರು ಹೋಗುವದರ ಸಲುವಾಗಿ ಯೋಗ್ಯವಾದ ಕೋಡಿಗಳಿಲ್ಲದ ಹಾಗೂ ಅಣೆಕಟ್ಟಿನ ಸಲುವಾಗಿ ಗಟ್ಟಿಮುಟ್ಟಾದ ತಳಹದಿಯಿಲ್ಲದ ಕೆರೆಗಳನ್ನು ತಜ್ಞ ರಲ್ಲದಂಥ ಸಾಲಪಡೆದ ಜನರು ಕಟ್ಟಿಸಿ ಬಹಳ ಹೆಚ್ಚಿನ ನಷ್ಟಕ್ಕೆ ಗುರಿಯಾಗಿದ್ದಾರೆ. ಎಂಜಿನಿಯರರು ಮಾಡಿದ ಕಾಮಗಾರಿಗಳು ಕೂಡ ಈ ಮೇರೆಗೆ ಆಗಾಗ್ಗೆ ನಿಷ್ಫಲವಾಗುವ ಸಂಭವವಿದ್ದಾಗ, ಖಾಸಗೀ ಜನರ ಆಲೋಚನೆಯನ್ನವಲಂಬಿಸಿ ಇಂಥ ಕೆಲಸಗಳನ್ನು ಕೈಕೊಳ್ಳುವದು ಮತ್ತಿಷ್ಟು ಭಯಪ್ರದವು. ರೇವೆಯು

---

* "ಜಂಪರಗಳ" ಪ್ರಯೋಗಗಳ ಸಲುವಾಗಿ ಆರ್. ೧೦೩೦೭–೦೭, ಆರ್. ೧೧೯೮೨–೦೭ ಇವುಗಳನ್ನು ನೋಡಿರಿ.

ಎಲ್ಲಕ್ಕೂ ಮೊದಲಿನ ಗೊತ್ತಿದ್ದ ತಗಾಯಿ ಸಾಲಗಳ ಸಲುವಾಗಿರುವ ಕಾನೂನುಗಳನ್ನು, ಸನ್ ೧೭೯೩ನೇ ಇಸವಿಯ ಅಗಸ್ಟ ತಿಂಗಳ ೬ನೇ ತಾರೀಖಿನ ಸರಕಾರೀ ಸರ್ಕ್ಯುಲರದಲ್ಲಿ ಕಾಣಬಹುದು: ಮತ್ತು ಈ ಕಾನೂನುಗಳಲ್ಲಿ ಸಹ ತಗಾಯಿಯನ್ನು ಒಂದು ಸಂಸ್ಥೆಯೆಂದು ಭಾವಿಸಲಾಗಿದೆ.

ಒಟ್ಟುಗೂಡುವಂತೆಯೂ ಹೊಲಗಳು ಹೆಚ್ಚು ಎತ್ತರವಾಗುವಂತೆಯೂ ಹಾಕಲಾಗುವ ಒಡ್ಡುಗಳು ಒಮ್ಮೊಮ್ಮೆ ಬಹಳ ನೀರನ್ನು ಸಂಚಯಿಸಿಡುತ್ತವೆ ಮತ್ತು ಇದರ ಮೂಲಕ ಒಡೆದು ಹೋಗುತ್ತವೆ. ಭೂಮಿಯ ಸುಧಾರಣೆಯನ್ನು ಮಾಡುವಾಗ ಯಾವ ಯಾವ ಕಷ್ಟಗಳು ಅಡ್ಡ ಬರುತ್ತವೆಂಬದನ್ನು ಸವಿಸ್ತರವಾಗಿ ಹೇಳುವದಕ್ಕೆ ಪ್ರಯತ್ನಿಸುವದು ಅಶಕ್ಯವಾಗುವದು. ಚೌಕಶಿ ಮಾಡುವವನು ಹಾಗೂ ಸಾಲ ಮಂಜೂರು ಮಾಡುವವನು, ಸುಲಭವಾಗಿ ಮುಂಚಿತವಾಗಿ ಕಂಡುಹಿಡಿಯಬಹುದಾದ ಅಪಾಯಗಳನ್ನು ಸಾಲ ತಕ್ಕೊಳ್ಳುವವರಿಗೆ ತೋರಿಸಿಕೊಡಬೇಕು, ಮತ್ತು ಈ ಬಗ್ಗೆ ಸ್ಪಷ್ಟವಾದ ಮುಂಜಾಗ್ರತೆಯನ್ನು ತಕ್ಕೊಳ್ಳಬೇಕೆಂದು ಫರ್ಮಾಯಿಸಬೇಕು. ಹೀಗೆ ಸಲಹೆಯನ್ನು ಕೊಟ್ಟಾಗ್ಯೂ ಕೂಡ, ಯಾವದೊಂದು ಕೆಲಸವು ನಿಷ್ಫಲವಾಗುವದರಿಂದ ಅದರ ಮೂಲಕ ಸಾಲ ತಕ್ಕೊಳ್ಳುವವನ ಮೇಲೆ ಉಂಟಾಗುವ ಜವಾಬದಾರಿಯು ಎಂದಿಗೂ ಸರಕಾರದವರ ಮೇಲೆ ಬೀಳಲಿಕ್ಕಿಲ್ಲ.

# ಭೂಮಿಯ ಸುಧಾರಣೆ ಮಾಡುವ ವಿಷಯದ ಆಕ್ಟಿನನ್ವಯದ ಕಾನೂನುಗಳು.

ಕ., ಪ್ರಾಂ. ಹಾಗೂ ಮಾ. ಎಂಬ ಸಂಕೇತಾಕ್ಷರಗಳಲ್ಲಿ ಸಮಾವಿಷ್ಟ ಮಾಡಲ್ಪಟ್ಟ ಅಮಲದಾರರು (ಆರ್. ೪೧೯೫—೦೦).

೧. ಈ ಕಾನೂನುಗಳಲ್ಲಿ, ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವದೇ ಬಾಧೆ ಬಾರದಿದ್ದರೆ—

(ಅ) ಗುಜರಾತದ ತಾಲುಕದಾರರ ವಿಷಯದ (ಸನ್ ೧೮೮೮ನೇ ಇಸವಿಯ ೬ನೇ) ಆಕ್ಟು ಅಮಲಿನಲ್ಲಿರುವ ಜಿಲ್ಲೆಗಳಲ್ಲಿ, ತಾಲುಕದಾರೀ ಸೆಟ್ಲಮೆಂಟ ಆಫಿಸರನು, ತನ್ನ ವ್ಯವಸ್ಥೆಯ ಕೆಳಗಿರುವ ಯಾವತ್ತು ಸ್ಥಾವರ ಆಸ್ತಿಯ ಬಾಬತಿನಲ್ಲಿ ಕಲೆಕ್ಟರನಿರುತ್ತಾನೆಂದು ತಿಳಿಯಲ್ಪಡಬೇಕು, ಮತ್ತು

(ಬ) ಅರಣ್ಯ ಖರಗಣೆಯಲ್ಲಿ, ಡಿವಿಜನಲ್ ಫಾರೆಸ್ಟ ಆಫಿಸರನು ಕಲೆಕ್ಟರನಿರುತ್ತಾನೆಂದು ಮತ್ತು ರೇಂಜ ಫಾರೆಸ್ಟ ಆಫಿಸರನು ಮಹಾಲಕರಿಯಿರುತ್ತಾನೆಂದು ತಿಳಿಯಲ್ಪಡಬೇಕು (ಎಫ್. ೩೧೦೪—೦೭, ೧೭೯೫—೦೮),

(ಕ) ಡಾಂಗಗಳಲ್ಲಿ*, ಅಸಿಸ್ಟಂಟ ಪೊಲಿಟಿಕಲ್ ಏಜಂಟನು ಪ್ರಾಂತ ಅಮಲದಾರನ ಅಧಿಕಾರಗಳನ್ನೂ, ಸುರತದಲ್ಲಿಯ ಪೊಲಿಟಿಕಲ್ ಏಜಂಟನು ಕಲೆಕ್ಟರನ ಅಧಿಕಾರಗಳನ್ನೂ ನಡಿಸುತ್ತಾರೆ,

*ಡಾಂಗಗಳಿಗೆ (ಇವುಗಳು ಬ್ರಿಟಿಶ್ ಪ್ರದೇಶಗಳಾಗಿರದಿದ್ದಾಗ್ಯೂ ಇವುಗಳಿಗೆ ಈ ಆಕ್ಟುಗಳನ್ವಯದ ಸಾಲಗಳ ಫಾಯದೆಯು ದೊರೆಯುತ್ತದೆ) ಒಂದು ಬೇರೆ ಗ್ರಾಂಟು ದೊರೆಯುತ್ತದೆ, ಮತ್ತು ಯಾವತ್ತು ನಮೂನೆಗಳು ಒಂದು ಬೇರೆ ತಾಲೂಕದಂಥವಿರುತ್ತವೆ; ಆದರೆ ನಗದು ಹಣವು ಚಿಖಲಿ ತಾಲೂಕಿನಿಂದ ಒಂದು ಮುಂಗಡ ರಕಮಾಗಿ ತೆಗೆದುಕೊಳ್ಳಲ್ಪಟ್ಟು ಅಲ್ಲಿಯೇ ಸರಿಗೊಳಿಸಲ್ಪಡುತ್ತದೆ. ತ. ನ. ೧ ಮತ್ತು ೭ ಇವುಗಳು ಒಂದೇ ಗಂಟನಿಂದ ಕೊಡಲ್ಪಡುವ ರಕಮುಗಳ ಹಾಗೂ ವಸೂಲಿಗಳ ಸಲುವಾಗಿ ಚಿಖಲಿಯಲ್ಲಿ ಇಡಲ್ಪಡುವವು, ಮತ್ತು ಅವೇ ನಮೂನೆಗಳು ತಪಶೀಲುವಾರಾಗಿ ಮತ್ತು ಇತರ ಯಾವತ್ತು ನಮೂನೆಗಳು ಆಹವಾದಲ್ಲಿ ಇಡಲ್ಪಡುವವು: ಮತ್ತು ೯ನೇ ನಮೂನೆಯು ಅಲ್ಲಿ ತಯಾರಿಸಲ್ಪಟ್ಟು ಅದನ್ನು ಚಿಖಲಿಯ ಲೆಕ್ಕಗಳೊಡನೆ ಸರಿಗೂಡಿಸಲಾಗುವದು.

(ಡ) (ಪೂರ್ವ ಖಾನದೇಶದ) ಚೋಪಡಾ, ರಾವೇರ ಹಾಗೂ ಯಾವಲದಲ್ಲಿ ಮತ್ತು ಉತ್ತರ ಖಾನದೇಶದಲ್ಲಿ, ಫಾರೆಸ್ಟ ಸೆಟ್ಲಮೆಂಟುಗಳ ಸಲುವಾಗಿ, ಡಿವಿಜನಲ್ ಫಾರೆಸ್ಟ ಆಫಿಸರನು ಪ್ರಾಂತ ಅಮಲದಾರನಿರುತ್ತಾನೆಂದು ತಿಳಿಯಲ್ಪಡ ಬೇಕು (ಎಫ್. ೩೧೦೧ ಮತ್ತು ೪೦೩೬—೧೫ ಹಾಗೂ ೯೯೯—೧೬),

(ಇ) ಪಶ್ಚಿಮ ಖಾನದೇಶ ಜಿಲ್ಲೆಯ ಉತ್ತರ ಖಾನದೇಶ ಭಾಗ ದಲ್ಲಿ, ಫಾರೆಸ್ಟ ಸೆಟ್ಲಮೆಂಟುಗಳ ಸಲುವಾಗಿ, ಪೂರ್ವ ಶಿರ್ಪುರದ, ಪಶ್ಚಿಮ ಶಿರ್ಪುರದ, ಶಹಾಡಾದ ಹಾಗೂ ತಲೋಡಾದ ರೇಂಜ ಫಾರೆಸ್ಟ ಆಫಿಸರರು ತಮ್ಮ ತಮ್ಮ ರೇಂಜುಗಳಲ್ಲಿ ಮಹಾಲಕರಿಯ ಅಧಿಕಾರಗಳನ್ನು ನಡಿಸ ತಕ್ಕದ್ದು (ಎಫ್. ೩೭೦೩—೧೭).

ಟಿಪ್ಪಣಿ.—ಅಹಮ್ಮದಾಬಾದ ಜಿಲ್ಲೆಯಲ್ಲಿ, ಪ್ರಾಂತ ಅಮಲದಾರನು ತಾಲುಕ ದಾರರಿಗೆ ಸಾಲಗಳನ್ನು ಕೊಡುತ್ತಾನೆ ಮತ್ತು ಅವುಗಳನ್ನು ಅವರಿಂದ ವಸೂಲು ಮಾಡುತ್ತಾನೆ, ಹಾಗೂ ತಾಲುಕದಾರೀ ಒಕ್ಕಲುಗಳಿಗೆ (ಸಂಯುಕ್ತ ಬಾಂಡುಗಳ ಅಥವಾ ತಾಲುಕದಾರನ ಜಾಮೀನಿನ ಮೇರೆಗೆ) ಸಾಲಗಳನ್ನು ಕೊಡುತ್ತಾನೆ ಮತ್ತು ಅವುಗಳನ್ನು ಅವರಿಂದ ವಸೂಲು ಮಾಡುತ್ತಾನೆ (ಆರ್. ೧೨೭೬—೨೧).

## ಸಾಲಗಳನ್ನು ಕೊಡಬಹುದಾದ ಉದ್ದೇಶಗಳು.

೨. (೧). ೪ (೨)ನೇ ಕಲಮಿನ ಅರ್ಥದ ಮೇರೆಗೆ ಭೂಮಿಯ ಸುಧಾರಣೆಯ ೧ ಕೆಲಸವಾಗಿರುವ ಯಾವದೇ ಉದ್ದೇಶದ ಸಲುವಾಗಿ ಸಾಲಗಳನ್ನು ಕೊಡಬಹುದು.

[೧] (೧) ಪ್ರಾಸ್ತಾವಿಕ ಟಿಪ್ಪಣಿಗಳನ್ನು, ವಿಶೇಷವಾಗಿ, ೯ನೇ ಪ್ಯಾರಾವನ್ನು ನೋಡಿರಿ.

(೨) ಬಾವಿಗಳು, ಕೆರೆಗಳು, ಇತರ ನೀರಾವರಿಯ ಕಾಮಗಾರಿಗಳು ಮತ್ತು ನೀರು ಹಂಚುವದರ ಸಲುವಾಗಿರುವ ಕಾಲಿವೆಗಳು, ಪಂಪುಗಳು; ಬಾವಿಗಳೊಳಗಿನ ಹಾಗೂ ನೀರಿನ ಹರಿಗಳೊಳಗಿನ ರೇವನ್ನು ತೆಗೆದು ಹಾಕುವದು, ಮತ್ತು ಸಿಂಧದೊಳಗಿನ ಕಾರಿಯಾಗಳು (ಎಫ್. ೧೭೫೫— ೧೫), ಬೋರಿಂಗದಿಂದ (ತೂತು ಕೊರೆದು) ಬಾವಿ ಅಗಿಸುವದು ಮತ್ತು ನೀರನ್ನು ಕಂಡುಹಿಡಿಯುವದು; ಸೌಳು ಭೂಮಿಗಳನ್ನು ಅಥವಾ ಜಂಗಲು ಭೂಮಿಗಳನ್ನು ಮರಳಿ ಸಾಗು ಮಾಡುವದು, "ವರಕೆ" ಗಳನ್ನು ಭತ್ತದ ಗದ್ದೆಗಳನ್ನಾಗಿ ರೂಪಾಂತರಿಸುವದು, ಸಮಪಾತಳಿ

ಯಾಗುವಂತೆ ಮಾಡುವದು ಹಾಗೂ ಕಲ್ಲುಗಳನ್ನು ತೆಗೆದು ಹಾಕುವದು, ಒಡ್ಡುಗಳನ್ನು ಕಟ್ಟುವದು ಮತ್ತು ನೀರು ಹರಿದುಹೋಗುವದರ ಸಲುವಾಗಿ ಹರಿಯನ್ನು ತಯಾರ ಮಾಡಿಕೊಡುವದು; ಬೇಲೀ ಕಟ್ಟುವದು, ಆಳವಾಗಿ ಬೇರೂರಿದ ಕಳೆಗಳನ್ನು ತೆಗೆದುಹಾಕುವದು, ತೆಂಗಿನ, ಯಾಲಕ್ಕಿಯ, ಮಸಾಲೆ ಜೀನಸುಗಳ, ಚಹ ಮುಂತಾದ ಹೆಚ್ಚಿಗೆ ಖರ್ಚಿನ ಬೆಳೆಗಳನ್ನು ಬೆಳೆಯುವದು; ಇವೆಲ್ಲವುಗಳು ಮೇಲಿ ಯೋಚಿಸಿದ ಉದ್ದೇಶಗಳಾಗಿರುತ್ತವೆ. ಎಣ್ಣೀ ಗಾಣಗಳನ್ನೂ, ಕಬ್ಬಿನ ಗಾಣಗಳನ್ನೂ, ಬಾಯಿಲರಗಳನ್ನೂ, ಹತ್ತಿಯ ಜಿನ್ನುಗಳನ್ನೂ, ಭತ್ತದಿಂದ ಅಕ್ಕಿ ಮಾಡುವ ಯಂತ್ರಗಳನ್ನೂ ಇವುಗಳಲ್ಲಿ ಸೇರಿಸಲಾಗಿದೆ; ಹೊಲ ಮಾಡುವವರು ತಮ್ಮ ಉದ್ಯೋಗದ ಬಗ್ಗೆ ಸಾಮಾನ್ಯವಾಗಿ ಮಾಡುವ ಕೃತಿಗಳ ಸಲುವಾಗಿ—ಆದರೆ ಉದ್ಯೋಗಗಳಲ್ಲಿ ನಡಿಸಲ್ಪಡುವ ಕೃತಿಗಳ ಸಲುವಾಗಿ ಅಲ್ಲ—ಇತರ ಯಂತ್ರಗಳು (ಎಫ್. ೧೦೫೫—೧೬). ಅನಾನುಕೂಲವಾಗಿರುವ ಭೂಮಿಯ ತುಂಡುಗಳನ್ನು ಕೊಂಡುಕೊಂಡು, ಭೂಮಿಯು ತುಂಡು ತುಂಡುಗಳಾಗಿ ವಿಭಾಗಿಸಿ ಹೋಗುವದನ್ನು ನಿಲ್ಲಿಸುವದು ಅಥವಾ ಪ್ರತಿಬಂಧಿಸುವದು ನ್ಯಾಯ್ಯವಾದ ಭೂಮಿಯ ಸುಧಾರಣೆಯಾಗಿರುತ್ತದೆ (ಆರ್. ೫೨೦, ತಾರೀಖು ೨೫ನೇ ಜೂನ ಸನ್ ೧೯೨೫ನೇ ಇಸವಿ).

(೩) ಕೋಳೀ ಜಾತಿಯ ಮೀನಗಾರರಿಗೆ ತಮ್ಮ ಮನೆಗಳನ್ನು ಪುನಃ ಕಟ್ಟುವದರ ಸಲುವಾಗಿ ಸಾಲಗಳನ್ನು ಕೊಡುವದು ಈ ಆಕ್ಟಿನ ಕೆಳಗೆ ಬರುವದಿಲ್ಲ (ಎಫ್. ೨೨೮೨—೦೬, ೩೫೧—೧೫).

(೨) ಸರಕಾರದವರ ಮಂಜೂರಿ ಬೇಕಾಗುವ ಸಾಲಗಳ ಬಾಬತುಗಳಲ್ಲಿ ಸರಕಾರದವರು, ಮತ್ತು ಪ್ರತಿಯೊಬ್ಬ ಕಮೀಶನರನ ಅಥವಾ ಕಲೆಕ್ಟರನ ಮಂಜೂರಿ ಬೇಕಾಗುವ ಸಾಲಗಳ ಬಾಬತುಗಳಲ್ಲಿ ಅವನು, ಸಾಲವು ಯಾವ ಯೋಜನೆಯ ಸಲುವಾಗಿ ಬೇಕಾಗಿರುವದೋ ಅಂಥ ಯೋಜನೆಯ ಬಗ್ಗೆ ತಪಶೀಲವಾರ ಪ್ಲಾನುಗಳನ್ನು ಮತ್ತು ಅಂದಾಜುಗಳನ್ನು ಅಥವಾ ಅವಶ್ಯವೆನಿಸಬಹುದಾದ ತಜ್ಞರ ಅಭಿಪ್ರಾಯವನ್ನು ಕೇಳಬಹುದು.

[೨] (೧) ಈ ಅಂದಾಜುಗಳು ಹಾಗೂ ಪ್ಲಾನುಗಳು, ಮಹತ್ವದ ಮೂಲ ಸಾರ್ವಜನಿಕ ಕಾಮಗಾರಿಗಳ ಬಗ್ಗೆ ತಯಾರಿಸಲ್ಪಟ್ಟ, ಪರಿಷ್ಕೃತ ಹಾಗೂ ಪೂರ್ಣ ತಪಶೀಲುಗಳುಳ್ಳ ನಕಾಶಗಳನ್ನು ಮತ್ತು ಅವುಗಳ ವಿಭಾಗಗಳನ್ನು ಹಿಡಿದು, ಕೆಲಸದ ಸ್ವರೂಪ ಹಾಗೂ ಪರಿಮಾಣಕ್ಕನುಸಾರವಾಗಿ ಕೈಯಿಂದಲೇ ತೆಗೆದ ಉದ್ದಳತೆ ಹಾಗೂ ಅಗಲಳತೆಗಳ ಆಕೃತಿಗಳ ವರೆಗಿನ ಕೆಲಸಗಳಿಗೆ ವ್ಯಾಪಿಸುವವು. ಇವುಗಳನ್ನು ತಯಾರಿಸುವದರ ಸಲುವಾಗಿ ಯಾವನೊಬ್ಬ ಅಸಿಸ್ಟಂಟ ಎಂಜಿನಿಯರನನ್ನು ಅಥವಾ ಎಕ್ಝಿಕ್ಯೂಟಿವ್ ಎಂಜಿನಿಯರನನ್ನು ನೇಮಿಸುವದು ಅವಶ್ಯವಾಗ

ಬಹುದು. ಇಂಥ ಯಾವದೇ ಖರ್ಚನ್ನು ಸದರಿ ಸಾಲ ಕೊಡುವ ಬಗ್ಗೆ ತಗಲಿದ ಖರ್ಚೆಂದು ಸಾಲದ ಮೇಲೆ ಕೂಡ್ರಿಸಲಾಗುವದು ಹಾಗೂ ವಸೂಲ ಮಾಡಲಾಗುವದು. ಅರ್ಜದಾರನು ತನ್ನ ಸ್ವಂತ ಪ್ಲಾನು ಮುಂತಾದವುಗಳನ್ನು ಸಾದರ ಮಾಡಿದರೆ, ಅವುಗಳನ್ನು ಯಾವನೊಬ್ಬ ತಜ್ಞ ಅಮಲದಾರನು ಪರೀಕ್ಷಿಸಿ ಮಂಜೂರ ಮಾಡಿದರೆ ಸಾಕಾಗುವದು. ಈ ಬಗ್ಗೆ ಆದ ಯಾವದೇ ಖರ್ಚನ್ನು ಸಾಲದ ಸಲುವಾಗಿ ಆದ ಖರ್ಚೆಂದು ತಿಳಿಯಲಾಗುವದು (೧೬ನೇ ಕಾನೂನು). ಆರ್. ೧೫೫೧— ೨೦ ಇದರಲ್ಲಿ, ಒಂದು ಭೂಮಿ ಬೆಳಿಸುವ ಒಂದು ದೊಡ್ಡ ಸುಧಾರಣೆಯ ಯೋಜನೆಯನ್ನು ಕುರಿತು ಚರ್ಚೆ ಮಾಡಿರುತ್ತದೆ.

(೨) ಯಾವದೊಂದು ಸಾಲವನ್ನು ಕೊಡುವದಕ್ಕೆ ನಾಕಾರಿಸಿದರೆ, ಖರ್ಚಾದ ರಕಮನ್ನು ಸಾಲದೊಳಗಿಂದ ವಸೂಲ ಮಾಡಲಿಕ್ಕೆ ಬರುವಂತಿಲ್ಲ. ಆದ್ದರಿಂದ ಅರ್ಜದಾರನಿಗೆ, ಅವನ ಸಾಲವು ಮಂಜೂರಾಗುವ ಪರ್ಯಾಯದ ವರೆಗೆ ಇಂಥ ಖರ್ಚನ್ನು ಮುಂಗಡವಾಗಿ ತನ್ನ ಹತ್ತರಿರುವ ಹಣದಿಂದ ಮಾಡತಕ್ಕದ್ದೆಂದು ಫರ್ಮಾಯಿಸುವದು ಲೇಸು. ಸಾಲವನ್ನು ಕೊಡಬೇಕೆಂದು ನಿರ್ಣಯವಾದ ನಂತರ ಮಾಡಿದ ಖರ್ಚನ್ನು ಮಾತ್ರ ಅನುಕೂಲವಾಗಿ ಬಾಂಡಿನಲ್ಲಿ ಕೂಡಿಸಬಹುದು.

(೩) ಭೂಮಿಯೊಳಗಿನ ಕಳೆ ತೆಗೆದುಹಾಕುವ ಅಥವಾ ಉಗಿಯಿಂದ ನಡಿಸಲ್ಪಡುವ ರೆಂಟೆಯನ್ನು ಹೊಡಿಸುವ ಕೆಲಸದ ಸಲುವಾಗಿ ಯಾವನೊಬ್ಬ ಸರ್ಕಲ್ ಇನ್ಸ್‌ಪೆಕ್ಟರನು ಅಥವಾ ತಲಾಟಿಯು ಅಥವಾ ಇಂಥ ಲಾಯಖಿಗಳುಳ್ಳ ಸೇವಾನಿವೃತ್ತನಾದ ಯಾವನೊಬ್ಬ ಅಮಲದಾರನು ಕಳೆ ತೆಗೆದುಹಾಕಬೇಕಾಗಿರುವ ಕ್ಷೇತ್ರದ ಸಾದಾ ಮೋಜಣಿಯ ಅಳತೆಗಳನ್ನು ಮಾಡಿದರೆ ಸಾಕಾಗುವದು.

## ಅರ್ಜಿಗಳನ್ನು ಯಾರಿಗೆ ಹಾಗೂ ಯಾವ ನಮೂನೆಗಳಲ್ಲಿ ಮಾಡಬೇಕು.

೩. ಅವಲಕಾರಕೂನನ ದರ್ಜೆಗಿಂತ ಕಡಿಮೆ ದರ್ಜೆಯವನಲ್ಲದ ಯಾವನೇ ರೆವಿನ್ಯೂ ಅಮಲದಾರನಿಗೆ ೪ ಅರ್ಜಿಗಳನ್ನು ಸಾದರ ಮಾಡಬಹುದು.

ಅರ್ಜಿಗಳನ್ನು, ಇದರ ಜೊತೆಗೆ ಜೋಡಿಸಿದ ಅರ್ಜಿಯ ನಮೂನೆಯಲ್ಲಿ ಬರಹಮೂಲಕವಾಗಿ ಮಾಡಬಹುದು; ಅಥವಾ ಬಾಯಿಮಾತಿನಿಂದ ಮಾಡಿದ್ದರೆ, ಅವುಗಳನ್ನು ಸದರಿ ಅಮಲದಾರನು ಆ ನಮೂನೆಯಲ್ಲಿ ಬರೆಯಬೇಕು. ೫ ಅರ್ಜಿ ಮಾಡಲಿಚ್ಛಿಸುವವರಿಗೆ ಖಾಲಿ ನಮೂನೆಗಳನ್ನು ಪುಕ್ಕಟೆಯಾಗಿ ಪೂರೈಸಲಾಗುವದು. ಕೊಡಲಿರುವ ಜಾಮೀನು ಭೂಮಿಯಾಗಿದ್ದರೆ, ಅದಕ್ಕೆ

ಸಂಬಂಧಪಡುವ ಹಕ್ಕುಗಳ ಪತ್ರಕದ ಉತಾರೆಗಳನ್ನು ಸದರಿ ಅರ್ಜಿಗೆ ಜೋಡಿಸಿರಬೇಕು:

ಆದರೆ ಗೊತ್ತುಪಡಿಸುವದೇನಂದರೆ, ಯಾವದೊಂದು ಸಮಾಯಿಕ [೩] ಬಾಂಡಿನನ್ವಯ ಸಮಾಯಿಕವಾಗಿ ಹಾಗೂ ಬೇರೆಬೇರೆಯಾಗಿ ಅಥವಾ ಯಾವದೊಂದು ಸಾಮಾನ್ಯ ಬಾಂಡಿನನ್ವಯ ಬೇರೆಬೇರೆ ಯಾಗಿ ಸಾಲವನ್ನು ತಕ್ಕೊಳ್ಳುವದರ ಸಲುವಾಗಿ ಯಾವದೊಂದು ಗ್ರಾಮದ ಅನೇಕ ಗ್ರಾಮಸ್ಥರು ಒಂದು ಸಂಯುಕ್ತ ಅರ್ಜಿಯನ್ನು ಮಾಡಿದರೆ, ಅವರ ಪೈಕಿ ಪ್ರತಿಯೊಬ್ಬ ಅರ್ಜದಾರನು ಪ್ರತ್ಯೇಕವಾದ ಅರ್ಜಿಯನ್ನು ಮಾಡುವ ಅವಶ್ಯವಿರುವದಿಲ್ಲ, ಆದರೆ ೨ನೇ ಹಾಗೂ ೩ನೇ ಬಾಂಡಿನ ನಮೂನೆಗಳಲ್ಲಿ ಅವಶ್ಯವಿರುವ ತಪಶೀಲುಗಳನ್ನು ಪರಿಶಿಷ್ಟಗಳಲ್ಲಿ ತಯಾರಿಸಿಡಲಾಗುವದು.

[೩] ೧೨ನೇ ಕಾನೂನಿನ ಕೆಳಗೆ, ಸಮಾಯಿಕ ಬಾಂಡುಗಳ ಮೇಲಿನ ಶರಾಗಳನ್ನು ನೋಡಿರಿ.

[೪] (೧) (ಅ) ಕಲೆಕ್ಟರನ ಪೂರ್ವಮಂಜೂರಿಯಿಲ್ಲದೆ, ಯಾವನೊಬ್ಬ ಸರಕಾರೀ ನೌಕರನ ಯಾವದೇ ಅರ್ಜಿಯನ್ನು ಸ್ವೀಕರಿಸತಕ್ಕದ್ದಲ್ಲ ಅಥವಾ ಅದರ ಬಗ್ಗೆ ಚೌಕಶಿ ಮಾಡತಕ್ಕದ್ದಲ್ಲ (ಎಫ್. ೩೮೩೧—೯೨).

(ಬ) ಇವೆರಡು ಆಕ್ಟುಗಳ ಪೈಕಿ ಯಾವದೇ ಆಕ್ಟಿನನ್ವಯದ ಅರ್ಜಿಗಳ ಮೇಲೆ ಯಾವದೇ ಕೋರ್ಟ ಫೀಯು ಬೀಳಲಿಕ್ಕಿಲ್ಲ (ಹಿಂದುಸ್ಥಾನ ಸರಕಾರದವರ ಜಾಹೀರನಾಮೆ ನಂಬರು ೪೬೫೦, ತಾರೀಖು ೧೦ನೇ ಸಪ್ಟಂಬರ ಸನ್ ೧೮೮೯ನೇ ಇಸವಿ).

(ಕ) ಎಷ್ಟು ಅರ್ಜಿಗಳು ಬಂದವು, ಅವುಗಳ ಪೈಕಿ ಎಷ್ಟು ನಿಕಾಲೆ ಮಾಡಲ್ಪಟ್ಟವು ಹಾಗೂ ಎಷ್ಟು ಬಾಕಿ ಉಳಿದಿರುತ್ತವೆ ಎಂಬದರ ಸಂಖ್ಯೆಯನ್ನು ತೋರಿಸುವ ಪತ್ರಕವನ್ನು ತಯಾರಿಸಬೇಕೆಂದು ಶರಾವಿರುವದಿಲ್ಲ. ವರಿಷ್ಠ ಅಮಲದಾರರು ಈ ಬಗ್ಗೆ ತಪಾಸಣೆ ಮಾಡಿ ಖಾತ್ರಿ ಮಾಡಿಕೊಳ್ಳಬೇಕು, ಮತ್ತು ತಮ್ಮ ಕೈಕೆಳಗಿನವರ ಮೇಲೆ ಪತ್ರಕಗಳನ್ನು ತಯಾರಿಸುವ ಕೆಲಸದ ಭಾರವನ್ನು ಹೇರಬಾರದು. ಮಾಸಿಕ ರಿಪೋರ್ಟಿನ ಮೇಲಿಂದ, ತ. ನ. ಲ, ಖರ್ಚಿನ ಪ್ರಮಾಣವನ್ನು ನಿಯಮಿತವಾಗಿ ನೋಡಬೇಕು.

(ಡ) ಈ ತಪಾಸಣೆಯ ಕೆಲಸಕ್ಕೆ ಸಹಾಯವಾಗುವಂತೆ ಮಾಡುವದಕ್ಕಾಗಿ, ಯಾವನೊಬ್ಬ ಅಮಲದಾರನ ಕಡೆಗೆ ಪರಭಾರೆಯಾಗಿ ಅಥವಾ ಬೇರೊಬ್ಬ ಅಮಲದಾರನ ಕಡೆಯಿಂದ ಬಂದ ಯಾವತ್ತು ಅರ್ಜಿಗಳನ್ನು, ಅವುಗಳ ನಿಕಾಲೆಯಾಗುವ ವರೆಗೆ, ಒಂದೇ ಗಂಟಿನಲ್ಲಿಡತಕ್ಕದ್ದು. ಕೊನೆಗೆ ನಾಕಾರಿಸಲ್ಪಟ್ಟ ಅರ್ಜಿಗಳನ್ನು ಒಂದು ವರ್ಷದ ನಂತರ ನಾಶ ಮಾಡುವದರ

ಸಲುವಾಗಿ ಬೇರೊಂದು ಗಂಟಿನಲ್ಲಿಡಬೇಕು; ಅವುಗಳನ್ನು ರಿಕಾರ್ಡ ರೂಮಿಗೆ ಕಳುಹಿಸತಕ್ಕದ್ದಲ್ಲ, ಆದರೆ ಅವುಗಳು ನಾಕಾರಿಸಲ್ಪಟ್ಟಿದ್ದರ ಮೇಲೆ ಅಪೀಲ ಮಾಡಲ್ಪಡಲಿಕ್ಕೆ ಅಥವಾ ತಕರಾರು ಮಾಡಲ್ಪಡಲಿಕ್ಕೆ ಸಹಾಯವಾಗಬೇಕೆಂಬ ಉದ್ದೇಶದಿಂದ ಅವುಗಳನ್ನು ಸಾಕಷ್ಟು ಅವಧಿಯ ವರೆಗೆ ಕಾದಿಡತಕ್ಕದ್ದು. ಮಂಜೂರಾದ ಅರ್ಜಿಗಳನ್ನು ತ. ನ. ೩ ಇದರ ಜೊತೆಗೆ ಫೈಲ ಮಾಡಿ ಇಡಬೇಕು.

(೩) ಪ್ರತಿಯೊಂದು ಷಾಣ್ಮಾಸಿಕ ಪತ್ರಕದಲ್ಲಿ, ಮಾಮಲೇದಾರನು, ತನ್ನ ಹಾಗೂ ತನ್ನ ಕೈಕೆಳಗಿನವರ ಸಲುವಾಗಿ, ತನ್ನ ಹತ್ತರ ಚೌಕಸಿ ಮಾಡದೆ ಉಳಿದ ಅರ್ಜಿಗಳ ಸಂಖ್ಯೆಯನ್ನು ನಮೂದಿಸಬೇಕು. ಆ ಮೇಲೆ ಪ್ರಾಂತ ಅಮಲದಾರನು ತನ್ನ ಹತ್ತರ ಉಳಿದಿರುವ ಸಂಖ್ಯೆಯನ್ನು ಇದಕ್ಕೆ ಕೂಡಿಸುವನು. ಇದರ ಮೇಲಿಂದ, ಕಲೆಕ್ಟರನು, ಕೆಲಸವು ಹ್ಯಾಗೆ ಮುಂದರಿಯುತ್ತಿದೆಂದು ಕಂಡುಹಿಡಿಯಲಿಕ್ಕೆ, ಹಾಗೂ ಈ ಸಂಖ್ಯೆಯು ಬಹಳೇ ಹೆಚ್ಚಾಗಿದ್ದರೆ, ಹೀಗಾಗುವದರ ಕಾರಣವೇನೆಂದು ಕೇಳಲಿಕ್ಕೆ ಅಥವಾ ಇತರ ವಿಶಿಷ್ಟ ಉಪಾಯಗಳನ್ನು ಕೈಕೊಳ್ಳುವದಕ್ಕೆ ಸಮರ್ಥನಾಗುವನು. ಸಾಮಾನ್ಯ ಜಿಲ್ಲೆಗಳಲ್ಲಿ ಹಾಗೂ ಸಾಮಾನ್ಯ ಕಾಲದಲ್ಲಿ ಕೆಲಸವನ್ನು ವಾಜವಿ ರೀತಿಯಿಂದ ತೀರಿಸುವದಕ್ಕೆ ಈ ಪದ್ಧತಿಯು ಕಾರ್ಯಕ್ಷಮವಿರುತ್ತದೆ. ಕಚೇರಿಯನ್ನು ತಪಾಸಿಸುವಾಗ ಅರ್ಜಿಗಳ ಗಂಟನ್ನು ತಪಾಸಿಸಲಾಗುವದು, ಮತ್ತು ಎಲ್ಲಕ್ಕೂ ಹಳೆಯ ತಾರೀಖಿನ ನಿಕಾಲಿ ಮಾಡದಿದ್ದ ಅರ್ಜಿಗಳ ಅವಧಿಯನ್ನು ಕಂಡುಹಿಡಿಯಲಾಗುವದು ಮತ್ತು ಈ ಬಗ್ಗೆ ಇರುವ ಪ್ರತಿಯೊಂದು ಬಾಬತನ್ನು ಪರೀಕ್ಷಿಸಲಾಗುವದು. ಯಾವದೊಂದು ತಾಲೂಕಿನಲ್ಲಿ ಅಥವಾ ಜಿಲ್ಲೆಯಲ್ಲಿ ನಿಕಾಲಿ ಮಾಡುವ ಕೆಲಸವು ಸಾವಕಾಶವಾಗಿ ಸಾಗಿರುತ್ತದೆಂದು ಕಲೆಕ್ಟರನಿಗೆ ಕಂಡುಬಂದರೆ, ಅವನು ಚೌಕಸಿಗಳ ಸಂಬಂಧದ ಅಂಕೆಸಂಖ್ಯೆಗಳನ್ನು ಪೂರ್ಣವಾಗಿ ಕೊಟ್ಟು ಪ್ರತಿ ಹದಿನೈದು ದಿವಸಕ್ಕೆ ಅಥವಾ ತಿಂಗಳಿಗೆ ಪತ್ರಕವನ್ನು ಸಾದರ ಮಾಡಬೇಕೆಂದು ಫರ್ಮಾಯಿಸಿ ಆ ಬಗ್ಗೆ ಶಿಕ್ಷೆ ಮಾಡಬಹುದು.

೫] (೧) ಪತ್ತಿನ ಸಹಕಾರೀ ಸಂಘವಿರುವ ಯಾವದೊಂದು ಗ್ರಾಮದಿಂದ ಅರ್ಜಿಗಳು ಬಂದರೆ, ಸದರಿ ಸಾಲವನ್ನು ಸದರಿ ಸಂಘದಿಂದ ಅಥವಾ ಅದರ ಮುಖಾಂತರವಾಗಿ ಕೊಡಲಿಕ್ಕೆ ಬರುತ್ತದೆಯೋ ಅಥವಾ ಇಲ್ಲವೋ ಎಂಬದನ್ನು ಮೊದಲಿಗೆ ನೋಡಬೇಕು (ಆರ್. ೧೧೫೮—೦೯, ೯೭೫೧—೧೩, ೧೭೮೯—೧೪) [ಮಿ. ಯೂಬ್ಯಾಂಕರವರ ಮ್ಯಾನುಅಲ್ ಅಫ್ ಕೋ-ಅಪರೇಟಿವ್ ಸೊಸಾಯಟೀಸ್, ೧೯೧೯, ಇದರ (ಇಂಗ್ರೇಜಿ) ೩೦೮ನೇ ಪುಟದಲ್ಲಿರುವ ೧೦ನೇ ಪ್ಯಾರಾವನ್ನು ನೋಡಿರಿ]. ಅರ್ಜದಾರನು ತನ್ನ ಗ್ರಾಮ ಸಂಘದ ಮೆಂಬರನಿರದಿದ್ದರೆ ಮತ್ತು ಅವರು ಅವನನ್ನು ಮೆಂಬರನಾಗಿ ಮಾಡಿಕೊಳ್ಳದಿದ್ದರೆ, ಅವನ ಪತ್ತು ಹೆಚ್ಚಿಗಿರುತ್ತದೆಂದು ತಿಳಿಯತಕ್ಕದ್ದಲ್ಲ. ಸಾಲಗಳನ್ನು ಸಂಘಗಳಿಗೆ ಕೊಡಲಾಗುವದಿಲ್ಲ, ಆದರೆ ಅವುಗಳನ್ನು ಸದರಿ ಸಂಘಗಳ ಮುಖಾಂತರವಾಗಿಯೇ ಕೊಡಬಹುದು. ಹೀಗೆ

ಸಾಲಗಳನ್ನು ಕೊಡುವ ವಿಷಯದ ತಾತ್ಪೂರ್ತಿಕ ಕಾನೂನುಗಳು ಈ ಕೆಳಗಿನಂತಿವೆ :—

(೧) ಸಂಘವು ಅ ಅಥವಾ ಬ ಎಂಬದಾಗಿ ವರ್ಗೀಕರಿಸಲ್ಪಟ್ಟಿರಬೇಕು ಮತ್ತು ತನ್ನ ಒಪ್ಪಿಗೆಯನ್ನು ಕೊಡಬೇಕು ಹಾಗೂ ರಕಮನ್ನು ನಿರ್ದಿಷ್ಟ ಮಾಡಬೇಕು.

(೨) ಐದು ವರ್ಷಗಳ ಕಾಲಾವಧಿಗಿಂತ ಹೆಚ್ಚಿಗೆ ಚಾಲೂ ಇರಲಾಗದ ಭೂಮಿಯ ಸುಧಾರಣೆಯ ಸಲುವಾಗಿರುವ ಸಾಲಗಳ ಬಗ್ಗೆ ೫೦೦ ರೂಪಾಯಿಗಳ ವರೆಗೆ ಮತ್ತು ಹೊಲ ಮಾಡುವವರ ಬಗ್ಗೆ ಕೊಡಲಾಗುವ ಸಾಲಗಳ ಸಲುವಾಗಿ ಎರಡು ವರ್ಷಗಳ ಬಗ್ಗೆ ೨೦೦ ರೂಪಾಯಿಗಳ ವರೆಗೆ ಸದರಿ ಸಂಘವು ಜಾಮೀನಾಗಬಹುದು, ಆದರೆ ಸ್ಥಾವರ ಆಸ್ತಿಯ ಒತ್ತೆಯನ್ನು ಪಡೆಯಬೇಕು.

(೩) ಸಂಘದ ಮುಖಾಂತರ ವಸೂಲಿಯನ್ನು ಮಾಡಲಾಗುವದು (ಆರ್. ೩೩೫೨-೧೯). ಆರ್. ೧೯೯೬-೧೭ ಮತ್ತು ಆರ್. ೧೪೮೫೩-೧೯ ಇವುಗಳನ್ನೂ ನೋಡಿರಿ.

(೨) ಸನ್ ೧೯೨೪ನೇ ಇಸವಿಯ ಜುಲೈ ತಿಂಗಳ ೧೨ನೇ ತಾರೀಖಿನ ಎಫ್. ೧೪೪೧ನೇವರನ್ವಯ ಕಮಿಶನರರಿಂದ ಹಾಗೂ ಸಹಕಾರೀ ಸಂಘಗಳ ರೆಜಿಸ್ಟ್ರಾರರಿಂದ ಆರಿಸಲ್ಪಟ್ಟ ಕೆಲವು ಕ್ಷೇತ್ರಗಳಲ್ಲಿ ಭೂಮಿಯ ಸುಧಾರಣೆಯ ಸಲುವಾಗಿರುವ ಯಾವತ್ತು ಸಾಲಗಳನ್ನು ಸಂಘಗಳ ಮುಖಾಂತರವಾಗಿಯೇ ಕೊಡಬೇಕು; ಇಲ್ಲದಿದ್ದರೆ, ಸದರಿ ಸಂಘಗಳ ಅರ್ಜಿಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡಬೇಕು. ದುಷ್ಕಾಳದಲ್ಲಿ ಅಥವಾ ಮಹರ್ಗತೆಯ ಕಾಲದಲ್ಲಿ ಈ ಹುಕುಮನ್ನು ರದ್ದ ಮಾಡುವ ಹಕ್ಕನ್ನು ಸರಕಾರದವರು ತಮ್ಮ ಕಡೆಗೆ ಇಟ್ಟುಕೊಂಡಿದ್ದಾರೆ. ಇತರ ಕ್ಷೇತ್ರಗಳಲ್ಲಿ ರೆವಿನ್ಯೂ ಅಮಲದಾರರು ಸಾಲಗಳನ್ನು ಹಂಚುವ ಕೆಲಸವನ್ನು ಮಾಡತಕ್ಕದ್ದು.

ಈ ಮಂಜೂರಿ ಪಡೆದ ಕ್ಷೇತ್ರಗಳಲ್ಲಿ ರೆವಿನ್ಯೂ ಅಮಲದಾರರು ಸಂಘಗಳ ಮೆಂಬರರಿಗೆ ಭೂಮಿಯ ಸುಧಾರಣೆಯ ಸಲುವಾಗಿ ಯಾವವೇ ಸಾಲಗಳನ್ನು ಕೊಡತಕ್ಕದ್ದಲ್ಲ. ನೇಮಿಸಿಕೊಟ್ಟ ರಕಮುಗಳನ್ನು ಹಂಚುವಾಗ ಇತರ ಕ್ಷೇತ್ರಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡತಕ್ಕದ್ದು, ಯಾಕೆಂದರೆ, ಮಂಜೂರಿ ಪಡೆದ ಕ್ಷೇತ್ರಗಳಲ್ಲಿ ಜನರು ತಮ್ಮ ಸಂಘಗಳ ಮೇಲೆಯೇ ಅವಲಂಬಿಸಿರಬೇಕೆಂದು ಸರಕಾರದವರು ಇಚ್ಛಿಸುತ್ತಾರೆ (ಎಫ್. ೧೪೪೧, ತಾರೀಖು ೧೨ನೇ ಎಪ್ರಿಲ ಸನ್ ೧೯೨೭ನೇ ಇಸವಿ). ಮಂಜೂರಿ ಪಡೆದ ಕ್ಷೇತ್ರಗಳು (ಎಫ್. ೧೪೪೧, ತಾರೀಖು ೫ನೇ ಜೂನ ಸನ್ ೧೯೨೫ನೇ ಇಸವಿ) ಈ ಕೆಳಗಿನಂತಿರುತ್ತವೆ :—

| | | |
|---|---|---|
| ಉತ್ತರ ಭಾಗ | .... | ಭಡೋಚ ಜಿಲ್ಲೆ; ಓಲಪಾಡ. |
| ಮಧ್ಯ ಭಾಗ | .... | ಭೀಮಥಡಿ, ವಾಳವೆ, ಕರಾಡ, ಧುಳೇ, ಸಿಂಧಖೇಡ, ಬಾರ್ಸಿ, ಪಾಚೋರಾ, ಪರೋಳಾ, ಭುಸಾವಳ (ಆದರೆ ಎದ್ಲಾಬಾದನಲ್ಲ, ಎಫ್. ೧೪೪೧, ತಾರೀಖು ೧೭ನೇ ಎಪ್ರಿಲ ಸನ್ ೧೯೨೭ನೇ ಇಸವಿ), ಬಾಗಲಾಣ. |

ದಕ್ಷಿಣ ಭಾಗ .... ಧಾರವಾಡ, ಹುಬ್ಬಳ್ಳಿ, ಗದಗ, ರೋಣ, ಚಿಕ್ಕೋಡಿ, ಪರಸಗಡ, ಹುಕ್ಕೇರಿ, ಕುಮಠಾ, ಕಾರವಾರ.

ಸಿಂಧ .... ಹೈದರಾಬಾದ, ಹಾಲಾ, ಟಿ—ಅಲ್ಲಾಹ್ಯಾರ, ಕಂಬಾರ, ಮಿರೋಖಾನ, ರಾಟೊಡೆರೊ, ಲಾರಖಾನಾ.

## ಅರ್ಜಿಯ ನಮೂನೆ.

| | |
|---|---|
| ೧. ಅರ್ಜದಾರನ ಹೆಸರು ಮತ್ತು ವಾಸಸ್ಥಳ. | |
| ೨. ರಕಮು ಮತ್ತು ಸಾಲದ ಉದ್ದೇಶ (ಮತ್ತು ಮಾಡಯೋಜಿಸಿದ ಸುಧಾರಣೆಯ ಪ್ರಕಾರ). | |
| *೩. ಗ್ರಾಮ, ಮತ್ತು ಸುಧಾರಿಸತಕ್ಕ ಭೂಮಿಯ ಸರ್ವೇ ನಂಬರು, ಆಕಾರ (ಮತ್ತು ಭೂಮಾಲಾ ಆಗಿದ್ದರೆ, ಜೂಡಿ) ಮತ್ತು ಗ್ರಾ. ನ. ನಂ. ೬ ಅಥವಾ ಒನೇದರಲ್ಲಿಯ ಉತಾರೆಗಳು. | |
| *೪. ಸುಧಾರಿಸತಕ್ಕ ಭೂಮಿಯಲ್ಲಿ ಅರ್ಜದಾರನ ಹಕ್ಕುಗಳು. | |
| ೫. ಜಾಮೀನಿನ ಪ್ರಕಾರ, ವೈಯಕ್ತಿಕ ಅಥವಾ ಇತರ. | |

* ಹೊಲ ಮಾಡುವವರ ಸಾಲಗಳ ಬಾಬತಿನಲ್ಲಿ ಬಿಟ್ಟುಬಿಡಬೇಕು.

ತಾರೀಖು ಅರ್ಜದಾರನ ಸಹಿ.

ಟಿಪ್ಪಣಿಗಳು—

(೧) ಅವಲ ಕಾರಕೂನನ ದರ್ಜೆಗಿಂತ ಕಡಿಮೆ ದರ್ಜೆಯವನಲ್ಲದ ಯಾವನೇ ಮುಲ್ಕೀ ಅಮಲದಾರನಿಗೆ ಈ ಅರ್ಜಿಯನ್ನು, ಯಾವದೇ ಕೋರ್ಟ-ಫೀ ಸ್ಟಾಂಪು ಹಚ್ಚದೆ, ಮಾಡಬಹುದು.

(೨) ಕಾಲಕಾಲಕ್ಕೆ ಅಮಲಿನಲ್ಲಿರುವ (೧೧ನೇ ಕಾನೂನು ನೋಡಿರಿ) ಬಡ್ಡಿಯ ದರದಿಂದ ಬಡ್ಡಿಯನ್ನು ಸಾಲದ ಮೇಲೆ ಆಕರಿಸಲಾಗುವದು, ಮತ್ತು ಕಂತುಗಳನ್ನು ೨೦ ವರ್ಷಗಳಿಗಿಂತ ಹೆಚ್ಚಲ್ಲದಷ್ಟು ವರ್ಷಗಳ ವರೆಗೆ ಹಂಚಿಹಾಕಲಾಗುವದು.

(೩) ಸುಧಾರಿಸಲ್ಪಡಬೇಕಾದ ಭೂಮಿಯೊಳಗಿನ ಅರ್ಜದಾರನ ಹಿತಸಂಬಂಧದ ಬೆಲೆಯು ಸಾಲದ ರಕಮಿನಷ್ಟಿದ್ದರೆ, ಬೇರೆ ಯಾವದೇ ತಾರಣವು ಬೇಕಾಗಲಿಕ್ಕಿಲ್ಲ; ಆ ಬೆಲೆಯು ಸಾಲದ ರಕಮಿನಷ್ಟಿರದಿದ್ದರೆ, ಬೇರೆ ಯಾವದೇ ತಾರಣವು ಬೇಕಾಗುವದು, ಮತ್ತು ಈ ತಾರಣವು ಸಾಮಾನ್ಯವಾಗಿ, ಖಾತ್ರಿ ಜಾಮೀನಿನ ರೂಪದಲ್ಲಿ ಅಥವಾ ಸುಧಾರಿಸಲ್ಪಡಬೇಕಾದ ಭೂಮಿಯ ಹೊರತಾಗಿ ಇತರ ಸ್ಥಾವರ ಆಸ್ತಿಯ ಒತ್ತೆಯ ರೂಪದಲ್ಲಿ ಕೊಡಲ್ಪಡಬೇಕಾಗುವದು.

## ಚೌಕಶಿಯ ನಮೂನೆ.

### ಚೌಕಶಿ ಮಾಡುವವನು ಅರ್ಜಿಯೊಳಗಿನ ತಪಶೀಲುಗಳನ್ನು ನಿಜಪಡಿಸಿದ ನಂತರ ತುಂಬತಕ್ಕ ತಪಶೀಲುಗಳು.

[ಚೌಕಶಿಯು ಯಾವ ಪರ್ಯಾಯದಲ್ಲಾದರೂ ಸಾಲವನ್ನು ಕೊಡಲಾಗದೆಂದು ಕಂಡುಬಂದರೆ, ಚೌಕಶಿ ಮಾಡುವವನು ಅದನ್ನು ಬಂದ ಮಾಡಿ ಅದರ ಸಂಬಂಧದ ಕಾರಣಗಳನ್ನು ಬರೆದು, ಆ ಮೇಲೆ ಉಳಿದ ತಪಶೀಲುಗಳನ್ನು ತುಂಬುವದನ್ನು ನಿಲ್ಲಿಸತಕ್ಕದ್ದು.]

---

೬.—ಗ್ರಾಮ ನಮೂನೆ ನಂ. ೬ ಇದರ ೧೧ನೇ ಆಸನದೊಳಗಿನಂತೆ ಖಾತೆದಾರನ ಹೆಸರು; ಅವನಿಗೆ ಸುಧಾರಣೆ ಮಾಡುವಿಕೆ ಆಧಾರ ವಿಲ್ಲವಿದ್ದರೆ, ಸಾಲ ಕೊಡುವಿಕೆ [illegible] ಧಾರಣ ಮಾಡುವವನ ಹೆಸರು ಯಾವುದೋ?

೭.—ಅವನು ಸರಕಾರೀ ನೌಕರನಾಗಿರುವನೋ ಅಥವಾ ಯಾವದಾದರೂ ಸಹಕಾರೀ ಸಂಘದ ಮೆಂಬರನಾಗಿರುವನೋ ಹ್ಯಾಗೆ, ಅಥವಾ ಕೊಟ್ಟ ಭೂಮಿಯ ಇನಾಮು ದಾರನ, ಖೋತನ ಅಥವಾ ಜಹಗೀರದಾರನ ರೈತನಾಗಿರುವನೋ ಹ್ಯಾಗೆ?

೮.—ಕೊಟ್ಟ ತಾರಣ:—

(೧) ಅದೇ ಭೂಮಿಯಾದರೆ, ಅರ್ಜಿಯೊಳಗಿನ ಅರ್ಜದಾರನ ಹಿತಸಂಬಂಧದ ಕಿಮ್ಮತ್ತು;

(೨) ಜಾತಜಾಮೀನಿದ್ದರೆ, ಜಾಮೀನದಾರನ ಅಥವಾ ಜಾಮೀನದಾರರ ಹೆಸರು ಮತ್ತು ದರ್ಜೆ ಹಾಗೂ ಅವರ [illegible] ಕಿಮ್ಮತ್ತು;

(೩) ಸದರಿ ಭೂಮಿಯ ಹೊರತಾಗಿ ಇತರ ಆಸ್ತಿ ಇದ್ದಲ್ಲಿ, ಅದರ ಸ್ವರೂಪ, ಸರ್ವೇ ನಂಬರು, ಕ್ಷೇತ್ರಫಲ, ಆಕಾರ (ಮತ್ತು ಜೂಡಿ) ಹಾಗೂ ಅದರ ಮೇಲಿನ ಮುಂಚಿನ ಭಾರಗಳ ಕಿಮ್ಮತ್ತು ಮತ್ತು ಅವು ಎಷ್ಟಿರುವವೆಂಬದು.

---

*೯.—ಸುಧಾರಣೆ :—

(೧) ಸುಧಾರಣೆ ಮಾಡತಕ್ಕ ಭೂಮಿಯ (ಬೇರೊಂದು ಕಾಗದದ ಮೇಲೆ) ನಕಾಶೆ;

(೨) ಆ ವೇಳೆಯಲ್ಲಿರುವ ಯಾವದಾದರೂ ಕಟ್ಟಡದ ಸ್ಥಿತಿಯು ಪೂರ್ಣ ವರ್ಣನೆ ಮತ್ತು ಅಳತೆ;

(೩) ಮಾಡಯೋಚಿಸಿದ ಸುಧಾರಣೆಗಳ ಪೂರ್ಣ ವರ್ಣನೆ ಮತ್ತು ಅಳತೆ;

(೪) ಬಾವಿಗಳ ಬಾಬತಿನಲ್ಲಿ, ಅಲ್ಲಿ ತೂತು ಕೊರೆಯುವ ಅಥವಾ ಜಂಪರುಗಳ ಪ್ರಯೋಗಗಳನ್ನು ಮಾಡಿತ್ತೋ ಹ್ಯಾಗೆ, ಮತ್ತು ಮಾಡಿದ್ದರೆ, ಅದರ ಪರಿಣಾಮ ವೇನಾಯಿತೆಂಬದು;

(೫) ಉಪಯೋಗಿಸತಕ್ಕ ಸಾಮಾನುಸುಮಾನಿನ ವರ್ಣನೆ;

(೬) ಮಾಡಯೋಚಿಸಿದ ಸುಧಾರಣೆಯ ಅಂದಾಜ ಖರ್ಚು;

(೭) ಅದರಿಂದ ಫಾಯಿದೆಯಾಗತಕ್ಕ ಕ್ಷೇತ್ರ ಫಲದ ಅಂದಾಜು;

(೮) ಸದರಿ ಕೆಲಸದಿಂದ ಹೆಚ್ಚಾಗಿ ಸಿಗಬಹು ದಾದ ನಕ್ಕಿ ಹುಟ್ಟುವಳಿಯ ಅಂದಾಜು ಕಿಮ್ಮತು;

(೯) ಸದರಿ ಕೆಲಸದಿಂದ ಯಾವ ವರ್ಷ ಫಾಯಿದೆ ಯಾಗಲಿಕ್ಕೆ ಶುರುವಾಗುವದೋ ಆ ವರ್ಷ, ಮತ್ತು ಸುಧಾರಣೆಯು ನಡಿಯ ತಕ್ಕ ಮುದ್ದತು;

(೧೦) ಸಾಲ ತೆಗೆದುಕೊಳ್ಳುವವನ ಸಾಮರ್ಥ್ಯ; ಅವನಿಗೆ ಇತರ ಕಡೆಯಿಂದ ಸಹಾಯ ಸಿಗುವಂತಿದೆಯೋ ಹ್ಯಾಗೆ ಎಂಬದರ ಕಡೆಗೆ ಲಕ್ಷ್ಯಕೊಡಿರಿ.

* ಹೊಲ ಮಾಡುವವರ ಸಾಲಗಳ ಬಾಬತಿನಲ್ಲಿ ಇದನ್ನು

೧೦.—ಕೊಡತಕ್ಕ ಹಣವು ಬಾಕಿ ಇದ್ದರೆ ಅದು, ಉದಾಹರಣಾರ್ಥವಾಗಿ, ಭೂಮಿಯ ಮಹಸೂಲು, ತಗಾಯಿ, ಇರಿಗೇಶನ್; ಗ್ರಾಮ ನಮೂನೆ ನಂಬರು ೮-ಬ, ತಗಾಯಿ ನಮೂನೆ ನಂಬರು ೪, ಮತ್ತು ಇರಿಗೇಶನದ ಲೆಕ್ಕಗಳನ್ನು ನೋಡಿರಿ.

೧೧.—(೧) ಸದರಿ ಸಾಲವನ್ನು ಒಂದೇ ಗಂಟಿನಿಂದ ಅಥವಾ ಕಂತುಗಳಿಂದ ಕೊಡತಕ್ಕದ್ದೆಂಬದು;

*(೨) ಕಂತುಗಳಿಂದ [೬] ಕೊಡತಕ್ಕದ್ದಿದ್ದರೆ, ಅವುಗಳ ತಾರೀಖುಗಳು ಮತ್ತು ಸದರಿ ಮಾಡಯೋಚಿಸಿದ ಕೆಲಸದ ಯಾವ ಭಾಗವನ್ನು ಅಥವಾ ಭಾಗಗಳನ್ನು ನಂತರದ ಕಂತುಗಳನ್ನು ಕೊಡುವ ಮುಂಚೆ ಮುಗಿಸತಕ್ಕದ್ದೆಂಬದು.

೧೨.—ಯಾವ ಅವಧಿಯಲ್ಲಿ ಸದರಿ ಕೆಲಸವನ್ನು ಮುಗಿಸತಕ್ಕದ್ದೋ ಅಥವಾ ಸದರಿ ಉದ್ದೇಶವನ್ನು ಕೈಗೂಡಿಸತಕ್ಕದ್ದೋ ಆ ಅವಧಿ.

೧೩.—ಸಾಲದ ಹಣವನ್ನು ತಿರಿಗಿ ಕೊಡುವದು:—

*(೧) ೯ (೯)ರ ಸಂಬಂಧದ ಮೊದಲನೇ ಕಂತಿನ ವರ್ಷ;

(೨) ಕಂತಿನ ರಕಮು (ಅಸಲು ಮತ್ತು ಬಡ್ಡಿಯನ್ನು ಒಟ್ಟುಗೂಡಿಸಿ);

(೩) ಹಣ ತಿರಿಗಿ ಕೊಡುವ ಅವಧಿ (೩೨ನೇ ಪುಟದಲ್ಲಿರುವ ಕೋಷ್ಟಕವನ್ನೂ ೪ನೇ ಕಾನೂನನ್ನೂ, ಹೊ. ಸಾ. ಆಕ್ಟ್, ನೋಡಿರಿ);

(೪) ಮೇಲಿನ ತಪಶೀಲುಗಳು ನಿಜವಿರುವವೆಂಬ ಬಗ್ಗೆ ಮತ್ತು ಅವುಗಳಿಗೆ ತಮ್ಮ ಸಮ್ಮತಿ ಅದೆಂಬ ಬಗ್ಗೆ ಸಹಿಗಳು:—

(೧) ಅರ್ಜದಾರ,

* ಹೊಲ ಮಾಡುವವರ ಸಾಲಗಳ ಬಾಬತಿನಲ್ಲಿ ಇದನ್ನು ಬಿಟ್ಟುಬಿಡಬೇಕು.

*(೨) ಅರ್ಜದಾರನ ಹೊರ್ತಾಗಿ ಸದರಿ ಭೂಮಿಯಲ್ಲಿ ಹಿತಸಂಬಂಧವಿರುವ ಇತರ ಮನುಷ್ಯನು,

(೩) ಜಾತಜಾಮೀನು ಕೊಟ್ಟವನು,

(೪) ಎರಡನೇ ತಾರಣವನ್ನು ಕೊಟ್ಟ ಮನುಷ್ಯನು,

(೫) ಸಾಕ್ಷಿ ಹಾಕುವ ಅಮಲದಾರನ ಸಹಿ.

*೧೪.—ತಕರಾರುಗಳಿದ್ದರೆ, ಅವು :—

(೧) ೫ನೇ ಕಲಮಿನನ್ವಯ ನೋಟೀಸನ್ನು ಪ್ರಸಿದ್ಧ ಮಾಡಿದ ತಾರೀಖು ;

(೨) ಮುಂದೆ ತರಲಾದ ಹರಕತುಗಳು ಯಾವ ತರದವೆಂಬದು ಮತ್ತು ಅವುಗಳ ಸಂಬಂಧದ ಹುಕುಮುಗಳು.

೧೫.—ಲಗ್ತು ಇಡತಕ್ಕ ಕಾಗದಪತ್ರಗಳ ಯಾದಿಯು :—

(೧) ಹಕ್ಕುಗಳ ಪತ್ರಕದೊಳಗಿನ ಉತಾರೆಗಳು, ಗ್ರಾಮ ನಮೂನೆ ನಂಬರು ೬ ಮತ್ತು ೭.

(೨) ಹಾಜರು ಮಾಡಿದ ದಸ್ತೈವಜುಗಳು (ಇದ್ದರೆ).

(೩) ಪಂಚನಾಮೆಗಳು ಅಥವಾ ಈ ಕೆಳಗಿನ ಬಾಬತುಗಳ ಬಗ್ಗೆ ಅಮಲದಾರರು ಸ್ವತಃ ಅಂಕೆಗಳಿಂದ ಮಾಡಿದ ಅಜಮಾಸು :—

(ಅ) ಸುಧಾರಣೆ ಮಾಡತಕ್ಕ ಭೂಮಿಯ ಕಿಮ್ಮತು.

(ಬ) ಎರಡನೇ ತಾರಣದ ಕಿಮ್ಮತು.

*(ಕ) ಕೆಲಸಕ್ಕೆ... ತಗಲುವ ಅಂದಾಜು ಖರ್ಚು.

*(ಡ) ನಫೆಯ ಅಂದಾಜು ರಕಮು.

---

* ಹೊಲ ಮಾಡುವವರ ಸಾಲಗಳ ಬಾಬತಿನಲ್ಲಿ ಇದನ್ನು ಬಿಟ್ಟುಬಿಡಬೇಕು.

*(೪) ಜನೇ ಕಲಮಿನನ್ವಯದ ನೋಟೀಸು, ಬಂದ ಹರಕತುಗಳ ಮತ್ತು ಜುಕುಮಿನ ಸಹಿತ.

೧೬.—ಚೌಕಶಿ ಮಾಡುವವನ ಕೈಬರಹದಲ್ಲಿ ಅವನ ಅಭಿಪ್ರಾಯ ಮತ್ತು ಶಿಫಾರಸು :—

ಟೀಪು.—ಚೌಕಶಿ ಮಾಡುವವನು, ಇತರ ಬಾಬತುಗಳ ವಿಷಯದಲ್ಲಿ ಬೇರಾ ಬರೆಯುವಾಗ, ವಿಶೇಷವಾಗಿ (ಸದರಿ ಕೆಲಸವು ಸಾಧ್ಯವಿದೆಂಬ ಬಗ್ಗೆ, ಹಾಗೂ) *ಮಿತವ್ಯಯದ ಬಾಬತಿನಲ್ಲಿ ಮತ್ತು ತನ್ನ ಜವಾಬದಾರಿಯನ್ನು ನೇಮದಿಂದ ನೆರವೇರಿಸುವ ವಿಷಯದಲ್ಲಿ ಅರ್ಜದಾರನ ನಡತೆಯ ಸಂಬಂಧದಿಂದ ಟೀಪು ಬರೆಯಬೇಕು (ನಿಯಮ ೧೦ನ್ನು ನೋಡಿರಿ).

ರ ಕಡೆಗೆ ಮಂಜೂರಿಯ ಬಗ್ಗೆ ಸಾದರ ಮಾಡಿರುತ್ತದೆ.

ಮಾಮಲೇದಾರ ಅಥವಾ ಇತರ ಚೌಕಶಿ ಮಾಡುವವನು.

೧೭. ರೂ. (ಅಜ್ಜಗಳಲ್ಲಿ) ಬಗ್ಗೆ

ಮಂಜೂರಿ ಕೊಡಲಾಗಿದೆ.

ತಾರೀಖು

ಸಾಲ ಕೊಡುವವನು.

*೧೮.—ಕೆಲಸವು ಮುಗಿದ ಬಗ್ಗೆ ಮಖಲಾಸ :—

(೧) ತಪಾಸಣಿ ಮತ್ತು ರಿಪೋರ್ಟಿನ ಬಗ್ಗೆ (ಸರ್ಕಲ್ ಇನ್ಸ್‌ಪೆಕ್ಟರನಿಗೆ) ಹುಕುಮು ಮಾಡಿದ ತಾರೀಖು ;

(೨) ತಪಾಸಣಿಯ ಪರಿಣಾಮ, ಮತ್ತು ದುರುಪಯೋಗ ಮಾಡಿದ್ದಿದ್ದರೆ, ಅದರ ಬಗ್ಗೆ ಮಾಡಿದ ತಜವೀಜು.

---

ದಫ್ತರದಲ್ಲಿ ದಾಖಲು ಮಾಡಿರುತ್ತದೆ.

ತಾರೀಖು ಮಾಮಲೇದಾರ ಅಥವಾ ಮಹಾಲಕರಿ.

---

* ಹೊಲ ಮಾಡುವವರ ಸಾಲಗಳ ಬಾಬತಿನಲ್ಲಿ ಇದನ್ನು ಬಿಟ್ಟುಬಿಡಬೇಕು.

[೬] ವಾರ್ಷಿಕ ಕಂತನ್ನು ನಿರ್ಣಯಿಸುವ ರೀತಿ;

ಸಾಲ ತಕ್ಕೊಳ್ಳುವವನ ಸಾಮರ್ಥ್ಯದ ಮೇರೆಗೆ ಮರ್ಯಾದಿತ ಮಾಡಲ್ಪಟ್ಟ ಕಂತಿನ ರಕಮು, ಸಾಲ ಕೊಟ್ಟ ರಕಮಿನ ಮೇಲಿನ ಬಡ್ಡಿಯ ರಕಮಿಗಿಂತ (೧೧ನೇ ಕಾನೂನನ್ನು ನೋಡಿರಿ) ಹೆಚ್ಚಿಗಿರತಕ್ಕದ್ದೆಂಬದು ಮೊದಲನೇ ಸಂಗತಿಯಾಗಿರುತ್ತದೆ. ಹೀಗಿರದಿದ್ದರೆ, ಸಾಲವು ಒಂದೇ ಸಮನಾಗಿ ಅಂತ್ಯವಿಲ್ಲದೆ ಬೆಳೆಯುತ್ತಾ ಹೋಗುವದು. ಆದ್ದರಿಂದ, "ಸಾಮರ್ಥ್ಯವನ್ನು" ಮೊದಲು ನಿರ್ಣಯಿಸಬೇಕು, ಮತ್ತು ಸದರಿ ರಕಮಿನೊಳಗಿಂದ ಸಾಲಕೊಟ್ಟ ರಕಮಿನ ಮೇಲಾಗುವ ವಾರ್ಷಿಕ ಬಡ್ಡಿಯನ್ನು ಕಳೆಯಬೇಕು. ಹೀಗೆ ಮಾಡಿದ ಬಳಿಕ ಉಳಿಯುವ ಪ್ರತಿಯೊಂದು ರೂಪಾಯಿಯನ್ನು, ಸಾಲ ತಕ್ಕೊಳ್ಳುವವನು ಈ ಕೆಳಗೆ ಹೇಳಿದಷ್ಟು ವರ್ಷಗಳಲ್ಲಿ ತಿರಿಗಿ ಕೊಡಬಹುದು :—

ಬಡ್ಡಿಯ ದರದಂತೆ.

| ವರ್ಷಗಳು. | ೬.೭೫ | ೭.೨೯೧೬ | ೭.೮೧೨೫ | ೮.೩ |
|---|---|---|---|---|
| | ಯಾವದೊಂದು ಸಾಲವನ್ನು. | | | |
| ೫ | ೫.೭೨ | ೫.೭೮ | ೫.೮೪ | ೫.೯ |
| ೬ | ೭.೧೧ | ೭.೨೧ | ೭.೨೯ | ೭.೪ |
| ೭ | ೮.೫೯ | ೮.೭೩ | ೮.೮೬ | ೯.೦ |
| ೮ | ೧೦.೧೭ | ೧೦.೩೭ | ೧೦.೫೬ | ೧೦.೮ |
| ೯ | ೧೧.೮೫ | ೧೨.೧೨೫ | ೧೨.೩೮ | ೧೨.೭ |
| ೧೦ | ೧೩.೬೫ | ೧೪.೦೧ | ೧೪.೩೫ | ೧೪.೭ |
| ೧೧ | ೧೫.೫೮ | ೧೬.೦೩ | ೧೬.೪೭ | ೧೬.೯ |
| ೧೨ | ೧೭.೬೩ | ೧೮.೨ | ೧೮.೭೫ | ೧೯.೪ |
| ೧೩ | ೧೯.೮೨ | ೨೦.೫೩ | ೨೧.೨೩ | ೨೧.೮ |
| ೧೪ | ೨೨.೧೬ | ೨೩.೦೮ | ೨೩.೮೮ | ೨೪.೮ |
| ೧೫ | ೨೪.೬೫ | ೨೫.೭ | ೨೬.೭೫ | ೨೮.೮ |
| ೧೬ | ೨೭.೩೧ | ೨೮.೫೭ | ೨೯.೮೪ | ೩೧.೨ |
| ೧೭ | ೩೦.೧೬ | ೩೧.೬೬ | ೩೩.೧೭ | ೩೪.೭ |
| ೧೮ | ೩೩.೧೯ | ೩೪.೯೭ | ೩೬.೭೬ | ೩೮.೭ |
| ೧೯ | ೩೬.೪೩ | ೩೮.೩೨ | ೪೦.೬೩ | ೪೨.೭ |
| ೨೦ | ೩೯.೮೯ | ೪೨.೩೨ | ೪೫.೮೧ | ೪೭.೫ |

ಭೂಮಿಯ ಸುಧಾರಣೆಯ ಸಲುವಾಗಿರುವ ಸಾಲಗಳ ಬಗ್ಗೆ, ಸದರಿ ಆಕ್ಟು, ಕಾಯದೆಯಿಂದ ಈ ಅವಧಿಯನ್ನು ೩೫ ವರ್ಷವೆಂದು ಠರಾಯಿಸಿರುತ್ತದೆ, ಆದರೆ ೨೦ ವರ್ಷಕ್ಕಿಂತ ಹೆಚ್ಚಿನ ಅವಧಿಯನ್ನು ಸರಕಾರದವರ ಹೊರ್ತಾಗಿ ಬೇರೆ ಯಾರಿಗೂ ಮಂಜೂರ ಮಾಡಲಿಕ್ಕೆ ಅಧಿಕಾರವಿರುವದಿಲ್ಲ.

ಈ ಪರಾಕಾಷ್ಠೆಯ ಅವಧಿಗೆ ಒಳಪಟ್ಟು, ಕಂತುಗಳ ಸಂಖ್ಯೆಯನ್ನು ಸಹ ಸುಧಾರಣೆಯು ಚಾಲೂ ಇರುವ ಅವಧಿಯ ಮೇಲಿಂದ (ಪ್ರಾಸ್ತಾವಿಕ ವಿಚಾರಗಳ ೯ನೇ ಪ್ಯಾರಾ.) ನಿಯಮಿತ ಮಾಡಬೇಕು.

ಈ ಮೇಲಿನ ಸಂಖ್ಯೆಗಳನ್ನು ದಶಾಂಶದ ಒಂದನೇ ಅಥವಾ ಎರಡನೇ ಸ್ಥಾನದ ವರೆಗೆ ಮಾತ್ರ ತಕ್ಕೊಳ್ಳಲಾಗಿರುವದರಿಂದ, ಅವು ಸರಾಸರಿ ಸರಿಯಾಗಿರುತ್ತವೆ. ಆದ ಕಾರಣ, ಹಿಂತಿರುಗಿ ಕೊಡಲಿಕ್ಕೆ ಬೇಕಾಗುವ ವರ್ಷಗಳ ಸಂಖ್ಯೆಯು, ಈ ಕೋಷ್ಟಕದಲ್ಲಿ ಸರಿಯಾಗಿ ಲೆಕ್ಕ ಮಾಡಿದ ಮುದತಿನ ಲಗತು ಮುಂದಿನ ಪೂರ್ಣಾಂಕನಾಗಿರುತ್ತದೆಂದು ನಾವು ಗೃಹೀತ ಹಿಡಿಯತಕ್ಕದ್ದು.

**ಉದಾಹರಣೆಗಳು:**—(ಅ) ಕೊಡಯೋಜಿಸಿದ ಸಾಲದ ರಕಮು ೧೫೦ರೂ.; ಸಾಮರ್ಥ್ಯ ೧೪ರೂ.; ವಾರ್ಷಿಕ ಬಡ್ಡಿ (ನೂರಕ್ಕೆ ೮ರಂತೆ) ೧೨; ಅವನ ಹತ್ತರ ಉಳಿಯುವ ಶಿಲುಕು ೨. ೨೦ ವರ್ಷಗಳ ಅವಧಿಯಲ್ಲಿ ಕೂಡ ಇದರ ಮೇಲಿಂದ, ರೂ. ೪೫.೭೬×೨ ರೂಪಾಯಿಗಳನ್ನು ಮಾತ್ರ ಹಿಂತಿರುಗಿ ಕೊಡಲಿಕ್ಕೆ ಬರುತ್ತದೆ ಮತ್ತು ಇದು ೯೨ ರೂಪಾಯಿಗಳಿಗಿಂತ ಹೆಚ್ಚಾಗಲಿಕ್ಕಿಲ್ಲ; ಆದ್ದರಿಂದ ಸಾಲವನ್ನು ಕೊಡಲಿಕ್ಕೆ ಬರುವದಿಲ್ಲ.

(ಬ) ಕೊಡಯೋಜಿಸಿದ ಸಾಲದ ರಕಮು ೩೦೦ರೂ.; ಸಾಮರ್ಥ್ಯ ೩೬ರೂ.; ನೂರಕ್ಕೆ ವರ್ಷಕ್ಕೆ ರೂ. ೭-೮-೦ (೧೪ನೈ)ಯಂತೆ ಒಂದು ವರ್ಷದ ಬಡ್ಡಿ ೨೨.೫ರೂ.; ಅವನ ಹತ್ತರ ಉಳಿಯುವ ಶಿಲುಕು ೧೩.೫ ರೂ. ಆದ್ದರಿಂದ ಇದರ ಮೇಲಿಂದ, ೩೦೦ ರೂಪಾಯಿಗಳ ಸಾಲವನ್ನು ಸುಮಾರು ೧೫ ವರ್ಷಗಳಲ್ಲಿ ಹಿಂತಿರುಗಿ ಕೊಡಬಹುದು. ಆದ್ದರಿಂದ ೩೬ ರೂಪಾಯಿಯ ವಾರ್ಷಿಕ ಸರಾಸರಿ "ಸಾಮರ್ಥ್ಯದ" ೧೫ ಕಂತುಗಳನ್ನು ಗೊತ್ತುಮಾಡಬೇಕು.

ಆವರ್ತಿ ದುಷ್ಕಾಳದ ಹಂಗಾಮುಗಳ ಹಾಗೂ ತಡಕೂಬಿಗಳ ಸಲುವಾಗಿ ಅಥವಾ ತಾತ್ಸಾರದಿಂದ ಹಾಗೂ ದುರ್ದೈವದಿಂದ ಕೊಡಲಿಕ್ಕೆ ತಪ್ಪಿದ್ದರ ಸಲುವಾಗಿ ಯಾವಾಗಲೂ ಮುಂಚೆಯೇ ಕೆಲಮಟ್ಟಿನ ವ್ಯವಸ್ಥೆಯನ್ನು ಮಾಡಿರಬೇಕು. ಈ ಕಾರಣದಿಂದ ಮೇಲಿನ (ಬ) ಉದಾಹರಣೆಯಲ್ಲಿಯಾದರೂ, ೩೬ ರೂಪಾಯಿಗಳ ಸಾಮರ್ಥ್ಯದ ಆಧಾರದ ಮೇಲಿಂದ ೩೦೦ ರೂಪಾಯಿಗಳಿಗಿಂತ ಹೆಚ್ಚಿಗೆ ಸಾಲ ಕೊಡತಕ್ಕದ್ದಲ್ಲ, ಯಾಕೆಂದರೆ, ಸಾಲವು ಚಾಲೂ ಇರುವಾಗ ಒಂದೆರಡು ಸಾರೆ ಕಂತುಗಳನ್ನು ಕೊಡುವದನ್ನು ತಪ್ಪಿಸಿದರೆ, ಸಾಲದ ಅವಧಿಯು ೨೦ ವರ್ಷಗಳ ಅವಧಿಯನ್ನು ಮೀರಬಹುದು. ಒಟ್ಟಿನ ಮೇಲೆ, ಸಾಲಗಳ ಸಾಮಾನ್ಯವಾದ ಮರ್ಯಾದೆಯು ಹಿಂತಿರುಗಿ ಕೊಡಯೋಜಿಸಿದ ವಾರ್ಷಿಕ ರಕಮಿನ (ಬಡ್ಡಿ ಮತ್ತು ಅಸಲು ಹಿಡಿದು) ಒಂಬತ್ತು ಪಟ್ಟಿನಷ್ಟಿರತಕ್ಕದ್ದು.

೧೦ ರೂಪಾಯಿಗಳಿಗಿಂತ ಕಡಿಮೆ ರಕಮಿನ ಕಂತುಗಳನ್ನು ಠರಾಯಿಸಬಾರದು; ಯಾಕೆಂದರೆ, ಇದರ ಮೇಲಿಂದ, ಹೊಲ ಮಾಡುವವರಿಗೆ ಚಿಲ್ಲರೆ ಸಾಲಗಳನ್ನು ಕೊಡುತ್ತಾರೆಂದು ಅಥವಾ ಸಾಲವನ್ನು ಹಿಂತಿರುಗಿ ಕೊಡುವದರ ಸಲುವಾಗಿ ಅತಿಶಯವಾದ ಹೆಚ್ಚಿದ ಅವಧಿಯನ್ನು ಕೊಡುತ್ತಾರೆಂದು ಸೂಚಿತವಾಗುತ್ತದೆ.

ಬಾವಿಯನ್ನು ಅಗೆಯುವದರ ಸಲುವಾಗಿ ಕೊಡಲಾಗುವ ಸಾಲದ ಅವಧಿಯನ್ನು ಸಾಮಾನ್ಯವಾಗಿ ಬೆಳಿಸಬೇಕು, ಆದರೆ ಇದು ೨೦ ವರ್ಷಗಳ ಪರಾಕಾಷ್ಠ ಅವಧಿಯನ್ನು ಮೀರತಕ್ಕದ್ದಲ್ಲ (ಎಫ್. ಎಲ್. ೩೬೭, ತಾರೀಖು ೩ನೇ ಜೂನ ಸನ್ ೧೯೩೫ನೇ ಇಸವಿ).

೪. ಆಕ್ಟುಗಳ ಹಾಗೂ ಈ ಕಾನೂನುಗಳ ಠರಾವುಗಳಿಗೊಳಪಟ್ಟು, ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಿದ ಅಧಿಕಾರಿಗಳು ಅದರಲ್ಲಿ ನಿರ್ದಿಷ್ಟ ಮಾಡಿದ ರಕಮಿನ ವರೆಗೆ ಸಾಲಗಳನ್ನು ಕೊಡಬಹುದು:—

| ಅಧಿಕಾರಿ. | ಭೂಮಿಯ ಸುಧಾರಣೆಯ ವಿಷಯದ ಸಾಲಗಳ ಆಕ್ಟು. | ಹೊಲ ಮಾಡುವವರ ಸಾಲಗಳ ಆಕ್ಟು. | |
|---|---|---|---|
| | | ಇಲಾಖೆ. | ಸಿಂಧ. |
| | ರೂ. | ರೂ. | ರೂ. |
| ಸರಕಾರದವರ ಮಂಜೂರಿಯನ್ನು ಮುಂದಾಗಿ ಪಡೆದು ಕಲೆಕ್ಟರನು. | ೫,೦೦೦ ರೂಪಾಯಿಗಳಿಗಿಂತ ಹೆಚ್ಚಿಗೆ. | ........ | ........ |
| ಕಮೀಶನರನ ಮಂಜೂರಿಯನ್ನು ಮುಂದಾಗಿ ಪಡೆದು ಕಲೆಕ್ಟರನು. | ೨,೫೦೦ | ೫೦೦ಕ್ಕಿಂತ ಹೆಚ್ಚಿಗೆ. | ೧,೦೦೦ಕ್ಕಿಂತ ಹೆಚ್ಚಿಗೆ. |
| ಕಲೆಕ್ಟರನು .... .... | ೨,೫೦೦ಕ್ಕೆ ಮೀರದಷ್ಟು. | ಕ್ಕೆ ಮೀರದಷ್ಟು. | ಕ್ಕೆ ಮೀರದಷ್ಟು. |
| ಕಲೆಕ್ಟರನ ಮಂಜೂರಿಯನ್ನು ಮುಂದಾಗಿ ಪಡೆದು ಪ್ರಾಂತ ಅಮಲದಾರನು*. | ........ | ೫೦೦ಕ್ಕೆ ಮೀರದಷ್ಟು. | ೧,೦೦೦ಕ್ಕೆ ಮೀರದಷ್ಟು. |
| (ಕಲೆಕ್ಟರನ ಇತರ ರೀತಿಯಿಂದ ಘರ್ಮಾಯಿಸಿದ ಹೊರ್ತು) ಭೂಮಿಯ ಮಹಸೂಲಿನ ಕಾಯದೆಯ ೧೩ನೇ ಬಾಬಿಗೆ ಒಳಪಟ್ಟು, ಪ್ರಾಂತ ಅಮಲದಾರನು. | ೧,೦೦೦ | ೨೦೦ಕ್ಕೆ ಮೀರದಷ್ಟು. | ೫೦೦ಕ್ಕೆ ಮೀರದಷ್ಟು. |

| | | | |
|---|---|---|---|
| ಕಲೆಕ್ಟರನು ವಿಶಿಷ್ಟವಾಗಿ ಈ ಅಧಿಕಾರ ಕೊಟ್ಟ ಯಾವನೊಬ್ಬ ಅನುಭವ ಹೊಂದಿದ ಮಾಮುಲೇದಾರನು. | † ೨೫೦ | ೧೦೦ಕ್ಕೆ ಮೀರದಷ್ಟು. | ...... |
| ಸಿಂಧದಲ್ಲಿ, ಹರಿಗಳನ್ನು ಸ್ವಚ್ಛ ಮಾಡುವದರ ಸಲುವಾಗಿ, ಮಾಮಲೇದಾರನು. | ೨೦೦ | ...... | ...... |
| ಯಾವನೇ ಮಾಮಲೇದಾರನು (ಅಥವಾ ಮಹಾಲಕರಿಯು ಅಥವಾ ಹೆಚ್ಚಿನ ಅವಲ ಕಾರಕೂನನು). | ...... | ‡ ೫೦ | § ೨೦೦ |
| ಸಿಂಧದಲ್ಲಿ, ಈ ಕೆಳಗಿನ ಉದ್ದೇಶಗಳ ಸಲುವಾಗಿ ಯಾವನೇ ಮಾಮಲೇದಾರನು :— | | | |
| ಜಂಪರದಿಂದ ತೂತು ಕೊರೆಯುವದು ಮತ್ತು ಬಾವಿಗಳ ಸಲುವಾಗಿ ಪ್ರಯೋಗಾತ್ಮಕ ತಗ್ಗುಗಳನ್ನು ಅಗಿಯುವದು. | ೫೦ | ...... | ...... |
| ಬಾವಿಗಳೊಳಗಿನ ಕೂಡಿಬಿದ್ದ ಮಣ್ಣನ್ನು ತೆಗೆಯುವದು. (ಎಫ್. ೩೭೨೨—೧೯). | ೫೦ | ...... | ...... |

* ನಾಕಾರಿಸುವದರ ಸಲುವಾಗಿ ಮಂಜೂರಿಯು ಅವಶ್ಯಕತೆಯುಳ್ಳುವದಿಲ್ಲ.

† ೨೧೭೯—೧೧, ೩೭೨೩—೧೯.

‡ [ಅಥವಾ ಮಧ್ಯ ಹಾಗೂ ದಕ್ಷಿಣ ಭಾಗ (ಎಫ್. ೨೩೫೩—೦೭) ಇವುಗಳಲ್ಲಿಯ ಕೆಲವು ಅಮಲದಾರರ ಸಲುವಾಗಿ ಸನ್ ೧೯೦೭ನೇ ಇಸವಿಯಲ್ಲಿ ಮಾತ್ರ ೨ ವರ್ಷಗಳಲ್ಲಿ ಕೊಡಲ್ಪಡುವದಿದ್ದರೆ ೧೦೦ ರೂಪಾಯಿ].

§ ೨೪೨೨—೦೪.

ಟೀಪು.—ತಗಾಯಿ ಸಾಲಗಳನ್ನು ಕೊಡಲಿಕ್ಕೆ ಅಮಲದಾರರಿಗಿರುವ ಅಧಿಕಾರಗಳ ಮರ್ಯಾದೆಯನ್ನು, ಯಾತರಲ್ಲಿ ತಾರಣವನ್ನು ತೆಗೆದುಕೊಂಡಿರುವದೋ ಅಂಥ ಬಾಡಿನ ನಮೂನೆಯಿಂದ ನಿಯಮಿತಗೊಳಿಸದೆ, ಪ್ರತಿಯೊಬ್ಬ ಅರ್ಜಿ ಮಾಡುವ ವ್ಯಕ್ತಿಯು ಗರಜುಗಳ ರಕಮಿನಿಂದಲೇ ನಿಯಮಿತಗೊಳಿಸತಕ್ಕದ್ದು (ಎಫ್. ೩೯೨೨—೧೭).

(ನಂಬರು ೩೫, ತಾರೀಖು ೧೩ನೇ ಡಿಸೆಂಬರ ಸನ್ ೧೯೧೭ನೇ ಇಸವಿ.)

## ಸ್ಥಾನಿಕ ಚೌಕಶಿಯನ್ನು ಯಾರು ಮಾಡಬೇಕು.

೫. (ಅ) ಅರ್ಜಿಯನ್ನು ಸ್ವೀಕರಿಸುವ ಅಮಲದಾರನು, ಅರ್ಜಿಯ ನಮೂನೆಯಲ್ಲಿರುವ ತಪಶೀಲುಗಳನ್ನು ಗೊತ್ತುಪಡಿಸುವ ಉದ್ದೇಶದಿಂದ ತಾನಾಗಿ ಚೌಕಶಿಯನ್ನು [೭] ಮಾಡಬೇಕು, ಅಥವಾ ಅವಲ ಕಾರಕೂನನ ದರ್ಜೆಗಿಂತ ಕಡಿಮೆ ದರ್ಜೆಯವನಲ್ಲದ ಯಾವನೊಬ್ಬ ಮುಲ್ಕಿ ಅಮಲದಾರನಿಂದ [೮] ಮಾಡಿಸಬೇಕು.

(ಬ) ಮಾಮಲೇದಾರನು, ಸಾಮಾನ್ಯ ಅಥವಾ ವಿಶಿಷ್ಟ ಹುಕುಮನ್ನು ಮಾಡಿ, ಚೌಕಶಿಯನ್ನು ಮಾಡಲಿಕ್ಕೆ ಅಥವಾ ಚೌಕಶಿಯ ಸಲುವಾಗಿ ಯಾವದೇ ಅರ್ಜಿಯನ್ನು ತನ್ನ ಕಡೆಗೆ ಕಳುಹಿಸಬೇಕೆಂದು ತನ್ನ ಅವಲ ಕಾರಕೂನನಿಗೆ ಫರ್ಮಾಯಿಸಬಹುದು. ಯಾವನೊಬ್ಬ ಅವಲ ಕಾರಕೂನನ ಕಡೆಗೆ ಯಾವದೇ ಅರ್ಜಿಯು ಮಾಡಲ್ಪಟ್ಟರೆ, ಅವನಿಗೆ ಮಾಮಲೇದಾರನು ಯಾವದೊಂದು ಸಾಮಾನ್ಯ ಅಥವಾ ವಿಶಿಷ್ಟ ಹುಕುಮಿನನ್ವಯ ಅಧಿಕಾರ ಕೊಟ್ಟಿದ್ದರೆ, ಅವನು ಚೌಕಶಿಯನ್ನು ಪೂರ್ಣ ಮಾಡಬಹುದು ಮತ್ತು ತನ್ನ ಶಿಫಾರಸಿನೊಂದಿಗೆ, ಸದರಿ ಅರ್ಜಿಯನ್ನು ನಿಕಾಲೆಗಾಗಿ ಮಾಮಲೇದಾರನ ಕಡೆಗೆ ಕಳುಹಿಸಬಹುದು.

[೭] ಈ ಕಾನೂನಿನನ್ವಯ, ಯಾವದೇ ಅರ್ಜಿಯನ್ನು ಗ್ರಾಮದ ಅಧಿಕಾರಿಗಳ ಕಡೆಗೆ ಅಥವಾ ಸರ್ಕಲ್ ಇನ್ಸ್‌ಪೆಕ್ಟರನ ಕಡೆಗೆ ರಿಪೋರ್ಟ ಮಾಡುವದರ ಸಲುವಾಗಿ ಕಳುಹಿಸಬಾರದು.

[೮] ಭೂಮಿಯ ಸುಧಾರಣೆಯ ಸಲುವಾಗಿರುವ ಯಾವತ್ತು ಸಾಲಗಳ ಬಾಬತಿನಲ್ಲಿ, ಶಕ್ಯವಿದ್ದ ಮಟ್ಟಿಗೆ ಆದಷ್ಟು ದೊಡ್ಡ ಹುದ್ದೆಯ ಅಮಲದಾರನು ಖುದ್ದ ತಪಾಸಣೆ ಮಾಡುವದು ಅತೀ ಅವಶ್ಯವಿರುತ್ತದೆ. ವಿಶೇಷವಾಗಿ, ಭೂಮಿಯ ಸುಧಾರಣೆಯ ವಿಷಯದ ಆದಷ್ಟು ಹೆಚ್ಚು ಸಾಲಗಳ ಪ್ರಕರಣಗಳನ್ನು ಕುರಿತು ಪ್ರಾಂತ

ಅಮಲದಾರನು ವಿಚಾರ ಮಾಡಬೇಕು. [ಆರ್. ೬೫೩೯-೯೧ ಮತ್ತು ೩೦೧೬-೯೧, ಇದರ ೨ನೇ ಪ್ಯಾರಾದ (೨)ರಿಂದ (೭)ರ ವರೆಗಿನ ರಕಮುಗಳು]. ಮೊದಲನೇ ಸಾರೆ ತಪಾಸ ಮಾಡುವಾಗ, ಸದರಿ ಭೂಮಿಯ ಆಕಾರದ ನಕಾಶದಲ್ಲಿ ತಗಾಯಿ ಕೆಲಸವನ್ನು (ಬಾವಿ, ಒಡ್ಡು, ಆಳವಾಗಿ ರೆಂಟೆಹೊಡೆಯುವದು, ನೀರಿನ ಹರಿ ಮುಂತಾದ್ದು) ಯಾವ ಸ್ಥಳದಲ್ಲಿ ಮಾಡಲಿರುವದೆಂಬದನ್ನು ಗುರುತು ಮಾಡುವ ಬಗ್ಗೆ ಕಾಳಜಿ ತೆಗೆದುಕೊಳ್ಳಬೇಕು. ಇದಲ್ಲದೆ, ಸಣ್ಣದಾದ ಹಾಗೂ ನೀರಿನ ಪುರವಠೆ ಮಾಡಲಿಕ್ಕೆ ಸಾಕಾಗದ ಕೆರೆ, ಅಥವಾ ಅರ್ಧ ಅಗಿದ ಬಾವಿಯ ಶಾಫ್ಟ ಅಥವಾ ಈ ಮೊದಲು ಆಳವಾಗಿ ಅಗೆದ ಅಥವಾ ಕಳೆ ತೆಗೆದುಹಾಕಿದ ಭೂಮಿಯ ಭಾಗಗಳು. ಇಂಥ ಈ ಮೊದಲೇ ಮಾಡಿಸಿದ ಯಾವದಾದರೂ ಕಾಮಗಿರಿಯು ಇದ್ದರೆ, ಅವುಗಳನ್ನು ಸದರಿ ನಕಾಶದಲ್ಲಿ ತೋರಿಸತಕ್ಕದ್ದು (ಎಫ್. ೩೯೧೪-೧೦). ಇಂಥ ಮಾಹಿತಿಯು ಇಲ್ಲದಿದ್ದರೆ, ಸಾಲದ ಸಂಬಂಧದಿಂದ ರಿಪೋರ್ಟ ಮಾಡಲಿಕ್ಕೆ ಆ ನಂತರ ಕಳುಹಿಸಲ್ಪಡುವ ಅಮಲದಾರರಿಗೆ, ಯಾವದೇ ಹೊಸ ಕೆಲಸವು ಮಾಡಲ್ಪಟ್ಟಿದೆಯೋ ಅಥವಾ ಎಷ್ಟು ಕೆಲಸವು ನಿಜವಾಗಿ ಮಾಡಲ್ಪಟ್ಟಿರುತ್ತದೆ ಎಂಬವನ್ನು ನಿರ್ಣಯಿಸುವದು ತೀರ ಅಶಕ್ಯವೆನಿಸುವದು. ಒಬ್ಬ ಹೊಲ ಮಾಡುವವನು ತನ್ನ ಉತ್ಪನ್ನದ ಪೈಕಿ ಐವತ್ತು ರೂಪಾಯಿಗಳನ್ನು ಖರ್ಚು ಮಾಡಿ ಅರ್ಧಮರ್ಧ ಬಾವಿಯನ್ನು ಅಗಿದನು ಮತ್ತು ಆ ಮೇಲೆ ಹೊಸ ಬಾವಿಯ ಸಲುವಾಗಿ ೨೦೦ ರೂಪಾಯಿ ಸಾಲ ತಕ್ಕೊಂಡನು; ಆದರೆ ತಪಾಸಣೆ ಮಾಡುವ ಅಮಲದಾರನು ಕೆಲಸವು ಆಗಿದೆಯೋ ಇಲ್ಲವೋ ಎಂಬದನ್ನು ನೋಡಿ ರಿಪೋರ್ಟ ಮಾಡಲಿಕ್ಕೆ ಬಂದಾಗ್ಗೆ ಅವನಿಗೆ ಅರ್ಧ ಮರ್ಧ ಆಗಿದ ಬಾವಿಯನ್ನು ತೋರಿಸಲಾಯಿತು ಹಾಗೂ ಯಾವತ್ತು ಸಾಲದ ಹಣವು ತೀರಿರುವದೆಂತಲೂ, ಆದರೆ ಬಾವಿಯು ಕುಸಿದು ಬಿತ್ತೆಂತಲೂ ಅವನಿಗೆ ಹೇಳಲಾಯಿತು. ಇಂಥ ಅನೇಕ ಉದಾಹರಣೆಗಳು ನಮ್ಮ ಮುಂದಿರುತ್ತವೆ. ಪ್ರಾರಂಭದ ಚೌಕಶಿಯ ಕಾಲದ ಪರಿಸ್ಥಿತಿಯನ್ನು ಬರೆದಿಟ್ಟಿದ್ದ ಹೊರ್ತು, ಇಂಥ ಪ್ರಸಂಗಗಳಲ್ಲಿ ನಿಜವಾದ ಸಂಗತಿಯನ್ನು ಕಂಡುಹಿಡಿಯುವದು ಕಠಿಣವೆನಿಸಬಹುದು. ಅನೇಕ ತರದ ನೆಲಗಳಲ್ಲಿ ಹಾಗೂ ಬಂಡೆಗಲ್ಲಿರುವ ಸ್ಥಳಗಳಲ್ಲಿ ಬಾವಿಯನ್ನು ಅಗಿಯುವದರ ಸಲುವಾಗಿ, ಬಾವಿಗೆ ಕಲ್ಲು ಹಾಸುವ ಕೆಲಸ ಮಾಡುವವರ ಸಲುವಾಗಿ, ಕಳೆಗಳನ್ನು ತೆಗೆದುಹಾಕುವದರ ಸಲುವಾಗಿ ಹಾಗೂ ಇತರ ಕೆಲಸಗಳ ಸಲುವಾಗಿ ಪ್ರಮಾಣಭೂತ ದರಗಳ ಕೋಷ್ಟಕಗಳನ್ನು ತಯಾರಿಸುವದರಿಂದ ಕೆಲಸವು ಕಡಿಮೆಯಾಗುವದು. ಪೂರ್ಣವಾದ ಕೆಲಸಗಳ ತಪಾಸಣೆಯ ವಿಷಯದ ಸಲುವಾಗಿ, ೧೩ನೇ ಕಾನೂನಿನ ೨೧ನೇ ಟೀಪನ್ನು ನೋಡಿರಿ.

## ಸ್ಥಾನಿಕ ಚೌಕಶಿಯನ್ನು ಮಾಡಿದ ನಂತರ ಅರ್ಜಿಯ ನಿಕಾಲೆ.

೬. ಅರ್ಜಿಯನ್ನು ಸ್ವೀಕರಿಸಿದ ಅಥವಾ ಚೌಕಶಿ ಮಾಡುವ ಅಮಲದಾರನ ಕಡೆಗೆ ಆಕ್ಟಿನ ೫ನೇ ಕಲಮಿನನ್ವಯ ಯಾವದಾದರೂ ತಕರಾರುಗಳನ್ನು [೯] ಸಾದರ ಮಾಡಿದ್ದರೆ ಅವುಗಳ ನಿಕಾಲೆಯನ್ನು, ಇಂಥ ಅಮಲದಾರನು ತಾನೇ ಸ್ಥಾನಿಕ ಚೌಕಶಿಯನ್ನು ಮಾಡುತ್ತಿದ್ದರೆ ಚೌಕಶಿ ಮಾಡುವ ಕಾಲಕ್ಕೆ ತಾನಾಗಿ ಮತ್ತು ತಾನು ಮಾಡು

ಸ್ತಿ ರದಿದ್ದರೆ, ಚೌಕಶಿ ಮಾಡಿದ ಅಮಲದಾರನ ಕಡೆಯಿಂದ ರಿಪೋರ್ಟು ಬಂದ ಬಳಿಕ, ಮಾಡಬೇಕು. ಆ ಮೇಲೆ ಅವನು ಅರ್ಜಿಯ ನಮೂನೆಯಲ್ಲಿದ್ದ ಯೋಗ್ಯ ಸ್ಥಳದಲ್ಲಿ ತಕರಾರುಗಳ ತಪಶೀಲುಗಳನ್ನು ಹಾಗೂ ಅವುಗಳ ಮೇಲಿನ ತನ್ನ ಹುಕುಮುಗಳನ್ನು ಬರೆದಿಡಬೇಕು.

ಅರ್ಜಿಯನ್ನು ಸ್ವೀಕರಿಸುವ ಅಮಲದಾರನಿಗೆ ಇನೇ ಕಾನೂನಿನನ್ವಯ ಅಧಿಕಾರಗಳನ್ನು ಕೊಟ್ಟಿದ್ದರೆ, ಅವನು ತಾನೇ ಸಾಲವನ್ನು ಕೊಡಬಹುದು ಅಥವಾ ನಾಕಾರಿಸಬಹುದು. ಇಲ್ಲದಿದ್ದರೆ, ಅವನು ಸದರಿ ಅರ್ಜಿಯನ್ನು, ಅದರ ಮೇಲೆ ತನ್ನ ರಿಪೋರ್ಟನ್ನು ಹಾಗೂ ಶಿಫಾರಸುಗಳನ್ನು ಬರೆದು, ವಾಡಿಕೆಯ ಮಾರ್ಗದಿಂದ, ಪ್ರಸಂಗವಿದ್ದಂತೆ, ಮಾಮಲೇದಾರನ, ಪ್ರಾಂತ ಅಮಲದಾರನ, ಕಲೆಕ್ಟರನ ಅಥವಾ ಕಮೀಶನರನ ಕಡೆಗೆ ಕಳುಹಿಸಬೇಕು.

[೯] ಈ ಕೆಳಗಿನ ನೋಟೀಸಿನ ನಮೂನೆಯು ಉಪಯುಕ್ತವಾಗಬಹುದು :—
ಇದರ ಮೇಲಿಂದ ನೋಟೀಸು ಕೊಡಲ್ಪಡುವದೇನೆಂದರೆ, ಈ ಕೆಳಗಿನ ಮನುಷ್ಯನು ಕೆಳಗೆ ವಿವರಿಸಿದ ಪ್ರಕಾರ ಸಾಲದ ಸಲುವಾಗಿ ಅರ್ಜಿ ಮಾಡಿರುತ್ತಾನೆ. ಸದರಿ ಸಾಲವನ್ನು ಕೊಡುವ ಸಂಬಂಧದಿಂದ ಯಾವನೇ ಮನುಷ್ಯನಿಗೆ ತಕರಾರು ಮಾಡುವದಿದ್ದರೆ ಅವನು, ಅಥವಾ ಕೆಳಗೆ ನಮೂದಿಸಿದ ಭೂಮಿಯಲ್ಲಿ ಕೊಂಡವನೆಂದು, ಒತ್ತೆಯಿಂದ ತಕ್ಕೊಂಡವನೆಂದು, ಪಾಲುಗಾರನೆಂದು ಅಥವಾ ಇತರ ಪ್ರಕಾರದ ಯಾವದೇ ಹಿತಸಂಬಂಧವಿರುತ್ತದೆಂದು ಹಕ್ಕು ಹೇಳುತ್ತಿದ್ದರೆ, ಅವನು ಕೆಳಗೆ ಸಹಿ ಮಾಡಿದವನ ಮುಂದೆ ದಿವಸ ಅಥವಾ ಅದಕ್ಕಿಂತ ಮುಂಚೆ ಠಾಣೆಯಲ್ಲಿ ಹಾಜರಾಗಬೇಕು ಮತ್ತು ತಕರಾರನ್ನು ನಿವೇದಿಸಬೇಕು ಅಥವಾ ಬರೆದು ತಿಳಿಸಬೇಕು.

ಅರ್ಜದಾರನ ಹೆಸರು—

ಸಾಲದ ರಕಮು—

ಸುಧಾರಿಸಲ್ಪಡಬೇಕಾದ ಸರ್ವೆ ನಂಬರು—

ಯೋಚಿಸಿದ ಕೆಲಸ.

(ಸಹಿ)

ಹುದ್ದೆ

ಈ ನೋಟೀಸಿನ ಒಂದು ನಕಲನ್ನು ಚಾವಡಿಯಲ್ಲಿ ಹಚ್ಚಬೇಕು ಹಾಗೂ ಮತ್ತೊಂದನ್ನು, ಇಂಥ ನೋಟೀಸುಗಳನ್ನು ಸಾಮಾನ್ಯವಾಗಿ ಹಚ್ಚುವ ಗ್ರಾಮದಲ್ಲಿಯ ಒಂದು ಪ್ರಮುಖ ಸ್ಥಳದಲ್ಲಿ ಅಥವಾ, ಹೆಚ್ಚಿಗೆ ಒಳ್ಳೆಯದೆಂದರೆ, ಸದರಿ ಭೂಮಿಯ ಮೇಲೆಯೇ ಹಚ್ಚಬೇಕು. ಸುನಾವಣಿಯ ಸ್ಥಳವು ಅನಾವಶ್ಯಕವಾಗಿ ಹೆಚ್ಚಿಗೆ ದೂರ ವಿರಬಾರದು, ಮತ್ತು ಅದರ ವೇಳೆಯನ್ನು ಬಹಳ ಮುಂದೆ ಹಾಕಬಾರದು (ಆರ್. ೯೨೧೪–೮೪, ೧೬೧೬–೮೬, ಎಫ್. ೪೯೨೪–೦೮, ೨೨೩೯–೦೯). ನೋಟೀಸನ್ನು ಕೆಲಸದ ಕ್ರಮವೆಂದು ತಿಳಿದು ಯಾವತ್ತು ಪ್ರಸಂಗಗಳಲ್ಲಿ ಹೊರಡಿಸತಕ್ಕದ್ದಲ್ಲ. ಆದರೆ ನೋಟೀಸು ಕೊಡುವದು ವಿವೇಕತನದ್ದಾಗುತ್ತಿದ್ದರೆ ಮಾತ್ರ ಹಾಗೆ ಕೊಡಬೇಕು. ಹಕ್ಕುಗಳ ಪತ್ರಕದ ಮೇಲೆ ಪೂರ್ಣ ವಿಶ್ವಾಸವಿಡಲಾಗದು,

## ಸಾಲಗಳನ್ನು ಯಾವಾಗ್ಗೆ ನಾಕಾರಿಸಬೇಕು.

೭. ಸಾಲದ ಸುರಕ್ಷಿತತೆಯ ಬಗ್ಗೆ ಬೇಕಾದ ಸಾಕಷ್ಟು ತಾರಣಕ್ಕಿಂತ [೧೦] ಹೆಚ್ಚಿನ ರಕಮು ಇರುತ್ತದೆಂದು ಸಾಲ ಮಂಜೂರ ಮಾಡುವವನಿಗೆ ಸಮಾಧಾನವಾದ ಹೊರತು, ಅವನು ಯಾವದೇ ಸಾಲವನ್ನು ಕೊಡತಕ್ಕದ್ದಲ್ಲ.

[೧೦] (೧) ಚೌಕಶಿ ಮಾಡುವವನು ಹಾಗೂ ಸಾಲ ಮಂಜೂರ ಮಾಡುವವನು. ತಾವು ಯಾವ ತಾರಣವನ್ನವಲಂಬಿಸಿರುವರೋ ಅಂಥ ತಾರಣವು ಯಾವ ಸ್ವರೂಪದ್ದಿರುತ್ತದೆಂಬದನ್ನು ಚೌಕಶಿಯ ನಮೂನೆಯಲ್ಲಿ ಸ್ಪಷ್ಟ ಮಾಡಬೇಕು. ಸಾಲ ತಕ್ಕೊಳ್ಳುವವನು ಪ್ರಾಮಾಣಿಕನಿರುತ್ತಾನೆ ಹಾಗೂ ವಿಶ್ವಾಸಾರ್ಹನಿರುತ್ತಾನೆ ಎಂಬ ಅವರ ನಂಬಿಗೆಯ ಹೊರತಾಗಿ ಇತರ ಯಾವದೇ ನಿಶ್ಚಿತವಾದ ತಾರಣವಿರದಿದ್ದರೆ, ಅವರು ಹೀಗೆ ನಮೂದ ಮಾಡಬೇಕು ಸಾಲದ ಕೆಲವಂಶದ ಸಲುವಾಗಿರುವ ತಾರಣವು ಒಂದು ಪ್ರಕಾರದ್ದಿದ್ದು, ಉಳಿದ ಅಂಶದ ಸಲುವಾಗಿರುವ ತಾರಣವು ಎರಡನೇ ಪ್ರಕಾರದಿದ್ದರೆ, ಪ್ರತಿಯೊಂದರಿಂದ ಎಷ್ಟು ರಕಮು ದೊರೆಯಬಹುದೆಂಬದನ್ನು ಸ್ಪಷ್ಟ ಮಾಡಬೇಕು. ಸಾವಕಾರರನ್ನು ಜಾಮೀನದಾರರನ್ನಾಗಿ ಮಾಡಿಕೊಳ್ಳತಕ್ಕದ್ದಲ್ಲ: ಸಂಯುಕ್ತ ಬಾಂಡುಗಳಿದ್ದರೆ ಲೇಸು (ಆರ್ ೭೫೬–೪೧) "ಭೂಮಿಯ ಬೆಳೆಯನ್ನು ಕಟ್ಟುವಾಗ ನಿಷ್ಕಾಳಜಿತನ ಮಾಡಿದ್ದರಿಂದ ಸಿಂಥದಲ್ಲಿ ಉಂಟಾದ ನಷ್ಟದ ಸಲುವಾಗಿ ಎಫ್. ೩೯೩೨–೧೫ನೇ (ಹುಕುಮನ್ನು) ನೋಡಿರಿ."

(೨) ತಾರಣವು ಮಾಡಲ್ಪಡಲಿಕ್ಕೆ ಬರುವಂತಿದ್ದ ಹೊರತು, ಅದಕ್ಕೆ ಯಾವದೇ ಬೆಲೆಯಿರುವದಿಲ್ಲ. ಯಾವನೊಬ್ಬ ಒಕ್ಕಲಿಗನು ತನ್ನ ಭೂಮಿಯನ್ನು ಅತಿಶಯವಾಗಿ ಪ್ರೀತಿಸುತ್ತಿರಬಹುದು, ಆದರೆ ಅವನಿಗೆ ಅದನ್ನು ಮಾರಲಿಕ್ಕೆ ಬಾರದಿದ್ದರೆ, ಅಥವಾ ಸರಕಾರದವರಿಗೆ ಒತ್ತೆ ತಕ್ಕೊಂಡವರೆಂದು ಸದರಿ ಭೂಮಿಯನ್ನು ಮಾರಲಿಕ್ಕೆ ಬಾರದಿದ್ದರೆ, ಅದು ತಾರಣವಾಗಲಿಕ್ಕಿಲ್ಲ ಸದರಿ ಭೂಮಿಯ ಮೇಲೆ ಈ ಮೊದಲಿನ ಯಾವವಾದರೂ ಬೋಜಾಗಳಿದ್ದರೆ ಅವುಗಳನ್ನು ಗೊತ್ತು ಮಾಡಿಕೊಳ್ಳುವ ಬಗ್ಗೆ ಹೆಚ್ಚಿನ ಕಾಳಜಿಯನ್ನು ತಕ್ಕೊಳ್ಳಬೇಕು (ಎಫ್. ೨೮೫೪–೧೧ ಇದರ ೧೦ನೇ

ಪ್ಯಾರಾ). ಈ ಕೆಳಗಿನ ವಿಶಿಷ್ಟ ಪ್ರಸಂಗಗಳ ಕಡೆಗೆ ಹೆಚ್ಚಿಗೆ ಲಕ್ಷ್ಯಕೊಡ ತಕ್ಕದ್ದು :—

(೧) ಯಾವದೊಂದು ಖೋತೀ ಗ್ರಾಮದಲ್ಲಿರುವ (ಧಾರೇಕಾರಿಗಳಲ್ಲದ) ಒಕ್ಕಲುಗಳ ಹತ್ತರ ತಾರಣವಾಗಿ ಕೊಡಲಿಕ್ಕೆ ಭೂಮಿಯಿರುವದಿಲ್ಲ. ಆದಕೆ ಅವರ ಸಲುವಾಗಿ ಖೋತನು ಜಾಮೀನಾದರೆ ಅವರಿಗೆ ಸಾಲಗಳನ್ನು ಕೊಡಬಹುದು (ಆರ್. ೯೩೩೨-೦ಳ). ಭೂಮಿಯು ಜಾಮೀನು ಇದ್ದರೆ ಇದೇ ಮೇರೆಗೆ ತಾಲೂಕಧಾರೀ ಒಕ್ಕಲುಗಳಿಗಾದರೂ ಕೊಡಬಹುದು. (ಪತ್ರ) ಎಫ್. ೪೭೦೧೪-೧೫. ೧೯ನೇ ಪುಟದಲ್ಲಿಯ ೧ನೇ ಕಾನೂನಿನ ಟಿಪ್ಪಣಿಯನ್ನು ನೋಡಿರಿ.

(೨) ದುಮಾಲಾ ಅಥವಾ ಇನಾಮು ಗ್ರಾಮದಲ್ಲಿಯ ಕನಿಷ್ಠ ಧಾರಣ ಮಾಡುವವರಿಗೆ, ಸದರಿ ಇನಾಮುದಾರನೂ ಜಾಮೀನಾದರೆ, ಮೇಲಿನಂತೆಯೇ ಸಾಲಗಳನ್ನು ಕೊಡಬಹುದು. ಸರಕಾರದವರು ಅವರಿಗೆ ಸಹಾಯ ಮಾಡಿ ಇನಾಮುದಾರನ ಸ್ಥಳವನ್ನು ಆಕ್ರಮಿಸುವದಕ್ಕಿಂತ ಇನಾಮುದಾರನೇ ಸಹಾಯ ಮಾಡುವದು ಅವನ ಕರ್ತವ್ಯವಾಗಿರುತ್ತದೆ (ಆರ್. ೧೮೮೩-೮೮, ೪೮೯ ಪ್ಯಾರ್.-೯೭). ಈ ಪ್ರಸಂಗವಲ್ಲಿಯಾದರೂ ಇನಾಮುದಾರನ ಜಾಮೀನು ಬೆಲೆಯುಳ್ಳದ್ದಾಗಿರುವದೋ ಇಲ್ಲವೋ ಎಂಬದನ್ನು ವಿಚಾರಿಸಬೇಕು; ಯಾಕೆಂದರೆ (ವ್ಯಾಜ್ಯಗಳ ಮೂಲಕ, ಬೋಜಾಗಳ ಮೂಲಕ ಹಾಗೂ ಅವನ ಹಕ್ಕುಗಳ ವಿಭಾಗಣಿಯ ಮೂಲಕ) ಅವನ ತಾರಣಕ್ಕೆ ಬೆಲೆಯೇ ಬಾರದಿರಬಹುದು. ಕೆಲವು ಸಾರೆ, ಇನಾಮುದಾರನ ಹಾಗೂ ಒಕ್ಕಲಿಗನ ಸಮಾಯಿಕ ಹಾಗೂ ಪ್ರತ್ಯೇಕ ಬಾಂಡುಗಳು ಇನಾಮುದಾರನೊಬ್ಬನ ಒಂದೇ ಬಾಂಡಿಗಿಂತ ಲೇಸಾಗಬಹುದು. ಸರ್ವೆ ಮಾಡಲ್ಪಟ್ಟ ಗ್ರಾಮದಲ್ಲಿ, ಹಕ್ಕುಗಳ ಪತ್ರಕಕ್ಕೆ ಒಳಪಟ್ಟು, ಯಾವನೊಬ್ಬ ಕನಿಷ್ಠ ಧಾರಣ ಮಾಡುವವನಿಗೆ, ಇತರ ಜಾತಜಾಮೀನುಗಳ ಸಹಿತವಾಗಿ ಅಥವಾ ಅಂಥ ಜಾಮೀನುಗಳಿಲ್ಲದೆ, ತಬದೀಲ ಮಾಡಿಕೊಡುವ ಹಕ್ಕಿರುತ್ತದೆಂದು ಅಥವಾ ಅವನ ಸ್ವಂತದ ತಾರಣವು ಸಾಕಷ್ಟಿರುತ್ತದೆಂದು ಕಂಡುಬಂದರೆ, ಸಾಲವನ್ನು ಕೊಡಬಹುದು.

ಈ ರೀತಿಯಿಂದ ಯಾವದೊಂದು ಇನಾಮು ಗ್ರಾಮದಲ್ಲಿ ಸಾಲಗಳನ್ನು ಕೊಟ್ಟಾಗ, ಸಾಲದ ಬಗ್ಗೆ ಅರ್ಜಿ ಮಾಡುವಾಗ ಇನಾಮುದಾರನು ಅದರಲ್ಲಿ ಸೇರಿಕೊಳ್ಳಬೇಕೆಂಬದು ಅವಶ್ಯವಿರುವದಿಲ್ಲ; ಆದರೆ ಇನಾಮುದಾರನಿಗೆ ಅವನಿಂದ ಸಲ್ಲತಕ್ಕ ಬಾಕಿಯ ವಸೂಲಿಗೆ ನಷ್ಟ ತಟ್ಟುವಷ್ಟು ಸಾಲವು ದೊಡ್ಡದಿರಬಾರದು. ಸಾಲದ ಮಾಹಿತಿಯನ್ನು ಇನಾಮುದಾರನಿಗೆ ಯಾವಾಗಲೂ ತಿಳಿಸತಕ್ಕದ್ದು (ಎಫ್. ೩೫೭೮-೧೨).

ಕನಿಷ್ಠ ಧಾರಣ ಮಾಡುವವನಿಗೆ ಅಥವಾ ಯಾವನೊಬ್ಬ ಒಕ್ಕಲಿಗೆ ಕೊಟ್ಟ ಸಾಲದ ಸಲುವಾಗಿ ಸಕ್ತಿಯ ಕಾಯದೆಯ ಕೆಲಸವನ್ನು ನಾವು ನಡಿಸಿದರೆ, ಇನಾಮುದಾರನ ಹಕ್ಕುಗಳನ್ನು, ಅವನು ಜಾಮೀನದಾರನಿದ್ದ ಹೊರ್ತು ಅಥವಾ ಸಾಲಕ್ಕೆ ಸಮ್ಮತಿಸಿದ ಹೊರ್ತು, ಹಾಗೂ ಸದರಿ ಭೂಮಿಯನ್ನು ಭೂಮಿಯ ಸುಧಾರಣೆ ಮಾಡುವ ವಿಷಯದ ಆಕ್ಟಿನನ್ವಯ ಸುಧಾರಿಸಿದ್ದ ಹೊರ್ತು, ನಮಗೆ ಜಪ್ತಿ ಮಾಡ

ಲಿಕ್ಕೆ ಬರಲಿಕ್ಕಿಲ್ಲ ಅಥವಾ ಮಾರಲಿಕ್ಕೆ ಬರಲಿಕ್ಕಿಲ್ಲ. ಯಾವದೊಂದು ಖಾಲಸಾ ಅಥವಾ ಇನಾಮು ಗ್ರಾಮದಲ್ಲಿ, ಭೂಮಿಯ ಸುಧಾರಣೆಯ ಸಲುವಾಗಿ ಖುದ್ದ ಇನಾಮು ದಾರನಿಗೆ ಕೊಟ್ಟ ಯಾವದೇ ಸಾಲದ ಬಗ್ಗೆ, ಅವನು ಧಾರಣ ಮಾಡಿದ ದುಮಾಲಾ ಭೂಮಿಯನ್ನು ಜಪ್ತು ಮಾಡಬಹುದು, ಮತ್ತು ಆ ತರುವಾಯ, ಭೂಮಿಯ ಮಹ ಸೂಲಿನ ಕಾಯದೆಯ ೬೫ (ಡ) ಹಾಗೂ (ಫ) ಮತ್ತು ೬೮ನೇ ಕಾನೂನುಗಳು ಲಾಗೂ ಆಗುವವು.

ಆದರೆ ಭೂಮಿಯ ಸುಧಾರಣೆಯ ವಿಷಯದ ಸಾಲದ ಸಲುವಾಗಿ ಇನಾಮು ದಾರನು ಪುರವಣಿಯ ತಾರಣವನ್ನು ಮಾತ್ರ ಕೊಟ್ಟಿದ್ದರೆ ಅಥವಾ ಹೊಲ ಮಾಡು ವವರಿಗೆ ಕೊಡುವ ಸಾಲದಂಥ ಸಾಲದ ಸಲುವಾಗಿ ಜಾಮೀನಾಗಿದ್ದರೆ, ಸಾಲದ ಹಣ ತಿರಿಗಿ ಕೊಡಲಿಕ್ಕೆ ತಪ್ಪಿದವನ ಹಕ್ಕನ್ನು, ಬಾಧ್ಯತೆಯನ್ನು ಹಾಗೂ ಹಿತಸಂಬಂಧವನ್ನು ಮಾತ್ರ ಮಾರಲಿಕ್ಕೆ ಬರುತ್ತದೆ; ಇನಾಮು ಭೂಮಿಯನ್ನು ಜಪ್ತು ಮಾಡಲಿಕ್ಕೆ ಬರುವದಿಲ್ಲ ಹಾಗೂ ಖಾಲಸಾ ಮಾಡಲಿಕ್ಕೆ ಬರುವದಿಲ್ಲ (ಫ್ಯಾಮ್. ೨೪೩-೦೦ ಇದನ್ನು ನೋಡಿರಿ).

(೩) ಸರಕಾರದವರ ಮಂಜೂರಿಯಿಲ್ಲದೆ, ವತನ ಭೂಮಿಗಳನ್ನು (ನೌಕರಿಯ ಸಲುವಾಗಿರುವಂಥವಲ್ಲದ) ಅವುಗಳನ್ನು ಧಾರಣ ಮಾಡುವವನ ಜೀವಮಾನಕ್ಕಿಂತ ಹೆಚ್ಚಿನ ಕಾಲದ ವರೆಗೆ ದುಮಾಲಿ ಮಾಡಲಾಗದು. ಜಿಲ್ಹೆಯ ವಂಶಪರಂಪರಾಗತ ಹುದ್ದೆದಾರರಾದ ಮಂಗಸೂಳಿ ದೇಸಾಯಿಯ (ಬೆಳಗಾಂವಿ) (ಫ್ಯಾಮ್. ೧೨೪೭-೦೨) ಹಾಗೂ ಆಲಮೇಲದ (ವಿಜಾಪೂರ) ದೇಸಾಯಿಯ (ಆರ್. ೫೩೦೩-೦೪) ಬಾಬತಿ ನಲ್ಲಿ ಇಂಥ ಮಂಜೂರಿಯನ್ನು ಕೊಡಲಾಗಿದೆ. ನೌಕರಿಯ ಬದಲಾಗಿ ಧಾರಣ ಮಾಡಿದ ವತನ ಭೂಮಿಯನ್ನು ಅಥವಾ ಕಲೆಕ್ಟರನಿಗೆ ಕೈಹಾಕಲಿಕ್ಕೆ ಬಾರದ ಪರಿ ಸ್ಥಿತಿಯಲ್ಲಿ, ವತನದಾರರಲ್ಲದವರ ತಾಬೆಯೊಳಗಿರುವ ವತನ ಭೂಮಿಯನ್ನು ಯೋಗ್ಯ ವಾದ ತಾರಣವೆಂದು ಸ್ವೀಕರಿಸಬಹುದು. ಆದರೆ ಅದು ೪ನೇ ವರ್ಗಕ್ಕೆ ಸೇರಿದ (ಗುಜರಾತದ ಸಲುವಾಗಿ ಮಾತ್ರ) ಹೊರ್ತು, ಸರಕಾರದವರು ಅದರ ಒತ್ತೆಯ ಬಗ್ಗೆ ಮೊದಲಿಗೆ ತಮ್ಮ ಮಂಜೂರಿಯನ್ನು ಕೊಡಬೇಕು.

(೪) ನೌಕರಿಯ ಸಲುವಾಗಿ ಧಾರಣ ಮಾಡಿದ ವತನ ಭೂಮಿಗಳು.— ಭೂಮಿಯನ್ನು ಪ್ರತಿಫಲದ ಸಲುವಾಗಿ ನೇಮಿಸಿಕೊಟ್ಟಿದ್ದರೆ ಅದನ್ನು ಸ್ವೀಕರಿಸಲಾ ಗದು. ಹೀಗೆ ನೇಮಿಸಿಕೊಡದಿದ್ದ ನೌಕರಿಯ ಸಲುವಾಗಿರುವ ವತನ ಭೂಮಿಯನ್ನು, ಅದರ ಬೆಲೆಯನ್ನು ಲಕ್ಷ್ಯದಲ್ಲಿ ತೆಗೆದುಕೊಂಡು, ಸ್ವೀಕರಿಸಬಹುದು (ಆರ್. ೧೭೦೭ ೯೨, ೧೦೮೪೯-೦೮, ೧೯-೧೦ ಮತ್ತು ಎಫ್. ೩೫೮೨-೧೨).

ಮಾರಲಿಕ್ಕೆ ಬರುವ ಹಕ್ಕಿರುತ್ತದೆಂದು ಸಿದ್ಧವಾದ ಹೊರ್ತು, ದೇವಸ್ಥಾನದ ಭೂಮಿಯನ್ನು ಸ್ವೀಕರಿಸತಕ್ಕದ್ದಲ್ಲ (ಆರ್. ೧೭೦೭-೯೨). ಆದರೆ ಒಂದು ಶರಕತಿ ಗ್ರಾಮದ ಇನಾಮದಾರನಿಗೆ, ಮುಖ್ಯವಾಗಿ ಅವನ ಜಾತಜಾಮೀನಿನ ಮೇಲೆ, ಸಾಲವನ್ನು ಕೊಡಲಾಯಿತು (ಎಫ್. ೮೧೧೦-೧೬).

(೫) ಭೂಮಿಯ ಸುಧಾರಣೆಯ ಸಲುವಾಗಿರುವ ಸಾಲದ ದೆಸೆಯಿಂದ, ಹೊಸತಾಗಿ ಗೇಣಿಗೆ ಕೊಟ್ಟ ಭೂಮಿಯು ಯೋಗ್ಯವಾದ ತಾರಣವಿರುತ್ತದೆ, ಯಾಕೆಂ ದರೆ, ಅದನ್ನು ಜಪ್ತು ಮಾಡಲಿಕ್ಕೆ ಬರುತ್ತದೆ ಮತ್ತು ಅದನ್ನು ಗೇಣಿದಾರಿಕೆ ಯಿಂದ ಮುಕ್ತ ಮಾಡಿ ಮಾರಲಿಕ್ಕೆ ಬರುತ್ತದೆ. ಆದರೆ ಹೊಲ ಮಾಡುವವರಿಗೆ

ಕೊಡುವ ಸಾಲದ ಬಾಬತಿನಲ್ಲಿ ಅದನ್ನು, ಅದನ್ನು ಧಾರಣ ಮಾಡುವವನ ಹೆಚ್ಚಿಗೆ ಹಾಗೂ ಬಾಧ್ಯತೆಗೆ ಒಳಪಟ್ಟು, ಬರೀ ಮಾರಲಾಗುತ್ತದೆ: ಕಲೆಕ್ಟರನು ಗೇಣಿದಾರಿಕೆಯನ್ನು ರದ್ದ ಮಾಡಿ ಇವನ್ನು ತೆಗೆದುಹಾಕಿದರೆ, ಸದರಿ ಭೂಮಿಯನ್ನು ತಾರಣವೆಂದು ಸ್ವೀಕರಿಸಿದಾಗ ಅದರ ಮೇಲಿದ್ದ ಬೋಜಾವನ್ನು ತೆಗೆದುಹಾಕುವದರಿಂದ ಸರಕಾರದವರಿಗೆ ನಷ್ಟ ಮಾಡಿ ತಾರಣವನ್ನು ಹೆಚ್ಚಿಗೆ ಬೆಲೆಯುಳ್ಳದ್ದನ್ನಾಗಿ ಮಾಡಿದಂತಾಗುತ್ತದೆ. ಆದರೆ ಹೊಸತಾಗಿ ಗೇಣಿಗೆ ಕೊಟ್ಟ ಭೂಮಿಯ ಬೆಲೆಯನ್ನು ಕಡಿಮೆ ಮಾಡಬೇಕೆಂದು ಸರಕಾರದವರು ಇಚ್ಛಿಸುವದಿಲ್ಲ; [illegible] ಗೇಣಿದಾರಿಕೆಯ ಕಾರಣದಿಂದ ಕೆಲವು ಹೆಚ್ಚಿಗೆ ಧಾರಣ [illegible] ವನ್ನು ಪಡೆಯಲಿಕ್ಕೆ ಪ್ರತಿಬಂಧವಾಗುತ್ತಿದ್ದದರಿಂದ, ಸರಕಾರದವರು [illegible] ಉದ್ದೇಶಗಳ ಸಲುವಾಗಿ ಸವಲತ್ತಿನ ಶರ್ತುಗಳ ಮೇಲೆ [illegible]. ಒಟ್ಟಿನ ಮೇಲೆ ಹೇಳುವದಾದರೆ, ಹೊಸತಾಗಿ ಗೇಣಿಗೆ ಕೊಟ್ಟ [illegible], ಹಿಂದಿನ ಕಾಲದಲ್ಲಿ ಗೇಣಿಗೆ ಕೊಟ್ಟಿದ್ದ ಅವರ ಬದಗಿರುವ [illegible] ಸಮಾನವೆಂದು ತಿಳಿದು ಸ್ವೀಕರಿಸಬಹುದು (ಜಿ. [illegible], [illegible]).

## ಪುರವಣಿಯ ತಾರಣವನ್ನು ಯಾವಾಗ್ಗೆ ತಕ್ಕೊಳ್ಳುವ [illegible] ಇರುವದಿಲ್ಲ.

೮. ಸುಧಾರಿಸಲ್ಪಡಬೇಕಾದ ಭೂಮಿಯಲ್ಲಿಯ [illegible] ಹಿತಸಂಬಂಧದ ಬೆಲೆಯು [೧೧], ಸದರಿ ಸಾಲವನ್ನು [illegible] ಯಾವದೇ ರಕಮು ಖರ್ಚಾಗಿದ್ದರೆ ಅದನ್ನು [illegible] ಹಾಗೂ ಅದರ ಮೇಲಿನ ಬಡ್ಡಿಯ ರಕಮುಗಳನ್ನೊಳಗೊಂಡರೆ, ಪುರವಣಿ [illegible] ತಾರಣದ ಅವಶ್ಯಕತೆಯಿರುವದಿಲ್ಲ.

[೧೧] "ಲ್ಯಾಂಡ್ ಅಕ್ವಿಝಿಶನ್ ಮಾನ್ಯುಅಲ್" ದಲ್ಲಿ [illegible], ಭೂಮಿಯ ಬೆಲೆ ಕಟ್ಟುವದರ ವಿಷಯದ ಟಿಪ್ಪಣಿಗಳನ್ನು ನೋಡಿರಿ.

೯. ಜಂಗಮ ಆಸ್ತಿಯನ್ನು ತಾರಣವೆಂದು [illegible] ಸ್ವೀಕರಿಸಬಾರದು. ಜಾತಜಾಮೀನನ್ನು ಸ್ವೀಕರಿಸಬಹುದು ಮತ್ತು ಇದು ಒಬ್ಬನೇ ಮನುಷ್ಯನದೂ ಇರಬಹುದು, ಆದರೆ ಅವನ ಸಾಲ ತೀರಿಸುವ ಶಕ್ತಿಯು ಸಾಕಷ್ಟಿರಬೇಕು.

ಒಬ್ಬನಿಗಿಂತ ಹೆಚ್ಚಿಗೆ ಜಾಮೀನುದಾರರಿದ್ದರೆ, ಅವರ ಕಡೆಯಿಂದ ಸಂಯುಕ್ತವಾಗಿ ಹಾಗೂ ಪ್ರತ್ಯೇಕವಾಗಿ ಬಾಂಡನ್ನು ಬರೆಸಿಕೊಳ್ಳುವದು ಲೇಸು.*

---

* ಈ ಲೆಕ್ಕವನ್ನು ಪ್ರತಿವರ್ಷ ಅಕೌಂಟಂಟ ಜನರಲ್ಲನು [illegible] ವಿಷಯದ ರಿಪೋರ್ಟಿನಲ್ಲಿ ಸೇರಿಸುವದಕ್ಕಾಗಿ ಫೆಬ್ರುವರಿಯಲ್ಲಿ ಕಳಿಸಿಕೊಡುತ್ತಾನೆ. ಆರ್. ೨೪೨೦–೦೩, ಎಫ್. ೪೩೧–೧೩).

(೨) ಭಯಂಕರ ಮೋಸ ಮಾಡಿದ ಸಂಗತಿಯು ಈ ಕೆಳಗಿನಂತೆ ಸಂಭವಿಸಿತು. ಸಾಲಗಾರನು ಮೊದಲಿಗೆ ತನ್ನ ಯಾವತ್ತು ಭೂಮಿಗಳನ್ನು ಮಾರಿದ ದಸ್ತೈವಜುಗಳನ್ನು ಮಾಡಿಕೊಟ್ಟನು. ಅವನು ಹೀಗೆ ಮಾಡಿರುತ್ತಾನೆಂದು ಗ್ರಾಮದಲ್ಲಿ ತಿಳಿದು ಬರುವ ಮುಂಚೆ, ಅವನು ಭೂಮಿಯ ಸುಧಾರಣೆಯ ಬಗ್ಗೆ ಒಂದು ದೊಡ್ಡ ರಕಮಿನ ಸಾಲದ ಸಲುವಾಗಿ ಅರ್ಜಿ ಮಾಡಿದನು. ಭೂಮಿಗಳ ಮೇಲೆ ಯಾವವೇ ಬೋಜಾಗಳು ಇರುವದಿಲ್ಲವೆಂದು ತಿಳಿದು ಸಾಲಗಳನ್ನು ಮಂಜೂರ ಮಾಡಲಾಯಿತು, ಮತ್ತು ಯಾವತ್ತು ಕೆಲಸಗಳ ಸಲುವಾಗಿರುವ ರಕಮನ್ನು ಒಮ್ಮೆಲೇ ಒಂದೇ ಕಾಲಕ್ಕೆ ಕೊಡಲಾಯಿತು. ಯಾವತ್ತು ಕೆಲಸಗಳನ್ನು ಏಕಕಾಲಕ್ಕೆ ಪ್ರಾರಂಭಿಸುವದು ತೀರ ಅಸಂಭವವಾಗಿತ್ತು. ಹಾಗೂ ಯಾವತ್ತು ರಕಮನ್ನು ಒಂದೇ ಕಾಲಕ್ಕೆ ಖರ್ಚು ಮಾಡುವದೂ ಅಶಕ್ಯವಿತ್ತು. ಹೀಗಿದ್ದರೂ ಸಾಲದ ಹಣವನ್ನು ಕೊಡುವವರ ಸಲುವಾಗಿ ಯಾವವೇ ಕಂತುಗಳನ್ನು ಗೊತ್ತುಮಾಡಲಿಲ್ಲ. ಸಾಲ ತಕ್ಕೊಂಡವನು, ತನಗೆ ಹಣ ದೊರೆತ ಮರುದಿವಸ ತನ್ನ ಜಿಲ್ಹೆಯನ್ನು ಬಿಟ್ಟು ಯಾವದೋ ಗೊತ್ತಿಲ್ಲದ ಕಡೆಗೆ ಹೊರಟುಹೋದನು ಮತ್ತು ಅಂದಿನಿಂದ ಈ ವರೆಗೆ ಅವನ ಪತ್ತೆಯೇ ಇಲ್ಲ; ಮತ್ತು ಅವನಿಗೆ ಸದರಿ ಭೂಮಿಯಲ್ಲಿ ಯಾವದೇ ಹಕ್ಕು, ಬಾಧ್ಯತೆ ಅಥವಾ ಹಿತಸಂಬಂಧವು ಇರುವದಿಲ್ಲೆಂಬ ಸಂಗತಿಯು ಚೌಕಶಿಯ ನಂತರ ಬೈಲಿಗೆ ಬಂತು. ಜಾಹೀರನಾಮೆಯನ್ನು ಹೊರಡಿಸಿ, ಅವನು ಮೋಸ ಮಾಡಿದ ಬಗ್ಗೆ ಅವನನ್ನು ದಸ್ತಗಿರು ಮಾಡುವ ವಾರಂಟುಗಳನ್ನು ತೆಗಿಸುವದರ ಹೊರ್ತಾಗಿ ಎರಡನೇ ಯಾವದೇ ಉಪಾಯವು ಉಳಿಯಲಿಲ್ಲ. ಅವನನ್ನು ದಸ್ತಗಿರು ಮಾಡಲಾಯಿತೋ ಇಲ್ಲವೋ ಎಂಬದು ಗೊತ್ತಿಲ್ಲ. ಸಾಲ ತಕ್ಕೊಳ್ಳುವವನಿಗೆ, ಸಾಲದ ರಕಮಿನ ಮೊದಲನೇ ಕಂತಿನ ಹಣವು ಖರ್ಚಾಗಿ ಸಾಕಷ್ಟು ಕೆಲಸವು ಮುಗಿದ ಹೊರ್ತು ಮುಂದಿನ ಕಂತು ಕೊಡಲ್ಪಡಲಿಕ್ಕಿಲ್ಲ ಎಂಬ ಶರ್ತಿನ ಮೇಲೆ ಸಾಲವನ್ನು ಕಂತುಗಳಿಂದ ಕೊಟ್ಟಿದ್ದರೆ, ಈ ಪ್ರಕಾರದ ನಷ್ಟವನ್ನು ಅಥವಾ ಅದರ ಬಹುಭಾಗವನ್ನು ಪ್ರತಿಬಂಧಿಸಬಹುದಾಗಿತ್ತು. ಸಾಲವನ್ನು ಕಂತುಗಳಿಂದ ತಕ್ಕೊಳ್ಳುವದರಿಂದ ಸಾಲ ತಕ್ಕೊಳ್ಳುವವನಿಗೆ ಬಹಳ ಬಡ್ಡಿಯ ಉಳಿತಾಯವಾಗುತ್ತದೆಂಬ ಸಂಗತಿಯನ್ನೂ ಲಕ್ಷ್ಯದಲ್ಲಿಡಬೇಕಾಗಿದೆ. ಹೀಗೆ ಕಂತುಗಳನ್ನು ಕೊಡುವಾಗ ಮಧ್ಯಂತರದಲ್ಲಿಯು ತಪಾಸಣೆಗಳನ್ನು ಕೂಡಲೇ ಮಾಡುವ ಬಗ್ಗೆ, ಹಾಗೂ ಮೊದಲಿಗೆ ಕೊಟ್ಟ ಕಂತುಗಳನ್ನು ಸಮಾಧಾನಕಾರಕವಾಗಿ ಉಪಯೋಗಿಸಲಾಗಿದೆ ಎಂದು ರಿಪೋರ್ಟು ಮಾಡಲ್ಪಟ್ಟ ತರುವಾಯ ಎರಡನೇ ಹಾಗೂ ಮುಂದಿನ ಕಂತುಗಳನ್ನು ಯೋಗ್ಯ ಕಾಲಕ್ಕೆ ಕೊಡುವ ಬಗ್ಗೆ ಕಾಳಜಿಯನ್ನು ವಹಿಸಬೇಕು. ಕೊನೆಯ ಕಂತುಗಳನ್ನು ಕೊಡುವದಕ್ಕೆ ವಿಳಂಬ ಮಾಡಿದರೆ, ಉದಾಹರಣಾರ್ಥವಾಗಿ, ಬಾವಿಯ ಸುತ್ತಲಿನ ಗೋಡೆಗಳನ್ನು ಕಟ್ಟುವವರ ಸಲುವಾಗಿರುವ ಕೊನೆಯ ಕಂತನ್ನು, ಮಳೆಗಾಲವು ಪ್ರಾರಂಭವಾಗಿ ಬಾವಿಯು ಕುಸಿದು ಬೀಳುವ ವರೆಗೆ ಕೊಡದಿದ್ದರೆ, ಹೆಚ್ಚಿಗೆ ನಷ್ಟವುಂಟಾಗುವ ಸಂಭವವಿದೆ. ೧೦ ರೂಪಾಯಿಗಳಿಗಿಂತ ಕಡಿಮೆ ರಕಮಿನ ಚಿಲ್ಲರೆ ಕಂತುಗಳನ್ನು ಕೊಡಬಾರದು.

(೩) ಇವೇ ಕಾರಣಗಳ ದೆಸೆಯಿಂದ, ಉಗಿಯ ಯಂತ್ರದಿಂದ ರಿಂಟಿ ಹೊಡೆಯುವ ಬಗ್ಗೆ ಅಥವಾ ಸರಕಾರದವರಿಂದ ನಡಿಸಲ್ಪಡುವ ಇವೇ ಪ್ರಕಾರದ ಇತರ ಕೆಲಸದ ಬಗ್ಗೆ (ಉದಾ: ಶೇತಕೀ ಖಾತೆಯವರು ಅಥವಾ ಲೋಕಲ್ ಫಂಡಿನವರು ತೂತು ಕೊರೆದು ಬಾವಿಗಳನ್ನು ತಯಾರಿಸುವದು) ಸಾಲವನ್ನು ಕೊಡುವಾಗ, ಸಂಬಂಧಪಟ್ಟ

ಖಾತೆಗೆ ಜಮಾ ರಕಮೆಂದು ವರ್ಗಾಯಿಸಿ ಅದನ್ನು ಸಾಲ ತಕ್ಕೊಳ್ಳುವವನಿಗೆ ಕೊಡಬೇಕು. ಈ ರಕಮನ್ನು ನಗದಾಗಿ ಅವನ ಕೈಯಲ್ಲಿ ಕೊಡುವದು ವಿಹಿತವಿರುವದಿಲ್ಲ.

[೧೪] ಮಳೆಯು ಆದ ನಂತರ ಬೀಜಗಳ ಸಲುವಾಗಿರುವ ಸಾಲವನ್ನು ಕೊಡಬೇಕು ಹಾಗೂ ಅದನ್ನು ಒಂದು ವಿಶಿಷ್ಟ ಮುಂಗಡ ರಕಮಿನೊಳಗಿಂದ ಕೂಡಲೇ ಕೊಡಬೇಕು (ಎಫ್. ೧೯೩೧–೦೩, ೩೧೬೮–೦೩).

## ಬಡ್ಡಿಯ ದರ.

೧೧. ಯಾವತ್ತು ಸಾಲಗಳ ಮೇಲೆ ಮಂಜೂರಾದ ಬಡ್ಡಿಯ ದರದಂತೆ [೧೫] ಬಡ್ಡಿಯನ್ನು [೧೬] ಸಾಮಾನ್ಯವಾಗಿ ಆಕಾರಿಸತಕ್ಕದ್ದು; ಆದರೆ ಸರಕಾರದವರು, ಕಮಿಶನರರ ಶಿಫಾರಸಿನ ಮೇರೆಗೆ, ಕಡಿಮೆ ಮಾಡಿದ ದರವನ್ನು [೧೭] ಮಂಜೂರ ಮಾಡಬಹುದು. ಅಥವಾ ಯಾವದೇ ಬಡ್ಡಿಯು ಅವಶ್ಯವಿಲ್ಲವೆಂದು ಹುಕುಮು ಮಾಡಬಹುದು.

ಮಂಜೂರ ಮಾಡಿದ ವಾರ್ಷಿಕ ದರಗಳು:—

ಸನ್ ೧೯೧೬ನೇ ಇಸವಿಯಿಂದ ೩೧-೩-೨೧ರ ವರೆಗೆ—ನೂರಕ್ಕೆ ೬¼ರಂತೆ (ಪ್ರತಿ ರೂಪಾಯಿಗೆ ಒಂದಾಣೆಯಂತೆ).

ಎಫ್. ೨೫೮೮—೧೩-೪-೨೧, ೧-೪-೨೧ರಿಂದ ೩೦-೬-೨೨ರ ವರೆಗೆ, ನೂರಕ್ಕೆ ೭½ಯಂತೆ.

ಎಫ್. ೮೩—೨೬-೬-೨೨, ೧-೭-೨೨ರಿಂದ ೩೧-೮-೨೪ರ ವರೆಗೆ, ನೂರಕ್ಕೆ ೮⅓ದಂತೆ (೧೬ ಪೈಗಳು).

ಎಫ್. ೮೩—೬-೯-೨೪, ೧-೯-೨೪ರಿಂದ ೩೦-೯-೨೪ರ ವರೆಗೆ, ನೂರಕ್ಕೆ ೭.೮೧೨೫ರಂತೆ (೧೫ ಪೈಗಳು).

ಎಫ್. ೮೩-ಈ—೭-೧೧-೨೪, ೧-೧೦-೨೪ರಿಂದ ನೂರಕ್ಕೆ ೭.೨೯ರಂತೆ (೧೪ ಪೈಗಳು).

ಎಫ್. ೮೩, ತಾರೀಖು ೩೧ನೇ ಜನವರಿ ಸನ್ ೧೯೨೭ನೇ ಇಸವಿ, ೧ನೇ ಎಪ್ರಿಲ ಸನ್ ೧೯೨೭ನೇ ಇಸವಿಯಿಂದ—ನೂರಕ್ಕೆ ೬.೭೭ರಂತೆ (೧೩ ಪೈಗಳು).

ಎಫ್. ೮೩, ತಾರೀಖು ೧೮ನೇ ಅಕ್ಟೋಬರ ಸನ್ ೧೯೩೦ನೇ ಇಸವಿ, ೧-೧೧-೩೦ರಿಂದ—ನೂರಕ್ಕೆ ೮೩ದಂತೆ (೧೬ ಪೈಗಳು).

ಎಫ್. ೮೩, ತಾರೀಖು ೨ನೇ ಮೇ ಸನ್ ೧೯೩೫ನೇ ಇಸವಿ, ಸನ್ ೧೯೩೫ನೇ ಇಸವಿಯ ಮೇ ೧ನೇ ತಾರೀಖಿನಿಂದ ನೂರಕ್ಕೆ ೭೧೩ರಂತೆ (೧೫ ಪೈಗಳು).

ಸನ್ ೧೯೩೪ನೇ ಇಸವಿಯ ಎಪ್ರಿಲ ತಿಂಗಳ ೧ನೇ ತಾರೀಖಿನಿಂದ ಸನ್ ೧೯೩೬ನೇ ಇಸವಿಯ ಎಪ್ರಿಲ ತಿಂಗಳ ೩೦ನೇ ತಾರೀಖಿನ ವರೆಗಿನ ನಡುವಿನ ಅವಧಿಯಲ್ಲಿ ಕೊಡ ಮಾಡಲಾದ ಸಾಲಗಳ ಬಗ್ಗೆ ವಸ್ತುಶಃ ಕೊಟ್ಟ ಸಾಲಗಳ ಮೇಲೆ ಒಂದು ರೂಪಾಯಿಗೆ ೧೩ ಪೈಗಳಂತೆ ಕಡಿಮೆ ಮಾಡಿದ ಬಡ್ಡಿಯ ದರವನ್ನು ಆಕಾರಿಸತಕ್ಕದ್ದೆಂದು ಸರಕಾರದವರು, ಪ್ರಾಯೋಗಿಕ ಯೋಜನೆಯೆಂದು ತಿಳಿಸಿ, ಘೋಷಿಸಿದ್ದಾರೆ (ಎಫ್. ೮೩, ೩ನೇ ಎಪ್ರಿಲ ಸನ್ ೧೯೩೪ ಹಾಗೂ ೭ನೇ ಮೇ ಸನ್ ೧೯೩೫).

ಮಳೆಯು ನಿಯಮಿತವಾಗಿ ಆಗದಿರುವ ಪ್ರದೇಶಗಳಲ್ಲಿ ಬಾವಿಗಳ ನೀರಾವರಿಯನ್ನು ಬೆಳಿಸುವದರ ಸಲುವಾಗಿ, ೧೦೭ನೇ ಪುಟದ (೪)ನೇ ಟಿಪ್ಪಣಿಯಲ್ಲಿ ವಿವರಿಸಿದ ಯಾವತ್ತು ಪ್ರದೇಶಗಳಲ್ಲಿ ಹೊಸ ಬಾವಿಗಳನ್ನು ಅಗಿಯುವದರ ಸಲುವಾಗಿ ಅಥವಾ ಕುಗ್ಗಿದ್ದ ಬಾವಿಗಳನ್ನು ಸುಧಾರಿಸುವದರ ಅಥವಾ ದುರಸ್ತು ಮಾಡುವದರ ಸಲುವಾಗಿ ಸಾಲಗಳನ್ನು ಪ್ರತಿ ರೂಪಾಯಿಗೆ ೧೦ ಪೈಗಳ (ನೂರಕ್ಕೆ [illegible]ರಂತೆ) ಸವಲತ್ತಿನ ಬಡ್ಡಿಯ ದರದಿಂದ ಕೊಡತಕ್ಕದ್ದು, ಮತ್ತು ಪಂಪುಗಳನ್ನು ಸ್ಥಾಪಿಸುವದರ ಸಲುವಾಗಿ ಯಾವದೇ ವಿಶಿಷ್ಟ ಸವಲತ್ತನ್ನು ಕೊಡಬಾರದು (ಆರ್. ೬೦೧೯, ತಾರೀಖು ೧೯ನೇ ಮೇ ಸನ್ ೧೯೨೭ನೇ ಇಸವಿ).

[೧೫] "ರಿಫಾರ್ಮ್ಸಗಳನ್ವಯ" ಮಧ್ಯವರ್ತಿ ಸರಕಾರದ ಹಾಗೂ ಪ್ರಾಂತಿಕ ಸರಕಾರಗಳ ಉತ್ಪನ್ನ ಹಾಗೂ ಖರ್ಚುಗಳನ್ನು ಪ್ರತ್ಯೇಕ ಮಾಡುವ ಮುಂಚೆ, ಸನ್ ೧೯೧೪ನೇ ಇಸವಿಯ ಮಾರ್ಚ ತಿಂಗಳ ೩೧ನೇ ತಾರೀಖಿನ ಒಪಸದ ಶಿಲುಕನ್ನು ಸನ್ ೧೯೧೫ನೇ ಇಸವಿಯ ಮಾರ್ಚ ತಿಂಗಳ ೩೧ನೇ ತಾರೀಖಿನ ಒಪಸದ

ತಗಾಯಿ ವ್ಯವಹಾರದ ಲೆಕ್ಕಗಳಿಂದ ಸರಕಾರದವರಿಗೆ ಲಾಭವುಂಟಾಗುತ್ತದೋ ಅಥವಾ ನಷ್ಟವುಂಟಾಗುತ್ತದೋ ಎಂಬದನ್ನು ಗೊತ್ತುಪಡಿಸುವದರ ಸಲುವಾಗಿ ಈ ಕೆಳಗಿನಂತೆ ಲೆಕ್ಕ ಮಾಡುವದು ಅವಶ್ಯವಿರುತ್ತದೆ:—

## ಖರ್ಚು.

(೧) ಸನ್ ೧೯೨೧-೨೨ನೇ ಇಸವಿಯ ಪ್ರಾರಂಭಕ್ಕೆ ತಗಾಯಿ ಬಾಕಿಗಳು (ಅಸಲು ಹಾಗೂ ಬಡ್ಡಿ), ಮತ್ತು

(೨) ಸನ್ ೧೯೨೧-೨೨ನೇ ಇಸವಿಯಲ್ಲಿ ಕೊಟ್ಟ ಸಾಲಗಳು, ಮತ್ತು

(೩) (೧)ನೇದ್ದರ ಮೇಲೆ ಒಂದು ವರ್ಷದ ಬಡ್ಡಿ, ಮತ್ತು (೨)ನೇದ್ದರ ಮೇಲೆ ಸದರಿ ವರ್ಷದ ಸಲುವಾಗಿ ಹಿಂದುಸ್ಥಾನ ಸರಕಾರದವರ ಪ್ರಮಾಣಭೂತ ಬಡ್ಡಿಯ ದರದಂತೆ ಒಂದು ವರ್ಷದ ಬಡ್ಡಿ, ಮತ್ತು

(೪) ಆಡಳಿತದ ಖರ್ಚು.

## ಜಮಾ.

ಸದರಿ ವರ್ಷದಲ್ಲಿ ಮಾಡಿದ ವಸೂಲಿಗಳು (ಅಸಲು ಹಾಗೂ ಬಡ್ಡಿ).

ಇವೆರಡರ ನಡುವಿನ ಅಂತರವು, ಸನ್ ೧೯೨೧-೨೨ನೇ ಇಸವಿಯ ಕೊನೆಗೆ ಉಳಿಯುವ ಖರ್ಚಿನ ಬಾಬಿನ ಬಾಕಿಯಾಗಿರುತ್ತದೆ. ನಾವು ಇದರೊಳಗಿಂದ "ವಸೂಲಾಗುವ ಸಾಲಗಳನ್ನು", ಅಂದರೆ, ಆ ವರ್ಷದ ಕೊನೆಗಿರುವ ಅಸಲಿನ ಹಾಗೂ ಬಡ್ಡಿಯ ಸೂಟು ಕೊಡದಿದ್ದ ಬಾಕಿಗಳನ್ನು ವಜಾ ಮಾಡಿದರೆ, ಈ ಅಂತರವು, ಆ ವರ್ಷದ ತಗಾಯಿ ಲೆಕ್ಕದ ಸಂಬಂಧದ ನಕ್ಕೀ ನಷ್ಟವು ಅಥವಾ ಲಾಭವು ಆಗುವದು.

ಇನ್ನೂ ಮುಂದಿನ ವರ್ಷಗಳ ಸಲುವಾಗಿ ಲಾಭ ನಷ್ಟವನ್ನು ಲೆಕ್ಕ ಮಾಡುವ ಬಗ್ಗೆ, ಯಾವದೊಂದು ವರ್ಷದ ಕೊನೆಗೆ ಖರ್ಚಿನ ಬಾಜುವಿನಲ್ಲಿ ಬಾಕಿ ಉಳಿವದನ್ನು, ಅದರ ಮುಂದಿನ ವರ್ಷದ ಪ್ರಾರಂಭದ ತಗಾಯಿ ಸಾಲಗಳ ಲೆಕ್ಕದ ಬಾಕಿ ಉಳಿದ ಸಾಲವೆಂದು ಮುಂದೆ ಒಯ್ಯಬೇಕು; ಮತ್ತು ಇದನ್ನು ಹೀಗೆ ಮಾಡುತ್ತಾ ಹೋಗಬೇಕು.

[೧೬] (೧) ಸಾಲಗಳನ್ನು ಕಡಿಮೆ ಬಡ್ಡಿಯ ದರದಿಂದ ಅಥವಾ ಯಾವದೇ ಬಡ್ಡಿಯಿಲ್ಲದೆ ಮಂಜೂರ ಮಾಡಿದ್ದರೆ, ನಾವು ಇತರ ಸವಲತುಗಳ ಸಲುವಾಗಿ ದೊರೆಯುವಂತಿರುವ ಹೆಚ್ಚಿನ ರಕಮನ್ನು ಕಡಿಮೆ ಮಾಡುತ್ತೇವೆಂಬದನ್ನು ಲಕ್ಷ್ಯದಲ್ಲಿಡತಕ್ಕದ್ದು (ಎಫ್. ೧೩೩೮—೧೧).

(೨) ವಾಡಿಕೆಯಾಗಿ ಬಡ್ಡಿಯಿಲ್ಲದೆ ಸಾಲಗಳನ್ನು ಕೊಡಲಿಕ್ಕೆ ನಾಕಾರಿಸಲಾಗುತ್ತದೆ (ಎಫ್. ೪೨೬೩—೦೯; ೧೩೩೮—೧೧; ಎಫ್. ೪೨೭೫—೦೩ನೇದ್ದರಲ್ಲಿಯ ಹಿಂದುಸ್ಥಾನ ಸರಕಾರದವರ ಪತ್ರದ ೧೧ನೇ ಪ್ಯಾರಾ). ಇಂಥ ಸಾಲಗಳನ್ನು ಮಂಜೂರ

ಮಾಡಿದ ಒಂದು ಉದಾಹರಣೆಯನ್ನು ಎಫ್. ೧೯೪೯-೦೪ನೇದ್ದರಲ್ಲಿ ಕಾಣಬಹುದು, ಆದರೆ ಈ ಪದ್ಧತಿಯನ್ನು ಪುನಃ ಆಚರಣೆಯಲ್ಲಿ ತರುವದು ಯುಕ್ತವಲ್ಲ.

[೧೭] ಯಾವಾಗಲೂ ಸರಳಬಡ್ಡಿಯನ್ನು ಆಕಾರಿಸಲಾಗುತ್ತದೆ. ಯಾವ ಕಾನೂನಿನನ್ವಯ ವಸೂಲಾದ ಯಾವತ್ತು ರಕಮನ್ನು ಮೊದಲಿಗೆ ಬಡ್ಡಿಯ ಖಾತೆಗೆ ಜಮಾ ಹಿಡಿದ ನಂತರ ಅಸಲಿಗೆ ಜಮಾ ಹಿಡಿಯಲಾಗುವದೋ, ಆ ಕಾನೂನಿನ ಮೇರೆಗೆ, ಹಣವು ನಿಯಮಿತವಾಗಿ ವಸೂಲಾಗುತ್ತಿರುವ ಸಾಮಾನ್ಯ ಬಾಬತುಗಳಲ್ಲಿ, ಚಕ್ರಬಡ್ಡಿಯನ್ನು ಆಕಾರಿಸಬಹುದಾದ ವಸೂಲಾದ ಯಾವದೇ ಬಡ್ಡಿಯು ಇರುವದು ಶಕ್ಯವಿರುವದಿಲ್ಲ. ಯಾವನೊಬ್ಬ ಸಾಲ ತಕ್ಕೊಳ್ಳುವವನು ತನ್ನ ಕಂತನ್ನು ಕೊಡುವದಕ್ಕೆ ಪೂರ್ಣ ಅಸಮರ್ಥನಿದ್ದರೆ, ಅವನ ಮೇಲೆ ದಂಡದ ಬಡ್ಡಿಯನ್ನು ಹೊರಿಸದೆ, ಅವನಿಗೆ ಕಂತನ್ನು ತಹಕೂಬ ಮಾಡುವದು ಅಥವಾ ಇತರ ಯಾವದೇ ಸವಲತನ್ನು ಕೊಡುವದು ಹೆಚ್ಚು ಯೋಗ್ಯವಾಗಬಹುದು. ಸಾಲಗಾರನು ಬಡ್ಡಿಯನ್ನು ಕೊಡಲಿಕ್ಕೆ ನಿಜವಾಗಿ ಸಮರ್ಥನಿದ್ದಾಗ್ಯೂ, ಅವನ ವಿರುದ್ಧವಾಗಿ ಸಕ್ತಿಯ ವಸೂಲಿಯ ಉಪಾಯಗಳು ಕೈಕೊಳ್ಳಲ್ಪಡುವ ವರೆಗೆ ಅವನು ಬಡ್ಡಿಯನ್ನು ಕೊಡಲಿಕ್ಕೆ ತಪ್ಪಿದ ಬಾಬತಿನಲ್ಲಿ ಮಾತ್ರ, ಅವನ ಮೇಲೆ ದಂಡದ ಬಡ್ಡಿಯನ್ನು, ಅಂದರೆ, ಬಾಕಿ ಉಳಿದ ಬಡ್ಡಿಯ ಮೇಲೆ ಹಾಗೂ ಅಸಲಿನ ಮೇಲೆ ಬಡ್ಡಿಯನ್ನು ಹೊರಿಸತಕ್ಕದ್ದು. ಆದರೆ ಈ ದಂಡದ ಬಡ್ಡಿಯ ಆಕಾರಣೆಯನ್ನು ಎಫ್. ೨೮೫೫-೧೧ ಇದರಿಂದ ರದ್ದ ಮಾಡಲಾಯಿತು.

ತಾರಣದ ಬಾಂಡುಗಳನ್ನು [೧೮] [೧೯] ಬರೆದು ಕೊಡೋಣ.

೧೨. ಸಾಲವನ್ನು ಮಂಜೂರಮಾಡುವ ಹುಕುಮನ್ನು, ಸಾಲಕ್ಕಾಗಿ ಪ್ರತ್ಯೇಕ ಅರ್ಜಿ ಮಾಡಲ್ಪಟ್ಟಿದ್ದರೆ, ಅದರ ಮೇಲೆ ಮತ್ತು ಸದರಿ ಬಾಬತಿಗೆ ಯೋಗ್ಯವಾಗುವ ಇಲ್ಲಿ ಜೋಡಿಸಿದ ೧ರಿಂದ ೩ರ ವರೆಗಿನ ನಮೂನೆಗಳ ಪೈಕಿ ಯಾವದೊಂದು ನಮೂನೆಯಲ್ಲಿ ಬರೆಯಬೇಕು, ಮತ್ತು ಸಾಲವನ್ನು ಅಥವಾ ಅದರ ಮೊದಲನೇ ಕಂತನ್ನು ಕೊಡುವ ಕಾಲಕ್ಕೆ ಅಥವಾ ಅದರ ಪೂರ್ವದಲ್ಲಿ, ಅರ್ಜದಾರನು ಅಥವಾ ಅರ್ಜದಾರರು ಹಾಗೂ ಸಂಬಂಧಪಡುವ ಇತರ ಮನುಷ್ಯರು ಅದರಲ್ಲಿರುವ ಶರ್ತುಗಳು ತಮಗೆ ತಿಳಿದಿರುವವೆಂಬ ಬಗ್ಗೆ ಹಾಗೂ ಅವುಗಳಿಗೆ ತಾವು ಒಪ್ಪಿಗೆ ಕೊಟ್ಟಿರುವೆವೆಂಬ ಬಗ್ಗೆ ಸದರಿ ಹುಕುಮಿನ ಮೇಲೆ ಸಹಿ ಮಾಡಬೇಕು.

[೧೮] ಬಾಂಡುಗಳನ್ನು ಪ್ರಾಂತ ಅಮಲದಾರನು ಅಥವಾ ಕಲೆಕ್ಟರನು ಮಂಜೂರು ಮಾಡಿದಾಗ್ಯೂ, ಮಾಮಲೇದಾರನು ಅವುಗಳ ಮೇಲೆ ಸಹಿ ಮಾಡಬಹುದು (ಎಫ್. ೭೫೨೨-೧೯).

[೧೯] ಬರೆದು ಕೊಡಬೇಕಾದ ತಾರಣದ ಹಾಗೂ ಬಾಂಡುಗಳ ಕಾಯದೇಶೀರ ನಮೂನೆಗಳನ್ನು ಎಫ್. ೧೭೮–೧೧ ಇದರಲ್ಲಿ ಠರಾಯಿಸಲಾಗಿದೆ. ಸದರಿ ಸಮಗ್ರ ಠರಾವನ್ನು, ಅದರೊಳಗಿನ ಕಾಯದೆಯ ವಿಷಯದ ಚರ್ಚೆಗಳ ಸಹಿತ, ಮನಸ್ಸು ಕೊಟ್ಟು ಓದಬೇಕು. ಈ ಸಮಗ್ರ ವಿಷಯವನ್ನು ನಾವು ಸಂಕ್ಷಿಪ್ತವಾಗಿ ಹೇಳುವೆವು. ಬಾಂಡುಗಳ ನಮೂನೆಯು, ಆಕ್ಟುಗಳಿಂದ ಕಾಯದೇಶೀರವಾಗಿ ಮಾಡಲಾದ ವಸೂಲಿಯ ಪದ್ಧತಿಗಳಿಂದ ಹಾಗೂ ವೇಳೆಗಳಿಂದ ಇನ್ನುಮುಂದೆ ನಿರ್ಣಯಿಸಲ್ಪಡುವದು.

ಪ್ರಾರಂಭಕ್ಕೆ ನಾವು ಸಂಯುಕ್ತ ಹಾಗೂ ಸಾಮಾನ್ಯ ಬಾಂಡುಗಳ ನಡುವಿನ ಭೇದವನ್ನು ತಿಳಿಯಬೇಕು. ಸಂಯುಕ್ತ ಬಾಂಡು ಅಂದರೆ, ಹತ್ತು ಜನರ ಪೈಕಿ ಪ್ರತಿಯೊಬ್ಬನಿಗೆ ೨೦ ರೂಪಾಯಿಗಳ ಸಾಲ ತಕ್ಕೊಳ್ಳುವದಿದ್ದರೆ, ಅವರ ಪೈಕಿ ಪ್ರತಿಯೊಬ್ಬನು ಪ್ರತ್ಯೇಕವಾಗಿ, ತನ್ನ ಸಾಲವಾದ ೨೦ ರೂಪಾಯಿಗಳಷ್ಟೇ ಅಲ್ಲದೆ ವಿಶಿಷ್ಟ ಪ್ರಸಂಗದಲ್ಲಿ ೨೦೦ ರೂಪಾಯಿಗಳನ್ನು ಕೊಡಲಿಕ್ಕೆ ಬದ್ಧರಿದ್ದೇವೆಂದು ಬರೆದುಕೊಡುತ್ತಾರೆ ಎಂದರ್ಥವಾಗುತ್ತದೆ. ಪ್ರತಿಯೊಬ್ಬನು ತನ್ನ ಹೊರತಾಗಿ ಉಳಿದ ಯಾವತ್ತು ಜನರ ಸಲುವಾಗಿ ಹೊಣೆ ಕೊಡುವ ಸಹಕಾರ್ಯದ ಈ ವಿಚಾರವು, ಪತ್ತಿನ ಸಹಕಾರೀ ಸಂಘಗಳ ಮುಖಾಂತರವಾಗಿ ಹೆಚ್ಚಿಗೆ ಬಳಿಕೆಯಲ್ಲಿ ಬರಹತ್ತಿದೆ. ಆದರೆ, ದೊಡ್ಡ ಸಂಖ್ಯೆಯ ಪ್ರತ್ಯೇಕ ಬಾಂಡುಗಳನ್ನು ಬರೆಯುವ ಶ್ರಮವನ್ನು ತಪ್ಪಿಸುವದಕ್ಕಾಗಿ ಸಾಮಾನ್ಯ ಬಾಂಡು ಒಂದು ಬರೇ ಬರವಣಿಗೆಯ ವಿಷಯದ ಹಂಚಿಕೆಯಾಗಿರುತ್ತದೆ. ೨೦ ರೂಪಾಯಿಗಳ ಹತ್ತು ಬಾಂಡುಗಳನ್ನು ಬೇರೆಬೇರೆಯಾಗಿ ಬರೆಯುವದರ ಬದಲಾಗಿ, ನಾವು ಒಂದೇ ಬಾಂಡನ್ನು ಬರೆದು ಅದರ ಪರಿಶಿಷ್ಟದಲ್ಲಿ ಹತ್ತು ನೋಂದಣಿಗಳನ್ನು ಬರೆಯುತ್ತೇವೆ. ಸಾಲ ತಕ್ಕೊಳ್ಳುವ ಪ್ರತಿಯೊಬ್ಬ ಮನುಷ್ಯನು ತನ್ನ ೨೦ ರೂಪಾಯಿಗಳ ಸಲುವಾಗಿ ಮಾತ್ರ ಜವಾಬದಾರನಿರುತ್ತಾನೆ ಮತ್ತು ಎರಡನೇಯವರ ಸಲುವಾಗಿ ಯಾವದೇ ಜವಾಬದಾರಿಯು ಅವನ ಮೇಲಿರುವದಿಲ್ಲ.

ತಗಾಯಿಯನ್ನು ಹ್ಯಾಗೆ ವಸೂಲ ಮಾಡಲಿಕ್ಕೆ ಬರುತ್ತದೆ.

ಅ. ಭೂಮಿಯ ಸುಧಾರಣೆ ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟಿನನ್ವಯ, ತಗಾಯಿ ಸಾಲವನ್ನು, ಸುಧಾರಿಸಿದ ಭೂಮಿಯಿಂದ, ಇದನ್ನು ಸರಕಾರದವರಿಗೆ ಸಾಲಕ್ಕಾಗಿ ಒತ್ತೆಯಿಂದ ಕೊಟ್ಟಿರಲಿ ಅಥವಾ ಇಲ್ಲದಿರಲಿ, ವಸೂಲ ಮಾಡಲಿಕ್ಕೆ ಬರುತ್ತದೆ; ಈ ಭೂಮಿಯನ್ನು, ಮೊದಲಿನ ಯಾವತ್ತು ಬೋಜಾಗಳಿಂದ ಮುಕ್ತವಾಗಿ (ಮತ್ತು, ನಂತರದ ಯಾವದೇ ಬೋಜಾದಿಂದಲೂ ಮುಕ್ತವಾಗಿ), ಜಪ್ತು ಮಾಡಲಿಕ್ಕೆ ಹಾಗೂ ಮಾರಲಿಕ್ಕೆ * ಬರುತ್ತದೆ. (ಭೂಮಿಯ ಮಹಸೂಲಿನ ಕಾಯದೆಯ ೫೬ನೇ ಹಾಗೂ ೧೫೩ನೇ ಕಲಮುಗಳು.) ಮಾರಿದ ನಂತರ ಏನಾದರೂ ಹೆಚ್ಚಿಗೆ ರಕಮು ಉಳಿದರೆ, ಅದು ಸಾಲಗಾರನ ಅಥವಾ ಅವನಿಂದ

---

* ಮಾರಲಿಕ್ಕೆಂದು ತೆಗೆದ ಹೊರತಾಗಿ ಇದನ್ನು ಜಪ್ತು ಮಾಡಲಿಕ್ಕೆ ಬರುವದಿಲ್ಲ, ಆದರೆ ಆದನ್ನು ಯಾರೂ ಬೇಡದಿದ್ದರೆ, ಅದು ಸರಕಾರೀ ಬೀಳು ಭೂಮಿಯಾಗುತ್ತದೆ.

ಒತ್ತೆ ಪಡೆದವನ ಮಾಲಕಿಯದಾಗುವದು ಸ್ವಾಭಾವಿಕವು (ಎಫ್. ೧೫೪೯–೧೦). ಜಪ್ತಿಯ ಇಂಥ ಪ್ರಸಂಗಗಳಿಗೆ, ಭೂಮಿಯ ಮಹಸೂಲಿನ ಕಾಯದೆಯ ೮೦ನೇ ಕಲಮಿನ ಠರಾವುಗಳು ಲಾಗೂ ಆಗುತ್ತವೆ (ಆರ್. ೨೫೧–೦೦); ವಸೂಲಿಯ ಇತರ ಪ್ರಕಾರಗಳಲ್ಲಿ, ಇತರ ಪಕ್ಷಕಾರರ ಹಕ್ಕುಗಳನ್ನು ಸಂರಕ್ಷಿಸಲಾಗುತ್ತದೆ.

ಎರಡನೇ ಮನುಷ್ಯನಿಗೆ ಕೊಟ್ಟ ತಗಾಯಿ ಸಾಲದ ಸಹಾಯದಿಂದ ತನ್ನ ಭೂಮಿಯನ್ನು ಸುಧಾರಿಸಿಕೊಂಡ ಒಬ್ಬ ಮನುಷ್ಯನ ಕಡೆಯಿಂದ ಸದರಿ ಸಾಲವನ್ನು ವಸೂಲ ಮಾಡುವ ವಿಷಯದ ಸಂಬಂಧದಿಂದ ರಿಮೆಂಬ್ರೆನ್ಸರ್ ಆಫ್ ಲೀಗಲ್ ಅಫೇರ್ಸ್ ಇವರು ಬರೆದಿಟ್ಟ ಅಭಿಪ್ರಾಯವು ಈ ಕೆಳಗಿನಂತಿದೆ:—

"ಅರ್ಜದಾರಳು ಸಾಲ ತಕ್ಕೊಂಡವಳಾಗಲಿ ಜಾಮೀನುದಾರಳಾಗಲಿ ಇರದ್ದ ಕಾರಣ, ಅವಳು ತಗಾಯಿ ಬಾಕಿಯ ಯಾವದೇ ರಕಮನ್ನು ಕೊಡಲಿಕ್ಕೆ ಪಾತ್ರಳಿರುವದಿಲ್ಲ. ಎರಡನೇ ಸಂಗತಿಯೇನೆಂದರೆ, ಸದರಿ ಭೂಮಿಯಲ್ಲಿಯ (ಇದು ಅವಳಿಗೆ ಅವಳ ತಂದೆಯಿಂದ ಪಿತ್ರಾರ್ಜಿತವಾಗಿ ಬಂದಿತ್ತು) ಅವಳ ಹಿತಸಂಬಂಧವು, ಸದರಿ ಸಾಲವನ್ನು ಕೊಡುವದಕ್ಕಿಂತ ಮುಂಚೆಯೇ ಉತ್ಪನ್ನವಾಗಿತ್ತು. ಕಲೆಕ್ಟರನ ಹುಕುಮನಾಮೆಯು ಈ ಸಂಗತಿಯನ್ನು ಬರೇ ಸ್ವಾಧೀನ ಹಾಗೂ ಸದರಿ ಆಸ್ತಿಯನ್ನು ಅವಳ ತಾಬೆಗೆ ಕೊಟ್ಟಿತ್ತೆಂತಲೂ ತೋರಿಸುತ್ತದೆ; ನಾಲ್ಕನೆ ಅವಳು ತನ್ನ ಸಮ್ಮತಿಯನ್ನು ಕೊಟ್ಟಿರಲಿಲ್ಲ, ಯಾಕೆಂದರೆ, ಇದರ ವಿರುದ್ಧವಾಗಿ ಅವಳು ತಕರಾರು ಮಾಡಿದ್ದಳು; ಆದ್ದರಿಂದ, (ಸನ್ ೧೮೮೩ನೇ ಇಸವಿಯ ೧೯ನೇ) ಸದರಿ ಆಕ್ಟಿನ ೭(೧)ನೇ ಕಲಮಿನ ವಿಶೇಷ ಠರಾವಿನನ್ವಯ, ಸದರಿ ಸಾಲದಿಂದ ಲಾಭ ಹೊಂದಿದ ಅವಳ ಪಾಲಿನ ಭೂಮಿಯು ಸಾಲದ ಜವಾಬದಾರಿಗೆ ಪಾತ್ರವಿರುವದಿಲ್ಲ" (ಎಫ್. ೩೧೬೨–೧೮).

ಬ. ಭೂಮಿಯ ಸುಧಾರಣೆ ಮಾಡುವದಕ್ಕೋಸ್ಕರ ಸಾಲಗಳನ್ನು ಕೊಡುವ ಆಕ್ಟಿನನ್ವಯ, ಸುಧಾರಿಸಲ್ಪಟ್ಟ ಭೂಮಿಯ ಹೊರತಾಗಿ ಇತರ ಭೂಮಿಯೊಳಗಿಂದ (ಇದನ್ನು ಸಾಲ ತಕ್ಕೊಳ್ಳುವವನು ಅಥವಾ ಅವನ ಜಾಮೀನುದಾರನು [illegible]ವಾಗಿ ಒತ್ತೆ ಹಾಕಿದ್ದರೆ), ಮತ್ತು ಹೊಲ ಮಾಡುವವರ ಸಾಲಗಳ ಆಕ್ಟಿನನ್ವಯ ಒತ್ತೆ ಹಾಕಲ್ಪಟ್ಟ ಭೂಮಿಯೊಳಗಿಂದ, ಕೆಳಗಿನ ಎರಡೇ ರೀತಿಯಿಂದ ವಸೂಲಿಯನ್ನು ಮಾಡಲಿಕ್ಕೆ ಬರುತ್ತದೆ:—

(೧) ಕೊಡಲಿಕ್ಕೆ ಪಾತ್ರನಿರುವ ಮನುಷ್ಯನಿಂದ ಸಲ್ಲಬೇಕಾದ (ಅಂದರೆ, ಯಾವದೊಂದು ವಿವಕ್ಷಿತ ಭೂಮಿಯ ಮೇಲಿನ ಬಾಕಿಯಾಗಿರದೆ ಕೊಡಲಿಕ್ಕೆ ತಪ್ಪಿದವನ ತಾಬೆಯಲ್ಲಿರುವ ಯಾವದೇ ಸ್ಥಾವರ ಆಸ್ತಿಯೊಳಗಿಂದ ವಸೂಲ ಮಾಡಬಹುದಾದ ಭೂಮಿಯ ಮಹಸೂಲಿನ (ಭೂಮಿಯ ಮಹಸೂಲಿನ ಕಾಯದೆಯ ೧೫೫ನೇ ಕಲಮು) ಬಾಕಿಯಂತೆ.

(೨) ಒತ್ತೆಯಿಡಲ್ಪಟ್ಟ ಭೂಮಿಯನ್ನು ಒತ್ತೆಗೆ ಪಡೆದವನೆಂದು (೧) ಈ ರೀತಿಯಿಂದ ಅದನ್ನು ಭೂಮಿಯೊಳಗಿಂದ ವಸೂಲ ಮಾಡಿದರೆ, ಪ್ರಕಟಮಾಡಲ್ಪಟ್ಟ ಅಥವಾ ಮಾಡಲ್ಪಡೆದಿದ್ದ ಯಾವದೇ ಹಿಂದಿನ ಬೋಜಾಕ್ಕೆ ಒಳ

ಪಟ್ಟು.* ಹಾಗೂ ಸಾಲಗಾರನು ಸಾಲವನ್ನು ತಕ್ಕೊಂಡ ನಂತರ ನಿರ್ಮಿಸಿರ ಬಹುದಾದ ಯಾವದೇ ನಂತರದ ಬೋಜಾದ ನಂತರ, ಸದರಿ ಸಾಲಗಾರನ ಹಕ್ಕನ್ನು, ಬಾಧ್ಯತೆಯನ್ನು ಹಾಗೂ ಹಿತಸಂಬಂಧವನ್ನು ಮಾರಲಿಕ್ಕೆ† ಮಾತ್ರ ನಮಗೆ ಬರುತ್ತದೆ. (೨) ಆದರೆ ನಾವು ಆಸ್ತಿಯನ್ನು ತಟದಿಲು ಮಾಡಿಕೊಡುವ ವಿಷಯದ ಆಕ್ಟಿನ ೬೯ನೇ ಕಲಮಿನನ್ವಯ ಒತ್ತೆಯನ್ನೂ ತಕ್ಕೊಳ್ಳುವ ಮುಂಜಾಗ್ರತೆಯನ್ನು ತೆಗೆದುಕೊಂಡರೆ, ಪ್ರಾರಂಭಕ್ಕೆ ದಿವಾಣೀ ದಾವೆಯನ್ನು ಮಾಡದೆ ಹಾಗೂ ಭೂಮಿಯ ಮಹಸೂಲಿನ ಕಾಯದೆಯ ಸಹಾಯವನ್ನು ತಕ್ಕೊಳ್ಳದೆ ಕೆಲವು ಪ್ರಸಂಗಗಳಲ್ಲಿ ನಮಗೆ ಭೂಮಿಯನ್ನು ಮಾರಲಿಕ್ಕೆ ಬರುತ್ತದೆ. ಸದರಿ ಭೂಮಿಯ ಒತ್ತೆಯನ್ನು ತಕ್ಕೊಳ್ಳುವಾಗ ಬಹಿರಂಗ ಮಾಡಲ್ಪಡದಿದ್ದ ಹಿಂದಿನ ಬೋಜಾಗಳಿಗೆ ಸದರಿ ಭೂಮಿಯು ಇನ್ನೂ ಒಳಪಟ್ಟಿದ್ದರೂ, ಮೇಲಿನಂತೆ ಮಾಡುವದರಿಂದ, ಅದನ್ನು ಒತ್ತೆಯಿಂದ ತಕ್ಕೊಂಡ ನಂತರ ಅದರ ಮೇಲೆ ಉಂಟಾದ ಬೋಜಾಗಳನ್ನು ವಹಿಸವೆ ನಮಗೆ ಸದರಿ ಭೂಮಿಯನ್ನು ಮಾರುವಕ್ಕೆ ಅಧಿಕಾರ ಬರುತ್ತದೆ. ಆ ನಂತರದಲ್ಲಿ ಒತ್ತೆತಕ್ಕೊಂಡ ಜನರನ್ನು ಸದರಿ ವ್ಯವಹರಣೆಗಳ ಪಕ್ಷಕಾರರನ್ನಾಗಿ ಮಾಡಬೇಕು (ಇ.ಲಾ.ರಿ., ೩೩ ಕಲ್ಕತ್ತ., ಭಾ. ೩: ಎಫ್. ೧೫೪೯–೧೦).

ಮೇಲಿನ ವಿಚಾರವು ಸರಿಯಾಗಿರುತ್ತದೆಂದು ರಿಮೆಂಬ್ರನ್ಸರ ಆಫ್ ಲೀಗಲ್ ಅಫೇಅರ್ಸ್‌ರವರು ಎಫ್. ೪೬೮೬, ತಾರೀಖು ೧೯ನೇ ಜುಲೈ ಸನ್ ೧೯೨೬ನೇ ಇಸವಿ, ಇದರಲ್ಲಿ ಬರೆದಿದ್ದಾರೆ.

ನೌಕರಿಯ ಸಲುವಾಗಿ ಆಗಿರುವಂಥಾದ್ದಲ್ಲದ ಇನಾಮು ಭೂಮಿಯು ತಾರಣ ವಿದ್ದಾಗ, ಸರಕಾರದವರು, ವಸೂಲ ಮಾಡುವ ಉಪಾಯವೆಂದು, ಮುಮಾಲೆಯನ್ನು ರದ್ದಮಾಡಬೇಕೆಂದು ಹಾಗೂ ಉಕಸಾನದ ಭಂಡಮಾಳದ ಬೆಳೆಯನ್ನು ತಗಾಯಿ

* ಭೂಮಿಯಲ್ಲಿ ಹಿಸ್ಸೆಯ ಬಗ್ಗೆ ಹಕ್ಕು ಹೇಳಿದ (ಆದರೆ ಈ ಹಿಸ್ಸೆಯು ಅವಳಿಗೆ ಕೊಡಲ್ಪಡಲಿಲ್ಲ) ಒಬ್ಬ ಮಲತಂಗಿಯು, ಸದರಿ ಭೂಮಿಯ ತಾಬೆಯುಳ್ಳ ಅವಳ ಮಲತಮ್ಮನು ಸಾಲ ತಕ್ಕೊಂಡು ಸದರಿ ಭೂಮಿಯನ್ನು ಸುಧಾರಿಸಿದ್ದಾಗ್ಯೂ, ಸದರಿ ಭೂಮಿಯ ಬಗ್ಗೆ ತೆಗೆದುಕೊಳ್ಳಲ್ಪಟ್ಟಿದ್ದ ತಗಾಯಿ ಸಾಲದ ಕಂತುಗಳನ್ನು ಕೊಡ ಲಿಕ್ಕೆ ಪಾತ್ರಳಿಲ್ಲೆಂದು ಠರಾಯಿಸಲಾಯಿತು. ಸದರಿ ಸಾಲದ ಬಗ್ಗೆ ಅರ್ಜಿ ಮಾಡ ಲ್ಪಡುವ ಪೂರ್ವದಲ್ಲಿ ಅವಳ ಹಕ್ಕು ಅಸ್ತಿತ್ವದಲ್ಲಿತ್ತು, ಆದರೆ ಅವಳು ಒಪ್ಪಿಗೆ ಕೊಟ್ಟಿ ದ್ದಿಲ್ಲ (ಎಫ್. ೩೦೬೩–೧೮).

† ಯಾರೂ ಲಿಲಾವಿನಲ್ಲಿ ಬೇಡದಿದ್ದರೆ, ಅದನ್ನು ಜಪ್ತ ಮಾಡುವದರಿಂದ ಅದು ಸರಕಾರದವರ ಆಸ್ತಿಯಾಗದಿರುವದರಿಂದ, ನಾವು ಅದನ್ನು ಸರಕಾರದವರ ಸಲುವಾಗಿ ಕೊಂಡುಕೊಳ್ಳಬೇಕು (ಆರ್. ೯೧೧೯–೧೦).

‡ ಯಾವದೇ ಮಾರಾಟ ಮಾಡಿದ ನಂತರ, ಕೊಂಡುಕೊಳ್ಳುವವನಿಗೆ ದಾಖಲೆ ಯನ್ನು ಕೊಡಬೇಕು ಹಾಗೂ ಅದರ ನಕಲನ್ನು ಸಬ್-ರಜಿಸ್ಟ್ರಾರನ ಕಡೆಗೆ ಕಳುಹಿಸಬೇಕು. ನೋಂದಣಿಯ ಆಕ್ಟಿನ ಕಲಮು ೮೯ (೪).

ಲೆಕ್ಕದಲ್ಲಿ ಜಮಾ ಹಿಡಿಯಬೇಕೆಂದು ಮಂಜೂರಿಯನ್ನು ಕೊಟ್ಟರು (ಆರ್. ೧೩೫೪೪–೧೫).

ಕ. ಸಾಲ ತಕ್ಕೊಳ್ಳುವವನು ಅಥವಾ ಅವನ ಜಾಮೀನದಾರನು ಯಾವದೇ ಭೂಮಿಯನ್ನು ಒತ್ತೆಹಾಕಿರದಿದ್ದರೂ ಕೂಡ, ಕೊಡದಿರುವ ಬಾಕಿಯನ್ನು, ಭೂಮಿಯ ಮಹಸೂಲಿನ ಬಾಕಿಯಂತೆ, ಅವರ ತಾಬೆಯಲ್ಲಿರಬಹುದಾದ ಯಾವದೇ ಸ್ಥಾವರ ಆಸ್ತಿಯೊಳಗಿಂದ ಅಥವಾ ಜಂಗಮ ಆಸ್ತಿಯೊಳಗಿಂದ ವಸೂಲ ಮಾಡಬಹುದು. ಆದರೆ ಹೀಗೆ ವಸೂಲ ಮಾಡುವಾಗ ಯಾವದನ್ನೂ ಜಪ್ತ ಮಾಡತಕ್ಕದ್ದಲ್ಲ ಹಾಗೂ ಇದ್ದ ಯಾವದೇ ಬೋಜಾವನ್ನು ತೆಗೆದುಹಾಕತಕ್ಕದ್ದಲ್ಲ.

ಡ. ಯಾವನೊಬ್ಬ ಸಾಲ ತಕ್ಕೊಳ್ಳುವವನ ಹಾಗೂ ಅವನ ಜಾಮೀನದಾರರ ಕಡೆಯಿಂದ ವೈಯಕ್ತಿಕವಾಗಿ ವಸೂಲ ಮಾಡುವ ಯಾವತ್ತು ಉಪಾಯಗಳು ಮುಗಿದ ನಂತರ, ಅವನ ಸಾಲದ ಬಗ್ಗೆ ಸಂಯುಕ್ತ ಬಾಂಡನ್ನು ತಕ್ಕೊಳ್ಳಲಾಗಿತ್ತೋ ಅಥವಾ ಇಲ್ಲವೋ ಎಂಬದನ್ನು ನಾವು ನೋಡಬೇಕು. ಹೀಗೆ ಬಾಂಡನ್ನು ತಕ್ಕೊಳ್ಳಲಾಗಿದ್ದರೆ, ಅವನ ಕಡೆಯಿಂದ ವಸೂಲ ಮಾಡುವ ಯಾವತ್ತು ಯತ್ನಗಳು ನಿಷ್ಫಲವಾದ ನಂತರ ಕೂಡ, ಅವನ ಸಹ-ಜಾಮೀನದಾರರ ಕಡೆಯಿಂದ ನಾವು ವಸೂಲ ಮಾಡಬಹುದು. ನಾವು ಅವನ ಸಾಲವನ್ನು ಅವರ ನಡುವೆ ಹಂಚಿಹಾಕಬಹುದು ಹಾಗೂ ಅವರ ಕಡೆಯಿಂದ ಸರಿಸಮಾನವಾದ ಭಾಗವನ್ನು ವಸೂಲ ಮಾಡಬಹುದು; ಆದರೆ ಅವರ ಪೈಕಿ ಯಾವತ್ತು ಜನರು ಸಾಲ ತೀರಿಸಲಿಕ್ಕೆ ಅಸಮರ್ಥರಿರಬಹುದು, ಅಥವಾ ಸಂಯುಕ್ತ ಬಾಂಡಿನನ್ವಯ ಪ್ರತ್ಯೇಕವಾಗಿ ತಾವು ಕೊಡಬೇಕಾದ ಭಾಗಕ್ಕಿಂತ ಹೆಚ್ಚಿಗೆ ಕೊಡಲಿಕ್ಕೆ ಅಸಮರ್ಥರಿರಬಹುದು. ಒಂದು ಸಂಯುಕ್ತ ಬಾಂಡಿನನ್ವಯ ಸಾಲ ತಕ್ಕೊಂಡ ೫೦ ಜನರ ಪೈಕಿ ಇಬ್ಬರು ದಿವಾಳಿ ತೆಗೆದರೆಂದು ತಿಳಿಯೋಣ ಮತ್ತು ಒಂದು ಪ್ರಸಂಗದಲ್ಲಿ "ಕ್ಷ" ರೂಪಾಯಿಗಳು ವಸೂಲಾಗದೆ ಬಾಕಿ ಉಳಿದವೆಂತಲೂ, ಎರಡನೇ ಪ್ರಸಂಗದಲ್ಲಿ "ಯ" ರೂಪಾಯಿಗಳು ವಸೂಲಾಗದೆ ಬಾಕಿ ಉಳಿದವೆಂತಲೂ ಗೃಹೀತ ಹಿಡಿಯೋಣ. ಆ ಮೇಲೆ ಚೌಕಶಿಯನ್ನು ಮಾಡಿದ ಬಳಿಕ, ಉಳಿದ ೪೮ ಸಾಲ ತಕ್ಕೊಂಡವರ ಪೈಕಿ ೨೭ ಜನರ ಹತ್ತಿರ ಮಾತ್ರ ಹೆಚ್ಚಿಗೆ ಆಸ್ತಿಯಿರುತ್ತದೆಂದು ಕಂಡುಬಂದಿತು. ಇಂಥ ಪ್ರಸಂಗದಲ್ಲಿ, ಸದರಿ ೨೭ ಜನರ ಪೈಕಿ ಪ್ರತಿಯೊಬ್ಬನ ಕಡೆಯಿಂದ ಮಾಗಣಿ ಮಾಡಬೇಕಾದ ರಕಮು $\frac{\text{ಕ್ಷ}+\text{ಯ}}{\text{೨೭}}$ ಆಗುವದು : ಆದರೆ ಉಳಿದ ಯಾವತ್ತು ರಕಮನ್ನು ಅವರ ಪೈಕಿ ಯಾವನೇ ಒಬ್ಬನ ಕಡೆಯಿಂದ ವಸೂಲ ಮಾಡಬಹುದು.

೨. ಸಂಯುಕ್ತ ಬಾಂಡಿನ ಲಾಭಗಳು ಪ್ರಸಿದ್ಧವಿರುತ್ತವೆ. (ಎಫ್. ೪೩೨೩–೦೮). ಎತ್ತುಗಳ, ಬೀಜದ ಅಥವಾ ಇತರ ಯಾವದೇ ಉದ್ದೇಶದ ಸಲುವಾಗಿ ಸಾಲ ಬೇಡುವ ಬಗ್ಗೆ ಮಾಡಲಾದ ಅರ್ಜಿಗಳ ಚೌಕಶಿ ಮಾಡುವದಕ್ಕೆ ಯಾವನೊಬ್ಬ ಮಾಮಲೇದಾರನು ಯಾವದೊಂದು ಗ್ರಾಮಕ್ಕೆ ಹೋದಾಗ, ಅವನಿಗೆ ಪ್ರತಿಯೊಬ್ಬ ಅರ್ಜದಾರನ ಪರಿಸ್ಥಿತಿಯು ಗೊತ್ತಿರುವದು ಶಕ್ಯವಿರುವದಿಲ್ಲ. ಯಾವನೊಬ್ಬ ಮನುಷ್ಯನು, ಕೆಲಸ ಮಾಡಲಿಕ್ಕೆ ಯೋಗ್ಯವಿರುವ ಒಂದು ಎತ್ತು ತನ್ನ ಹತ್ತಿರ ಇದ್ದರೂ, ಅಥವಾ ತನ್ನ ಎತ್ತನ್ನು ಸ್ವಲ್ಪ ಕಾಲದ ವರೆಗೆ ತನ್ನ ನೆಂಟನ ಕಡೆಗೆ ಕಳುಹಿಸಿ

ದ್ದರೂ, ಎರಡು ಎತ್ತುಗಳನ್ನು ಕೊಳ್ಳುವದರ ಸಲುವಾಗಿ ಸಾಲವನ್ನು ಬೇಡಬಹುದು. ತಾನು ಬಿತ್ತಲಿರುವ ಕ್ಷೇತ್ರಕ್ಕೆ ಬೇಕಾಗುವದಕ್ಕಿಂತ ಹೆಚ್ಚಿಗೆ ಬೀಜಗಳನ್ನು ಕೊಳ್ಳುವದರ ಸಲುವಾಗಿ ರಕಮನ್ನು ಬೇಡಬಹುದು. ಸದರಿ ಮನುಷ್ಯನಿಗೆ ಎರಡನೇ ಉದ್ಯೋಗಗಳಿಂದ ಲಾಭಗಳು ಅಥವಾ ಉಳಿತಾಯಗಳು ದೊರೆಯುತ್ತಿದ್ದು, ಅವನ ಬಾಬತಿನಲ್ಲಿ ಸಾಲವು ನಿಜವಾಗಿ ಅನಾವಶ್ಯಕವಿರುತ್ತದೆಂದು ಇತರ ಗ್ರಾಮಸ್ಥರಿಗೆ ಗೊತ್ತಿರಲಿಕ್ಕೆ ಸಾಕು. ಎಲ್ಲಿಯವರೆಗೆ ಪ್ರತಿಯೊಬ್ಬ ಗ್ರಾಮಸ್ಥನು ಪ್ರತ್ಯೇಕವಾಗಿ ಸಾಲದ ಬಗ್ಗೆ ಜವಾಬದಾರಿಯನ್ನು ವಹಿಸುತ್ತಾನೋ ಅಲ್ಲಿಯವರೆಗೆ ಇತರ ಗ್ರಾಮಸ್ಥರು ಸುಮ್ಮಗಿರುತ್ತಾರೆ; ಒಂದು ವೇಳೆ ಅವರು, ಮಾಮಲೇದಾರನ ಕಡೆಯಿಂದ ಶಕ್ಯವಿದ್ದಷ್ಟು ಹೆಚ್ಚಿನ ಹಣವನ್ನು ಎತ್ತಿಹಾಕುವ ಈ ಪ್ರಯತ್ನದಲ್ಲಿ ಸಹಾಯ ಮಾಡಲೂ ಬಹುದು. ಆದರೆ ಅವನ ಪೈಕಿ ಪ್ರತಿಯೊಬ್ಬನು, ಇತರ ಯಾವತ್ತು ಜನರ ಸಾಲಗಳ ಸಲುವಾಗಿ ಸಂಯುಕ್ತವಾಗಿ ಜವಾಬದಾರನಿರುತ್ತಾನೆಂದು ಅಥವಾ ಹೀಗೆ ಜವಾಬದಾರನಾಗಲಿಕ್ಕೆ ಅವನು ನಾಕಾರಿಸಿದರೆ, ಸದರಿ ಗ್ರಾಮದಲ್ಲಿ ಯಾವದೇ ರಕಮು ಸಾಲವಾಗಿ ಕೊಡಲ್ಪಡಲಿಕ್ಕಿಲ್ಲವೆಂದು ಅವರಿಗೆ ಹೇಳಿರಿ! ಹೀಗೆ ಹೇಳಿದಾಕ್ಷಣ ಪರಿಸ್ಥಿತಿಯಲ್ಲಿ ಸಂಪೂರ್ಣ ಬದಲಾವಣೆಯಾಗುತ್ತದೆ. ಸರತಿಯ ಪ್ರಕಾರ ಪ್ರತಿಯೊಬ್ಬ ಅರ್ಜದಾರನನ್ನು ಮುಂದೆ ತರಲಾಗುವದು, ಮತ್ತು ಅವನ ಮಾಗಣಿಯನ್ನು, ಅವನಿಗೆ ನಿಜವಾಗಿ ಸಾಕಾಗುವಷ್ಟು ರಕಮಿನವರೆಗೆ, ಕಡಿಮೆ ಮಾಡಲಾಗುವದು. ಮಿತವ್ಯಯಿಯಲ್ಲದ, ಕುಡುಕನಾದ ಹಾಗೂ ತಾನು ಮಾಡಿದ ಸಾಲಗಳನ್ನು ಎಂದಿಗೂ ತಿರುಗಿ ಕೊಡದ ಮನುಷ್ಯನು ಯಾವದೇ ಸಾಲಪಡೆಯಲಿಕ್ಕೆ ಅಯೋಗ್ಯನಿರುತ್ತಾನೆಂದು ತೋರಿಸಿಕೊಡಲಾಗುವದು, ಮತ್ತು ಉಳಿದವರೆಲ್ಲರು ಅವನ ಸಲುವಾಗಿ ಸಂಯುಕ್ತವಾಗಿ ಜವಾಬದಾರರಾಗಲಿಕ್ಕೆ ನಾಕಾರಿಸುವರು. ಮೇಲಾಗಿ, ಮಾಮಲೇದಾರನು ಸಾಲಕೊಟ್ಟು ಗ್ರಾಮವನ್ನು ಬಿಟ್ಟುಹೋಗುವಾಗ, ತಾನು ಸಾಲಕೊಟ್ಟ ೫೦ ಸಾಲಗಾರರ ಪೈಕಿ ಪ್ರತಿಯೊಬ್ಬನ ಮೇಲೆ ಕಾವಲಿಡುವದರ ಸಲುವಾಗಿ ೪೯ ಕಾವಲದ ನಾಯಿಗಳನ್ನು ಇಟ್ಟುಹೋದಂತಾಗುವದು. ಈ ಮೂಲಕ, ಅವಿಚಾರದಿಂದ ಹಾಗೂ ದುಂದುಗಾರಿಕೆಯಿಂದ ಸದರಿ ಹಣವು ಖರ್ಚಾಗುವ ಸಂಭವವಿರುವದಿಲ್ಲ. ಇದರ ನೈತಿಕ ಪರಿಣಾಮವು, ಯಾವತ್ತು ಗ್ರಾಮಸ್ಥರನ್ನು ಒಂದು ಅಮರ್ಯಾದಿತ ಸಹಕಾರೀ ಸಂಘದ ರೂಪದಿಂದ ಬದ್ಧರನ್ನಾಗಿ ಮಾಡಿಸಿದಂತಾಗುವದು (ಆರ್. ೪೫೫–೧ಳ ಇದರ ೬ನೇ ಪ್ಯಾರಾವನ್ನೂ, ಆರ್. ೫೬೪೩–೧೫ ಇದರ ೭ನೇ ಪ್ಯಾರಾವನ್ನೂ ನೋಡಿರಿ).

೩. ಸಕ್ತಿಯ ವಸೂಲಿಯ ಉಪಾಯಗಳನ್ನು ಕೈಕೊಳ್ಳುವ ಬಗ್ಗೆ ಹುಕುಮು ಪಡೆಯುವದು ಅವಶ್ಯವಾದಾಗೆಲ್ಲ, ಮಾಮಲೇದಾರನು ಇಡೀ ಪ್ರಕರಣವನ್ನು ಕಳುಹಿಸಿಕೊಡತಕ್ಕದ್ದು; ಯಾಕೆಂದರೆ, ಇದರಿಂದ, ಯಾವ ನಮೂನೆಯ ಬಾಂಡು ಅಥವಾ ಒತ್ತೆಯು ಅಥವಾ ಜಾಮೀನು ತಕ್ಕೊಳ್ಳಲಾಗಿತ್ತೆಂಬದನ್ನು ಹಾಗೂ ಅದರ ಬೆಲೆಯು ಎಷ್ಟು ಇತ್ತೆಂಬದನ್ನು ಕಂಡುಹಿಡಿಯಲಿಕ್ಕೆ ಬರುವದು.

### ತಗಾಯಿಯನ್ನು ಯಾವಾಗ್ಗೆ ವಸೂಲ ಮಾಡಬೇಕು.

೧. ಬಡ್ಡಿಯ ಸಹಿತವಾಗಿ ನಿಯಮಿತ ಕಂತುಗಳು ಆಕ್ಟಿನಿಂದ ಗೊತ್ತು ಮಾಡಲ್ಪಟ್ಟಿವೆ ಎಂಬದನ್ನು ಗೃಹೀತ ಹಿಡಿಯಲಾಗಿದೆ, ಮತ್ತು ಈ ಕಂತು

ಗಳನ್ನು * ಕೊಡಲಿಕ್ಕೆ ತಪ್ಪಿದ ಹೊರ್ತು ಅಥವಾ ಇತರ ಯಾವದೇ ಶರ್ತನ್ನು ಮುರಿದ ಹೊರ್ತು, ಇತರ ಯಾವದೇ ವಸೂಲಿಯನ್ನು ಮಾಡತಕ್ಕದ್ದಲ್ಲ. ಸರಕಾರದವರು ಸಂಕ್ಷಿಪ್ತವಾಗಿ ಕೆಲಸ ನಡಿಸಿ ವಸೂಲ ಮಾಡಲಿಕ್ಕೆ ಸಮರ್ಥರಾಗುವಂತೆ ಈ ಕೆಳಗಿನ ಶರ್ತುಗಳನ್ನು ಠರಾಯಿಸಿರುತ್ತದೆ, ಅಂದರೆ, ಹಿಂದೆ ಗೊತ್ತುಮಾಡಲ್ಪಟ್ಟ ಕಂತುಗಳನ್ನು ಲಕ್ಷ್ಯದಲ್ಲಿ ತಾರದೆ, ಆ ದಿನದ ವರೆಗೆ ಬಾಕಿ ಉಳಿದ ಅಸಲನ್ನು ಹಾಗೂ ಅದರ ಮೇಲಿ ಆ ದಿನದ ವರೆಗಿನ ಸರಳಬಡ್ಡಿಯನ್ನು ಒಂದೇ ಗಂಟಿನಿಂದ ಕೂಡಲೇ ವಸೂಲ ಮಾಡುವದು ಅಥವಾ ಅದರ ಭಾಗಗಳನ್ನು ವಸೂಲ ಮಾಡಲಿಕ್ಕೆ ಅವಶ್ಯವಿರುವಷ್ಟು ಪ್ರತ್ಯೇಕವಾದ ಪ್ರೊಸೆಸ್ಸುಗಳಿಂದ ವಸೂಲ ಮಾಡುವದು. ಯಾವದೊಂದು ಪ್ರೊಸೆಸ್ಸನ್ನು ಕೈಕೊಳ್ಳುವದು ವಿಹಿತವಿರುವದಿಲ್ಲವೆಂದು ಹಾಗೂ ಸದರಿ ಪ್ರೊಸೆಸ್ಸನ್ನು ಜಾರಿಯಲ್ಲಿ ಕೂಡಲೇ ತರುವದರಿಂದ ನಷ್ಟ ಉಂಟಾಗುವ ಸಂಭವವಿರುತ್ತದೆಂದು ವಸೂಲ ಮಾಡುವ ಅಮಲದಾರನಿಗೆ ಕಂಡುಬಂದರೆ, ಅವನು ಯಾವದೇ ಪ್ರೊಸೆಸ್ಸನ್ನು ಮುಂದೆ ಹಾಕುವದು ಅವನ ಮರ್ಜಿಯ ಮೇಲೆ ಅವಲಂಬಿಸಿರತಕ್ಕದ್ದೆಂಬದು ಸ್ವಾಭಾವಿಕವು. ಯಾವದೊಂದು ಸಾಲವು ಸಂಕ್ಷಿಪ್ತ ರೀತಿಯಿಂದ ಕೆಲಸ ನಡಿಸಿ ಒಂದೇ ಗಂಟಿನಿಂದ ವಸೂಲ ಮಾಡಲ್ಪಡಬೇಕೆಂಬ ಹುಕುಮಿಗೆ ಒಳಪಟ್ಟಾಗ, ನಾವು ಸದರಿ ಆಸ್ತಿಯನ್ನು ಕೂಡಲೇ ಮಾರಿ ಹಾಕುವ ಪಟ ಹಿಡಿದ ಪಕ್ಷಕ್ಕೆ, ಅದರ ಬೆಲೆಯು, ಸಾಲದ ಒಂದು ಸಣ್ಣ ಭಾಗದಷ್ಟಕ್ಕಿಂತ ಹೆಚ್ಚಿಗೆ ಬರಲಾರದೆಂತಲೂ ಇತರ ಯಾವವೇ ಉತ್ಪನ್ನದ ಮಾರ್ಗಗಳು ಇರುವದಿಲ್ಲವೆಂತಲೂ ಕೆಲವು ಸಾರೆ ನಮಗೆ ಕಂಡುಬರಬಹುದು. ಸಾಲಗಾರನಿಗೆ ಹಿಂದಿನ ಕಂತುಗಳಿಂದಲೇ ಅಥವಾ ಎರಡನೇ ಪ್ರಕಾರದ ಯಾವವಾದರೂ ಕಂತುಗಳಿಂದ ಸದರಿ ಸಾಲವನ್ನು ತೀರಿಸಲಿಕ್ಕೆ ಪರವಾನಗಿ ಕೊಟ್ಟರೆ, ಅವನು ಸ್ವಲ್ಪಸ್ವಲ್ಪಾಗಿ ತನ್ನ ಸಾಲವನ್ನು ಹಿಂತಿರಿಗಿ ಕೊಡಲಿಕ್ಕೆ ಸಮರ್ಥನಾಗುವನೆಂಬದಕ್ಕೇನೂ ಸಂದೇಹವಿಲ್ಲ. ಇಂಥ ಪ್ರಕರಣಗಳಲ್ಲಿ ವಸೂಲ ಮಾಡುವ ಅಮಲದಾರನು ಸಾಮಾನ್ಯವಾಗಿ ತನ್ನ ವಿವೇಕಬುದ್ಧಿಯ ಮೇರೆಗೆ ವರ್ತಿಸಬೇಕಾಗುವದು.

೨. ಸಂಕ್ಷಿಪ್ತ ರೀತಿಯಿಂದ ಕೆಲಸ ನಡಿಸಿ ವಸೂಲಿಯನ್ನು ಮಾಡಬಹುದಾದ ಕಾರಣಗಳೆಂದರೆ:—

(೧) ಸಾಲದ ಯಾವತ್ತು ರಕಮಿನ ಅಥವಾ ಅದರ ಭಾಗದ ದುರುಪಯೋಗ ಮಾಡುವದು (೧೩ನೇ ಕಾನೂನು).

* ಇದನ್ನು ಗೊತ್ತುಮಾಡುವ ವಿಧಾನವನ್ನು, ೧೦ರಿಂದ ೧೮ರ ವರೆಗಿನ ಪುಟಗಳಲ್ಲಿರುವ ಪ್ರಾಸ್ತಾವಿಕ ಟಿಪ್ಪಣೆಗಳ ೩ರಿಂದ ೧೧ರ ವರೆಗಿನ ಪ್ಯಾರಾಗಳಲ್ಲಿ ಹಾಗೂ ಅರ್ಜಿಯ ನಮೂನೆಯ ಕೆಳಗೆ ಕೊಟ್ಟ ಒಂದು ಕೋಷ್ಟಕದಲ್ಲಿ ಹೇಳಲಾಗಿದೆ; ಮತ್ತು ವಾರ್ಷಿಕ ಮಾಗಣಿಯನ್ನು, ತ. ನ. ೩ ಇದರಲ್ಲಿ ಹೇಳಲಾಗಿದೆ. ಕಂತುಗಳನ್ನು, ಸಾಮಾನ್ಯವಾಗಿ, ಭೂಮಿಯ ಮಹಸೂಲಿನ ಕಂತುಗಳನ್ನು ಕೊಡುವ ಕಾಲದಲ್ಲಿಯೇ ಕೊಡಬೇಕು; ಕಲೆಕ್ಟರನು ಬೇರೆ ತಾರೀಖುಗಳನ್ನು ನೇಮಿಸಬಹುದು, ಆದರೆ ಬಹಳ ತಡವಾದ ತಾರೀಖುಗಳನ್ನು ನೇಮಿಸಬಾರದು (ಎಫ್. ೧೩೨–೧೦).

(೨) ಯಾವ ಉದ್ದೇಶದ ಸಲುವಾಗಿ ಸಾಲವನ್ನು ಕೊಟ್ಟಿದೆಯೋ ಆ ಉದ್ದೇಶಕ್ಕಾಗಿ ಅದನ್ನು ಉಪಯೋಗಿಸುವದಕ್ಕೆ ವಿನಾಕಾರಣವಾಗಿ ವಿಳಂಬ ಮಾಡುವದು (೧೫ನೇ ಕಾನೂನನ್ನು ನೋಡಿರಿ).

(೩) ಒತ್ತೆಹಾಕಲ್ಪಟ್ಟ ಆಸ್ತಿಯನ್ನು ಆ ನಂತರ ತಬದಿಲು ಮಾಡಿಕೊಡುವದು ಅಥವಾ ಅದರ ಮೇಲೆ ಬೋಜಾ ಹಾಕುವದು (೧೮ನೇ ಕಾನೂನಿಗೆ ಒಳಪಟ್ಟು) (ಎಫ್. ೪೮೫೫–೦೭, ೨೨೪೩–೧೪).

(೪) ಬಹಿರಂಗ ಮಾಡಲ್ಪಡದಿದ್ದ ಹಿಂದಿನ ಬೋಜಾವು ಇರುತ್ತದೆಂದು ಕಂಡು ಬರುವದು (ಫೌಜದಾರೀ ಖಟ್ಲೆಯನ್ನು ಕೂಡಹಾಕಬಹುದು).

ಇವುಗಳ ಪೈಕಿ ಯಾವದೇ ಕಾರಣವು ಉಂಟಾದರೆ, ಚಾಲೂ ಕಂತು ಮಾತ್ರವಲ್ಲದೆ ಯಾವತ್ತು ಸಾಲವು ವಸೂಲ ಮಾಡಲ್ಪಡಲಿಕ್ಕೆ ಪಾತ್ರವಾಗುತ್ತದೆ. ಆದರೆ ರಿಮೆಂಬ್ರೆನ್ಸರ್ ಆಫ್ ಲೀಗಲ್ ಅಫೇರ್ಸರವರ ೧೯೦-ಎಮ್. ಇದರ ೫ನೇ ಪ್ಯಾರಾವನ್ನೂ, ಎಫ್. ೧೭೨೮–೧೧ ಇದರ ೯ನೇ ಪ್ಯಾರಾವನ್ನೂ ಓದಿರಿ.

(೪)ನೇ ಕಾರಣದ ಬಾಬತಿನಲ್ಲಿ, ಮಾರಾಟಮಾಡಲುಪಕ್ರಮಿಸುವದರಿಂದ ಯಾವದೇ ಉಪಯೋಗವಾಗಲಿಕ್ಕಿಲ್ಲ, ಯಾಕೆಂದರೆ, "ಸುಧಾರಿಸಲ್ಪಟ್ಟ ಭೂಮಿಯ" ಮೇಲಿನ ಬೋಜಾವಿದ್ದ ಹೊರ್ತು ಸದರಿ ಬೋಜಾವನ್ನು ರದ್ದ ಮಾಡಲಿಕ್ಕೆ ಬರಲಿಕ್ಕಿಲ್ಲ ಆದರೆ ಇಂಥ ಬೋಜಾದಿಂದ ನಮಗೆ ಯಾವದೇ ತ್ರಾಸವಾಗಲಿಕ್ಕಿಲ್ಲ, ಮತ್ತು ಇಂಥ ಪ್ರಸಂಗದಲ್ಲಿ ಸಂಕ್ಷಿಪ್ತ ರೀತಿಯಿಂದ ಕೆಲಸ ನಡಿಸಿ ವಸೂಲ ಮಾಡುವದು ಶಿಕ್ಷೆ ಮಾಡುವ ಉದ್ದೇಶದಿಂದ ಇದ್ದ ಹೊರ್ತು ಅಥವಾ ಇತರರಿಗೆ ಎಚ್ಚರಿಕೆಯನ್ನು ಕೊಡುವದರ ಸಲುವಾಗಿದ್ದ ಹೊರ್ತು, ಹಾಗೆ ಮಾಡುವದು ಲಾಭದಾಯಕವಾಗಲಾರದು.

೨-ಅ. ದೇಶೀ ಸಂಸ್ಥಾನಗಳ ಸೀಮೆಯ ಹತ್ತರ ವಾಸಿಸುವಂಥ ಭೂಮಿಯಿಲ್ಲದ ಜನರಿಗೆ ಕೆಲವು ಸಾರೆ ತಗಾಯಿ ಸಾಲವನ್ನು ಕೊಟ್ಟಿರುತ್ತದೆ. ಆದರೆ ಸದರಿ ಜನರು ಸೀಮೆಯ ಆಚೆಗೆ ಓಡಿಹೋಗುವವರಿದ್ದಾರೆಂದು ಅಥವಾ ಓಡಿಹೋಗುತ್ತಾರೆಂದು ಗೊತ್ತಾದಾಗ, ಅವರನ್ನು ದಸ್ತಗಿರು ಮಾಡುವ ಬಗ್ಗೆ ಅಥವಾ ಸಾಲವನ್ನು ಅವರ ಕಡೆಯಿಂದ ಪೂರ್ಣವಾಗಿ ವಸೂಲ ಮಾಡುವ ಬಗ್ಗೆ ಅಧಿಕಾರವಿರದಿದ್ದದರಿಂದ, ಅಡಚಣಿಯುಂಟಾಗುತ್ತದೆ.

೩. ಕಂತಿನ ತಾರೀಖನ್ನು ಬದಲಾಯಿಸುವದರ ಸಲುವಾಗಿಯೂ ಬಾಂಡುಗಳಲ್ಲಿ ತಜವೀಜಿರುತ್ತದೆ. ಕಂತಿನ ತಾರೀಖನ್ನು ಮುಂಚೆ ಹಾಕುವ ವಿಷಯದಲ್ಲಿ ಯಾವನೇ ಸಾಲ ತಕ್ಕೊಂಡವನು ತಕರಾರು ಮಾಡಲಿಕ್ಕಿಲ್ಲ, ಆದರೆ ಆ ತಾರೀಖನ್ನು ಗೊತ್ತು ಮಾಡಿದ ತಾರೀಖಿಗಿಂತ ಮುಂಚೆ ಹಾಕಿದರೆ, ಅವನು ತಕರಾರು ಮಾಡಬಹುದು. ಈ ಮೇರೆಗೆ, ಉತ್ತಮವಾಗಿ ಬೆಳೆಬಂದ ಯಾವದೊಂದು ವರ್ಷದಲ್ಲಿ ಕಂತಿನ ಎರಡುಪಟ್ಟಿಗೆ ಮೀರದ ಯಾವದೇ ಹೆಚ್ಚಿನ ಕಂತಿನ ಮಾಗಣಿ ಮಾಡಬಹುದೆಂದು ತಜವೀಜು ಮಾಡಿರುತ್ತದೆ. ಅಸಾಧಾರಣವಾಗಿ ಒಳ್ಳೇದಾದ ಅಥವಾ ಒಳ್ಳೇ ಬೆಲೆಯುಳ್ಳ ಬೆಳೆ ಬಂದಾಗ, ಸಾಲಗಾರನು ತನ್ನ ಸಾಲದ ಪೈಕಿ ಹೆಚ್ಚಿಗೆ ಭಾಗ

ವನ್ನು ಕೊಟ್ಟು ಬಡ್ಡಿಯನ್ನು ಉಳಿಸುವದು ಹಾಗೂ ತನ್ನ ಪತ್ರನ್ನು ಬೆಳಿಸುವದು ಸಾಲಗಾರನಿಗೆ ಲಾಭದಾಯಕವಿರುತ್ತದೆಂಬದು ಸ್ಪಷ್ಟವಿದೆ, ಮತ್ತು ಹಣ ಕೊಡು ವದು ಅವನಿಗೆ ಸಾಧ್ಯವಿದ್ದಾಗ ಅವನು ತಕರಾರು ಮಾಡುವದು ಮೂರ್ಖತನ ವಾಗುವದು. ಸರಕಾರದ ಅಮಲದಾರರು ಅನಾವಶ್ಯಕವಾಗಿ ತೊಂದರೆ ಕೊಡದೆ ಈ ತಜವೀಜನ್ನು ಅಮಲಿನಲ್ಲಿ ತರುವರೆಂದು ಸರಕಾರದವರಿಗೆ ಭರವಸೆಯದೆ.

೪. ನಾವು ಈ ವಿವರಣೆಗಳನ್ನು ಕೊಟ್ಟ ನಂತರ, ಮಂಜೂರ ಮಾಡಲಾದ ಹಾಗೂ ಎರಡೂ ಆಕ್ಟುಗಳನ್ನುಯದ ಯಾವತ್ತು ಬಾಬತುಗಳಿಗೆ ಲಾಗೂ ಆಗುವ ಬಾಂಡುಗಳ ಮೂರು ನಮೂನೆಗಳನ್ನು ಈಗ ಛಾಪಿಸುತ್ತೇವೆ. ಈ ಬಾಂಡುಗಳ ಮೂಲ ಮಜಕೂರಿನಲ್ಲಿ ಉಪಯೋಗಿಸಲ್ಪಟ್ಟ ಸಂಕೇತಾಕ್ಷರಗಳನ್ನು, ಜನರು ಬರೆದು ಕೊಡುವ ಪ್ರತ್ಯಕ್ಷ ಪ್ರಮಾಣಭೂತ ನಮೂನೆಗಳಲ್ಲಿ ಉಪಯೋಗಿಸಬಾರದು. ಈ ಪ್ರಮಾಣಭೂತ ನಮೂನೆಗಳು ಸರಕಾರದವರ ಛಾಪಖಾನೆಯಿಂದ ಪೂರೈಸಲ್ಪಡು ತ್ತವೆ. ಈ ಕೈಪಿಡಿಯೋಗಿನ ಸ್ಥಳವನ್ನು ಕಡಿಮೆ ಮಾಡುವವರ ಸಲುವಾಗಿ ಸಂಕೇ ತಾಕ್ಷರಗಳನ್ನು ಉಪಯೋಗಿಸಲಾಗಿದೆ: ಇದೇ ಉದ್ದೇಶದಿಂದ, ಮೊದಲಿನ ಬಾಂಡು ಗಳಲ್ಲಿ ಕಂಡುಬರುವ ರಕಮುಗಳನ್ನೂ ಪ್ಯಾರಾಗಳನ್ನೂ ಪೂರ್ಣವಾಗಿ ಅವತರಿ ಸಿರುವದಿಲ್ಲ.

೫. ಬಾಂಡನ್ನು ಬರಕೊಟ್ಟು ಹಣಕೊಟ್ಟ ಕೂಡಲೇ, ನೋಂದಣಿಯ ವಿಷಯದ ಆಕ್ಟಿನ ೮೯(೧)ನೇ ಹಾಗೂ (೨)ನೇ ಕಲಮಿನನ್ವಯ ಸಬ್-ರಜಿಸ್ಟ್ರಾರನ ಕಡೆಗೆ ಒಂದು ನಕಲನ್ನೂ,* ತಿಂಗಳ ಕೊನೆಗೆ ಗ್ರಾಮದ ಅಮಲದಾರರ ಕಡೆಗೆ ಇದರ ಉತಾರೆಯನ್ನೂ ಕಳಿಸಿಕೊಡತಕ್ಕದ್ದು; ಮತ್ತು ಹೀಗೆ ಮಾಡುವದರಿಂದ, ಎರಡೂ ಕಡೆಯಿಂದ ಆಸ್ತಿಯ ತಪಸಿಲಿಗಳನ್ನು ಮೋಸದಿಂದ ಅಥವಾ ಅನಿಯಮಿತವಾಗಿ ಮಾಡಲಿಕ್ಕೆ ಪ್ರತಿಬಂಧವಾಗುವದು. ಇವುಗಳನ್ನು ಕೂಡಲೇ ಕಳುಹಿಸುವದರ ಮಹತ್ವವನ್ನು ಆರ್. ೯೭೩–೭೮, ಇದರಲ್ಲಿ ಒತ್ತಿ ಹೇಳಲಾಗಿದೆ. ಅನೇಕ ಬಾಂಡು ಗಳನ್ನು ಮಾಡಿಕೊಡುವದಿದ್ದಾಗ, ಪ್ರತಿದಿವಸ ಎರಡು ಅಥವಾ ಮೂರು ಸೆಟ್ಟು ಗಳನ್ನು ಕಳುಹಿಸುವದರ ಬದಲಾಗಿ, ಪ್ರತಿ ಎರಡು ಅಥವಾ ಮೂರು ದಿವಸಗಳಿ ಗೊಮ್ಮೆ ಅವುಗಳ ಬ್ಯಾಚುಗಳನ್ನು ಅವುಗಳ ಯಾದಿಗಳೊಂದಿಗೆ ಕಳುಹಿಸ ಬಹುದು. ಹೀಗೆ ಕಳುಹಿಸಲಿಕ್ಕೆ ತಗಲಬಹುದಾದ ಅವಧಿಯು, ಆ ಸಂಬಂಧದ ಸೂಚನೆಯು ಸಬ್-ರಿಜಿಸ್ಟ್ರಾರನಿಗೆ ಮುಟ್ಟುವ ಮುಂಚೆ, ಅದೇ ಆಸ್ತಿಯನ್ನು ತಬದಿಲ ಮಾಡಿಕೊಡುವ ಸಂಬಂಧದ ಇತರ ದಸ್ತೈವಜುಗಳು ಮಾಡಿಕೊಡಲ್ಪಡುವದು, ನೋಂದಿಸಲ್ಪಡುವದು ಹಾಗೂ ಪಕ್ಷಕಾರರಿಗೆ ತಿರಿಗಿ ಕಳಿಸಲ್ಪಡುವದು ಸಾಧ್ಯವಾಗು ವಷ್ಟು ದೀರ್ಘವಿರಬಾರದು. ಗ್ರಾಮದ ಅಮಲದಾರರ ಬಾಬತಿನಲ್ಲಿ ಜರೂರಿಯು ಅಷ್ಟು ಹೆಚ್ಚಿರುವದಿಲ್ಲ, ಆದರೆ ತಿಂಗಳ ಕೊನೆಯ ದಿವಸಕ್ಕಿಂತ ಹೆಚ್ಚಿಗೆ ವಿಳಂಬ ಮಾಡತಕ್ಕದ್ದಲ್ಲ.

೬. ವರಿಷ್ಠ ಧಾರಣ ಮಾಡುವವನ ಸಮ್ಮತಿ ಪತ್ರವನ್ನು ಅಥವಾ ಭೂಮಿಗಳನ್ನು ಮಾರಲಿಕ್ಕೆ ಪರವಾನಗಿ ಕೊಡುವ ಇನಾಮುದಾರರ ಕರಾರುಗಳನ್ನು ಹಿಡಿದು, ಈ

---

* ಕಾರ್ಬನ್ ಪೇಪರದ ಮೂಲಕ ಶಕ್ಯವಿದ್ದಷ್ಟು ಹೆಚ್ಚಿಗೆ ನಕಲುಗಳನ್ನು ತೆಗೆಯುವದು ಸುಲಭವಾಗುವಂತೆ ಈ ನಮೂನೆಗಳನ್ನು ಛಾಪಿಸಬೇಕು.

ಯಾವತ್ತು ಬಾಂಡುಗಳಿಗೆ ಸ್ಟಾಂಪ ಡ್ಯೂಟಿಯು ಬೀಳಲಿಕ್ಕಿಲ್ಲ (ಹಿಂ. ಸ. ಜಾಹೀರ ನಾಮೆ ೭೮೫-ಎಸ್.ಆರ್.—೧೭—೨—೧೮೯೫, ಹಾಗೂ ೨೮೫೮-ಎಸ್.ಆರ್. ೪—೫—೧೯೦೪).

[ಟೀಪು.—ನಿಜವಾದ ಬಾಂಡುಗಳಲ್ಲಿ ಸಂಕೇತಾಕ್ಷರಗಳನ್ನುಪಯೋಗ ಮಾಡದಿರಲಿಕ್ಕೆ ಬರುತ್ತದೆ, ಮತ್ತು ಹೆಬ್ಬೊಟ್ಟಿನ ಗುರ್ತುಗಳ ಸಲುವಾಗಿರುವ ಸ್ಥಳವು ಯಾವಾಗಲೂ ಪುಟದ ದಂಡೆಗಿರಬೇಕು.]

## ನಮೂನೆ ೧.

ಅ ಬ ಸಾಕೀನ (ಇವನಿಗೆ ಇದರಲ್ಲಿ ಮುಂದೆ ಸದರಿ ಸಾಲ ತೆಗೆದು ಕೊಳ್ಳುವವನೆಂದು ಕರೆದಿದೆ) ಇವನು

ಭೂಮಿಯ ಸುಧಾರಣೆಯನ್ನು ಮಾಡುವ ಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟು.
———
ಹೊಲ ಮಾಡುವವರ ಸಾಲಗಳ ಆಕ್ಟು.

ಇದರನ್ವಯ ಸಾಲ ಕೊಡುವ ವಿಷಯದ ಹುಕುಮು.

ಭೂಮಿಯ ಸುಧಾರಣೆಯನ್ನು ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟು
———
ಹೊಲ ಮಾಡುವವರ ಸಾಲಗಳ ಆಕ್ಟು

ಇದರನ್ವಯ ಸಾಲ ಸಿಗುವ ಬಗ್ಗೆ ಅರ್ಜಿ ಮಾಡಿರುತ್ತಾನೆ.

೨. ಅ[ಮತ್ತು ಸದರಿ ಸಾಲ ತೆಗೆದುಕೊಳ್ಳುವವನಿಗೆ ಸದರಿ ಆಕ್ಟಿನನ್ವಯ ಮುಂಚೆ ಸಾಲವು ಕೊಡಲ್ಪಟ್ಟಿದೆ / ಸಾಲಗಳು ಕೊಡಲ್ಪಟ್ಟಿವೆ ಮತ್ತು ಸದರಿ ಮುಂಚಿನ ಸಾಲದ / ಸಾಲಗಳ ಸಂಬಂಧದಿಂದ ಸದರಿ ಸಾಲ ತೆಗೆದುಕೊಳ್ಳುವವನ ಮೇಲೆ ಈಗ ಬಾಕಿಯಾದ ರಕಮು ಕೆಳಗೆ ತಪಶೀಲವಾರ ರೀತಿಯಿಂದ ತೋರಿಸಿದಂತೆ ಇರುತ್ತದೆ, ಮತ್ತು ಸದರಿ ಸಾಲ ತೆಗೆದು ಕೊಳ್ಳುವವನು, ಸದರಿ ಮುಂಚಿನ ಮತ್ತು ಈಗಿನ, ಹೀಗೆ ಎರಡೂ ಸಾಲಗಳನ್ನು ಬಡ್ಡಿಯ ಸಹಿತ ಠರಾಯಿಸಿದ ಕಂತುಗಳಿಂದ ತೀರಿಸುತ್ತೇನೆಂದು ಕಬೂಲ ಮಾಡಿರುತ್ತಾನೆ] ಅ:

---

[ಅ—ಅ] ಮುಂಚಿನ ಸಾಲವು ಬಾಕಿ ಇಲ್ಲದಿದ್ದಾಗ್ಗೆ, ಈ ಮಜಕೂರಿಗೆ ಕಾಟು ಹಾಕಬೇಕು.

| ಬಾಕಿ ಉಳಿದ ಮುಂಚಿನ ಸಾಲದ (ಸಾಲಗಳ) ತಪಸೀಲು. | | | | | | ಶರಾ. |
|---|---|---|---|---|---|---|
| ತಾರೀಖು. | ರಕಮು. | ಅಸಲು. | ಬಡ್ಡಿಯ ದರವು. | ಬಡ್ಡಿ. | ಒಟ್ಟು. | |
| | | | ಒಟ್ಟು ಬಾಕಿಯು. | | | |

೩. ಆದಪರಿಂದ ಈ ಮುಚ್ಚಳಿಕೆಯ ಮೂಲಕ ದಾಖಲು ಮಾಡಲ್ಪಡುವದೇನಂದರೆ, ಸದರಿ ಸಾಲ ತೆಗೆದುಕೊಳ್ಳುವವನಿಗೆ [ಅ] ಕಾರಣದ ಬಗ್ಗೆ, ಬ [ಕ ದ] ಸಾಕೀನ ಇವರ ಸಮ್ಮತಿಯಿಂದ, ಈ ಸಮ್ಮತಿ ವಿಷಯದ ಲೇಖವು ಇದಕ್ಕೆ ಜೋಡಿಸಲ್ಪಟ್ಟಿದೆ] ಬ ಪ್ರತಿ ನೂರಕ್ಕೆ ವರ್ಷಕ್ಕೆ ರ ಸರಳಬಡ್ಡಿಯಿಂದ (೧೧ನೇ ಕಾನೂನು ನೋಡಿರಿ).

೪. ಕ [ಮತ್ತು ಕೆಳಗೆ ವರ್ಣನೆ ಮಾಡಿದ ಭೂಮಿಯ ಹಿತದ ಬಗ್ಗೆ] ಕ

| ಗ್ರಾಮ. | ಸರ್ವೇ ನಂಬರು. | ಕ್ಷೇತ್ರಫಲ. | ಶರಾ. |
|---|---|---|---|
| | | | |

ರೂಪಾಯಿಯು (ರೂ. ) ಸಾಲವು ಕೊಡಲ್ಪಟ್ಟಿದೆ.

---

[ಅ] ಇಲ್ಲಿ ಯೋಜಿಸಿದ ಸುಧಾರಣೆಯ / ಸಾಲದ ಉದ್ದೇಶದ ತಪಸೀಲವಾರ ವರ್ಣನೆಯನ್ನು ಬರೆಯಬೇಕು.

[ಬ—ಬ] ಸುಧಾರಣೆ ಮಾಡುವ ಹಕ್ಕು ಸಾಲ ತೆಗೆದುಕೊಳ್ಳುವವನಿದ್ದಾಗ ಅಥವಾ ಸಾಲವು ಹೊಲ ಮಾಡುವವರ ಸಾಲಗಳ ವಿಷಯದ ಆಕ್ಟಿನನ್ವಯ ತೆಗೆದುಕೊಳ್ಳಲ್ಪಟ್ಟಾಗ, ಈ ಮಜಕೂರಿಗೆ ಕಾಟು ಹಾಕಬೇಕು.

[ಕ—ಕ] ಹೊಲ ಮಾಡುವವರ ಸಾಲಗಳ ಆಕ್ಟಿನನ್ವಯ ಸಾಲವನ್ನು ಕೊಟ್ಟಾಗ, ಈ ಮಜಕೂರಿಗೆ ಕಾಟು ಹಾಕಬೇಕು.

೫. ಅದು ಬಡ್ಡಿಯ ಸಹಿತವಾಗಿ ಮತ್ತು ಈಗಿನ ಸಾಲವನ್ನು ಕೊಡುವ ಬಗ್ಗೆ ತಗಲಿದ ಖರ್ಚಿನ ಸಹಿತವಾಗಿ ಅ[ಸದರಿ ಮುಂಚಿನ ಸಾಲದ/ಸಾಲಗಳ ಪೈಕಿ ವಸೂಲಾಗದಿದ್ದ ಅಸಲು ಮತ್ತು ಅದರ ಬಡ್ಡಿ ಮತ್ತು ಖರ್ಚು ಇವುಗಳ ಸಹಿತವಾಗಿ]ಅ ಕೆಳಗೆ ನಿರ್ದಿಷ್ಟ ಮಾಡಿದ ರಕಮುಗಳ ಠರಾಯಿಸಿದ ಕಂತುಗಳಿಂದ ಮತ್ತು ಕೆಳಗೆ ನಿರ್ದಿಷ್ಟ ಮಾಡಿದ ತಾರೀಖುಗಳ ದಿವಸ ತಿರಿಗಿ ಕೊಡತಕ್ಕದ್ದಾಗಿದ್ದು, ಇಂಥ ಕಂತುಗಳನ್ನು, ಬರತಕ್ಕ ಎಲ್ಲ ಬಾಕಿಗಳು ಹಿಂತಿರಿಗಿ ಕೊಡಲ್ಪಡುವ ವರೆಗೆ, ಸರಕಾರದ ನಿರ್ಬಂಧಕ್ಕೆ ಒಳಪಟ್ಟು ಮುಲಕೀ ಅಧಿಕಾರಿಗಳಿಂದ ವೇಳೆವೇಳೆಗೆ ಠರಾಯಿಸಲ್ಪಡಬಹುದಾದ ಪ್ರಮಾಣದಿಂದ ಮತ್ತು ರಕಮುಗಳಿಂದ ಬಡ್ಡಿಯು ಮತ್ತು ಅಸಲಿನ ಖಾತೆಗೆ ಜಮಾ ಮಾಡಬೇಕು (ಆದರೆ ಸಾಲ ತೀರಿಸಲಿಕ್ಕೆ ವಿಳಂಬವಾದ ಕಾರಣದಿಂದ ಸದರಿ ಆಕ್ಟಿನನ್ವಯದ ಕಾನೂನುಗಳಿಗನುಸಾರವಾಗಿ ಇನ್ನೂ ಯಾವ ಸರಳಬಡ್ಡಿಯು ಅಥವಾ ಚಕ್ರಬಡ್ಡಿಯು ಹೊರಿಸಲ್ಪಡುವದೋ ಅದು ಸದರಿ ಠರಾಯಿಸಿದ ಕಂತುಗಳ ಹೊರ್ತು ಹೆಚ್ಚಾಗಿ ವಸೂಲ ಮಾಡಲ್ಪಡುವದು).

ಕಂತುಗಳ ತಪಶೀಲು.

| ಅನುಕ್ರಮ ನಂಬರು. | ತಾರೀಖು. | ರಕಮು. | ಶರಾ. |
|---|---|---|---|

೬. ಈ ಸಾಲವು ಸದರಿ ಆಕ್ಟಿನ ಮತ್ತು ಅದರನ್ವಯ ಆಯಾ ವೇಳೆಗೆ ಅಮಲಿನಲ್ಲಿದ್ದ ಕಾನೂನುಗಳ ಠರಾವುಗಳಿಗೆ ಮತ್ತು ಈ ಕೆಳಗಿನ ಶರ್ತುಗಳಿಗೆ ಒಳಪಡಿಸಿ ಕೊಡಲ್ಪಟ್ಟಿದೆ, ಅಂದರೆ:—

(೧) ಯಾವ ಕಾರಣದ ಬಗ್ಗೆ ಈ ಸಾಲವು ಕೊಡಲ್ಪಟ್ಟಿದೆಯೋ ಆ ಕಾರಣದ ಬಗ್ಗೆಯೇ ಅದನ್ನು ಉಪಯೋಗಿಸಬೇಕು.

(೨) ಯಾವ ಕೆಲಸದ/ಉದ್ದೇಶದ ಕಾರಣದ ಬಗ್ಗೆ ಈ ಸಾಲವು ಕೊಡಲ್ಪಟ್ಟಿದೆಯೋ ಆ ಕೆಲಸವು/ಉದ್ದೇಶವು ತಾರೀಖು ತಿಂಗಳು ಸನ್ ೧೯ ನೇ ಇಸವಿಯ ಮುಂಚೆ ಅಥವಾ ಸಾಲ ಮಂಜೂರ ಮಾಡುವ ಅಮಲದಾರನಿಂದ ಯಾವ ನಂತರದ

[ಅ—ಅ] ಮುಂಚಿನ ಸಾಲವು ಬಾಕಿ ಇಲ್ಲದಿದ್ದಾಗ್ಗೆ, ಈ ಮಜಕೂರಿಗೆ ಕಾಟು ಹಾಕಬೇಕು.

ತಾರೀಖಿನ ವರೆಗೆ ಸದರಿ ಮುದ್ದತು ಹೆಚ್ಚಿಸಲ್ಪಡುವದೋ ಆ ತಾರೀಖಿನ ಮುಂಚೆ ಮುಗಿಸಲ್ಪಡಬೇಕು.

ಕೊನೆಗಾಣಿಸಲ್ಪಡಬೇಕು.

(೩) ಸದರಿ ಸಾಲ ತೆಗೆದುಕೊಳ್ಳುವವನು ಅಥವಾ ಅವನ ವಾರಸದಾರರು, ಮೃತ್ಯುಪತ್ರ ನಡಿಸುವವರು ವಹಿವಾಟು ನಡಿಸುವವರು, ಅಥವಾ ಅಸೈನರು ಈ ಸಾಲದ ಬಗ್ಗೆ ತಾರಣವೆಂದು ಒತ್ತೆ ಇಟ್ಟ ಯಾವದಾದರೂ ಭೂಮಿಯನ್ನು ಒತ್ತೆಯ, ಮಾರಾಟದ, ದೇಣಿಗೆಯ ಅಥವಾ ವಿಭಾಗಣಿಯ ಮೂಲಕವಾಗಿ ಅಥವಾ ಇತರ ರೀತಿಯಿಂದ ತಬದಿಲು ಮಾಡಿಕೊಡಬಾರದು.

(೪) ಈ ಸಾಲದ ಬಗ್ಗೆ ಸದರಿ ಸಾಲ ತೆಗೆದುಕೊಳ್ಳುವವನು ತಾರಣವೆಂದು ಒತ್ತೆ ಇಟ್ಟ ಭೂಮಿಯ ಮೇಲೆ ಈಗ ಯಾವ ಬೋಜಾಗಳಿದ್ದಾವೋ ಅವುಗಳ / ಯಾವದಾದರೂ ಬೋಜಾಗಳಿಲ್ಲೆಂಬ ವಿಷಯದ ಪತ್ರಕವು (ಈ ಪತ್ರಕವು ಈ ಲೇಖದ ಮೇಲೆ ಬರೆದುಕೊಟ್ಟ ಒತ್ತೆ ಪತ್ರಕ್ಕೆ ಜೋಡಿಸಲ್ಪಟ್ಟಿದೆ) ನಿಜವಾದದ್ದೂ ಪೂರ್ಣವಾದದ್ದೂ ಇರುತ್ತದೆ.

(೫) ಈ (ಮತ್ತು ಮುಂಚಿನ) ಸಾಲದ (ಸಾಲಗಳ) ಯಾವದಾದರೂ ಕಂತು, ಆ ಸಂಬಂಧದಿಂದ ಇದರಲ್ಲಿ ಮೇಲೆ ಠರಾಯಿಸಿದ ತಾರೀಖಿಗಿಂತ ಮುಂಚಿನ ಯಾವ ತಾರೀಖನ್ನು ಯಾವದಾದರೂ ವರ್ಷದಲ್ಲಿ ಪ್ರಾಂತ ಅಫಿಸರನು, ಆ ವರ್ಷದ ಹೊಲದ ಸಂಬಂಧದ ಯಾವದಾದರೂ ವಿಶೇಷ ಸ್ಥಿತಿಯ ಕಡೆಗೆ ಲಕ್ಷ್ಯಗೊಟ್ಟು (ಈ ಸ್ಥಿತಿಯ ಸಂಬಂಧದಿಂದ ಅವನ ನಿಕಾಲೆಯು ಕೊನೆಯದಾಗಿರುವದು) ಠರಾಯಿಸುವನೋ ಆ ತಾರೀಖಿಗೆ ಕೊಡಲ್ಪಡಬೇಕು.

(೬) ಈ (ಮತ್ತು ಮುಂಚಿನ) ಸಾಲದ (ಸಾಲಗಳ) ಯಾವದಾದರೂ ಕಂತು, ಇದರಲ್ಲಿ ಮೇಲೆ ಠರಾಯಿಸಲ್ಪಟ್ಟ ರಕಮಿನ ಇಮ್ಮಡಿಗಿಂತ ಹೆಚ್ಚಿಲ್ಲದಂಥ ಯಾವ ರಕಮನ್ನು ಪ್ರಾಂತ ಅಫಿಸರನು ಯಾವದೊಂದು ವರ್ಷದಲ್ಲಿ, ಆ ವರ್ಷದ ಹೊಲದ ಸಂಬಂಧದ ಯಾವದಾದರೂ ವಿಶೇಷ ಸ್ಥಿತಿಯ ಕಡೆಗೆ ಲಕ್ಷ್ಯಗೊಟ್ಟು (ಈ ಸ್ಥಿತಿಯ ಸಂಬಂಧದಿಂದ ಅವನ ನಿಕಾಲೆಯು ಕೊನೆಯದಾಗಿರುವದು) ಠರಾಯಿಸುವನೋ ಆ ರಕಮಿನ ವರೆಗೆ ಹೆಚ್ಚಿಸಲ್ಪಡಬಹುದು.

೭. ಈ ಹುಕುಮಿನ ದಾಖಲೆಯುಳ್ಳ ಪ್ರತಿಯು ಇಲ್ಲಿಯ ಟ್ರೆಝರಿಯಲ್ಲಿ ಹಾಜರು ಮಾಡಲ್ಪಡಲಾಗಿ, ಈ ಸಾಲದ ರಕಮನ್ನು ಸದರಿ ಸಾಲ ತೆಗೆದುಕೊಳ್ಳುವವನಿಗೆ ಕೆಳಗೆ ನಿರ್ದಿಷ್ಟ ಮಾಡಿದ ಕಂತುಗಳಿಂದ ಕೊಡಬೇಕು :—

| ತಾರೀಖು | ರಕಮು |
|---|---|

೭ಅ.* ಈ ಸಾಲವು ಯಾವ ಉದ್ದೇಶಕ್ಕಾಗಿ ಕೊಡಲ್ಪಟ್ಟಿತ್ತೋ ಆ ಉದ್ದೇಶದ ಬಗ್ಗೆ ಸಾಲ ತೆಗೆದುಕೊಂಡವನ ಭೂಮಿಗಳಿಗೆ ಟ್ರಾಕ್ಟರದಿಂದ ರೆಂಟೆ ಹೊಡೆಯುವ ಕೆಲಸವನ್ನು ಬರ್ಮಾ ಶೆಲ್ ಕಂಪನಿಯವರು ಸಮಾಧಾನಕರವಾಗಿ ನೆರವೇರಿಸಿದ್ದಾರೆಂಬ ಬಗ್ಗೆ ಒಕ್ಕಲತನದ ಡೆಪ್ಯುಟಿ ಡೈರೆಕ್ಟರವರ ಕಡೆಯಿಂದ ದಾಖಲೆಯು ಬರಲಾಗಿ, ಸದರಿ ಕಂಪನಿಯವರು ಸದರಿ ಸಾಲ ತೆಗೆದುಕೊಂಡವನ ಭೂಮಿಗಳನ್ನು ಟ್ರಾಕ್ಟರದಿಂದ

---

* ಸದರಿ ಸಾಲವು, ಬರ್ಮಾ ಶೆಲ್ ಕಂಪನಿಯವರಿಂದ ಟ್ರಾಕ್ಟರದಿಂದ ರೆಂಟೆ ಹೊಡೆಯುವದರ ಸಲುವಾಗಿರದಿದ್ದರೆ, ಇದಕ್ಕೆ ಕಾಟು ಹಾಕಬೇಕು.

ರಿಂಟಿ ಹೊಡೆದದ್ದರ ವಿಷಯದ ಬಿಲ್ಲುಗಳ ಹಣವನ್ನು ತನಗೆ ಸಂದಿಸುವದಕ್ಕಾಗಿ, ಈ ಸಾಲದ ರಕಮನ್ನು ಸದರಿ ಸಾಲ ತೆಗೆದುಕೊಂಡವನ ಪರಿಯಿಂದ ರಜಿಸ್ಟ್ರರನು ಸದರಿ ಕಂಪನಿಯವರಿಗೆ ಕೊಡಬೇಕು. ಇನ್ಸ್ಪೆಕ್ಷನ ಡೆಪ್ಯುಟಿ ರಜಿಸ್ಟ್ರರ ದಾಖಲೆಯು, ಸದರಿ ದಾಖಲೆಯಲ್ಲಿ ಹೇಳಿದ ಸಂಗತಿಗಳ ಬಗ್ಗೆ ನಿರ್ಣಾಯಕ ಪ್ರಮಾಣವೆಯಾಗಿರ ತಕ್ಕದ್ದು. ಸದರಿ ಕಂಪನಿಯವರಿಗೆ ಹೀಗೆ ರಜಿಸ್ಟ್ರರನಿಂದ ಕೊಡಲ್ಪಟ್ಟ ಯಾವದೇ ರಕಮು ಕೊಡಲ್ಪಟ್ಟಿತೆಂದು ತಿಳಿಯತಕ್ಕದ್ದು, ಮತ್ತು ಸದರಿ ಸಾಲ ತೆಗೆದುಕೊಂಡವನಿಗೆ ರಕಮನ್ನು ಕೊಟ್ಟಿದ್ದರೆ ಹ್ಯಾಗೋ ಹಾಗೆಯೇ ಅದರ ಪರಿಣಾಮವು ಯಾವತ್ತು ಸಂದರ್ಭ ಗಳಲ್ಲಿ ಆಗತಕ್ಕದ್ದು, ಮತ್ತು ಹೀಗೆ ರಕಮನ್ನು ಕೊಟ್ಟ ಬಳಿಕ ರಜಿಸ್ಟ್ರರನು ಕಾಯದೇಶೀರ ವಾಗಿ ಈ ವಿಷಯದಿಂದ ಮುಕ್ತನಾಗತಕ್ಕದ್ದು (ಆರ್. [illegible]ನೇ ಡಿಸೆಂಬರ ಸನ್ ೧೯೩೧ನೇ ಇಸವಿ).

೮. ಸಾಲ ತೆಗೆದುಕೊಳ್ಳುವವನು ಈ ಮೇಲಿನ ಶರ್ತುಗಳ ಪೈಕಿ ಯಾವದೇ ಶರ್ತನ್ನು ಯೋಗ್ಯವಾಗಿ ಪಾಲಿಸಲಿಕ್ಕೆ ತಪ್ಪಿದ್ದರೆ, ಅಥವಾ ಬರತಕ್ಕ ಯಾವದೇ ಕಂತು ಅದನ್ನು ಕೊಡುವ ಬಗ್ಗೆ ಠರಾಯಿಸಿದ ತಾರೀಖಿನಿಂದ ಒಂದು ತಿಂಗಳೊಳಗೆ ಕೊಡ ಲ್ಪಡದಿದ್ದರೆ, ಹಿಂತಿರಿಗಿ ಕೊಡುವದರ ಸಲುವಾಗಿ ಗೊತ್ತುಮಾಡಿದ ಅವಧಿಯು ಮುಗಿ ದಿರದಿದ್ದಾಗ್ಯೂ, ಆ ಕಾಲಕ್ಕೆ ಅವನ ಕಡೆಯಿಂದ ಬರತಕ್ಕ ಬಾಕಿಗಿಂತ ಯಾವತ್ತು ರಕಮುಗಳನ್ನು ಕೂಡಲೆ ವಸೂಲ ಮಾಡಬಹುದು.

ಈ ಹೊತ್ತು ತಾರೀಖು ನೇ ಸನ್ ೧೯

(ಸ್ವಾ. ಅಮಲದಾರನು ಸಾಲ ಮಂಜೂರ ಮಾಡುವವ ನಿದ್ದರೆ, ಸಾಲ ಮಂಜೂರ ಮಾಡುವ ಅಮಲ ದಾರನ ಅಥವಾ ಮಾಮಲೇದಾರನ ಸಹಿ.)

೮ಅ. ಸಾಲ ತೆಗೆದುಕೊಳ್ಳುವವನಿಂದ ಬರತಕ್ಕ ಯಾವದೇ ಕಂತು, ಅದನ್ನು ಕೊಡುವ ಬಗ್ಗೆ ಠರಾಯಿಸಿದ ತಾರೀಖಿನಿಂದ ಒಂದು ತಿಂಗಳೊಳಗೆ ಕೊಡಲ್ಪಡದಿದ್ದರೆ, ಸಾಲ ಮಂಜೂರ ಮಾಡುವವನು, ೮ನೇ ಶರ್ತಿನ ಪ್ರಕಾರ ಕೆಲಸ ನಡಿಸುವದರ ಬದಲಾಗಿ, ಸದರಿ ಕಂತಿನ ರಕಮು ಅದರ ಮೇಲಿನ ಬಡ್ಡಿಯು ಸಹಿತವಾಗಿ ಕೊಡಲ್ಪ ಡುವ ವರೆಗೆ, ಸದರಿ ಕಂತನ್ನು ಕೊಡಲಿಕ್ಕೆ ತಪ್ಪಿದ ತಾರೀಖಿನಿಂದ, ಸಾಲವನ್ನು ಮಂಜೂರ ಮಾಡುವ ಹುಕುಮಿನಲ್ಲಿ ಠರಾಯಿಸಿದ ಬಡ್ಡಿಯ ದರಕ್ಕೆ ಸರಿಯಾದ ದರದ ಪ್ರಕಾರ ಸದರಿ ಕಂತಿನ ಮೇಲೆ, ಚಕ್ರಬಡ್ಡಿ ಮತ್ತು ನೋಟೀಸು ಖರ್ಚು ವಗೈರೆ ಇವುಗಳ ಸಹಿತವಾಗಿ, ಕೊಡಲ್ಪಡದಿದ್ದ ಕಂತನ್ನು ವಸೂಲ ಮಾಡಬಹುದು (ಆರ್. ೯೩೨೮/೨೮, ತಾರೀಖು ೭ನೇ ಮಾರ್ಚ ೧೯೩೫).

೯. ಅ ಅ ಬ ಇವನಿಗೆ ಈ ಸಾಲವನ್ನು ಕೊಡುವದಕ್ಕೆ ಮತ್ತು ಇದರಲ್ಲಿ ಮೇಲೆ ನಿರ್ದಿಷ್ಟ ಮಾಡಿದ ಭೂಮಿಯ ಸಂಬಂಧದಿಂದ ಇದರಲ್ಲಿ ಮೇಲೆ

---

ಅ—ಅ ಸುಧಾರಣೆ ಮಾಡುವ ಹಕ್ಕು ಸಾಲ ತೆಗೆದುಕೊಳ್ಳುವವನಿದ್ದಾಗ, ಅಥವಾ ಸಾಲವು ಹೊಲ ಮಾಡುವವರ ಸಾಲಗಳ ವಿಷಯದ ಆಕ್ಟಿನನ್ವಯ ತೆಗೆದು ಕೊಳ್ಳಲ್ಪಟ್ಟಾಗ, ಈ ಮಜಕೂರಿಗೆ ಕಾಟು ಹಾಕಬೇಕು.

ಮತ್ತು ಅದರ/ಅವುಗಳ ನಮೊಬದಲಿಯಾಗಿ, ಮತ್ತು ಅದನ್ನು/ಅವುಗಳನ್ನು ಯೋಗ್ಯರೀತಿಯಿಂದ ಹಿಂತಿರುಗಿ ಕೊಡುವ ಸಂಬಂಧದ ಕಾರಣವೆಂದು, ನಾನು ಕೆಳಗೆ ನಿರ್ದಿಷ್ಟ ಮಾಡಿದ ಭೂಮಿಗಳನ್ನು ಷ[ಇವುಗಳ ಮೇಲೆ ಯಾವನಾದರೂ ಭಾರಗಳಿಲ್ಲ ಮತ್ತು ಇವುಗಳ ಮೇಲೆ ನನಗೆ ಪೂರ್ಣ ಹಕ್ಕಿರುತ್ತದೆ] ಷ ಸೆ. ಸ್ಟೇ. ರವರಿಗೆ ಇದರ ಮೂಲಕ ಒತ್ತೆಗೆ ಕೊಡುತ್ತೇನೆ.

| ಗ್ರಾಮ. | ಸರ್ವೇ ನಂಬರು. | ಕ್ಷೇತ್ರಫಲ. | ಶರಾ. |
|---|---|---|---|

೧೩. ಮತ್ತು ಸದರಿ ಹಣದ ಯಾವದಾದರೂ ಭಾಗವನ್ನು ಕೊಡುವ ಬಗ್ಗೆ ಮೇಲಿನ ಲೇಖೀ ಹುಕುಮಿನಲ್ಲಿ ಅಥವಾ ಆ ಹುಕುಮಿನನ್ವಯ ಠರಾಯಿಸಿದ ಯಾವದೇ ತಾರೀಖಿನ ದಿನ ಆ ಭಾಗವನ್ನು ಕೊಡಲಿಕ್ಕೆ ನಾನು ತಪ್ಪಿದರೆ, ಸೆ. ಸ್ಟೇ. ರವರು ಸದರಿ ಭೂಮಿಗಳನ್ನು ಮಾರಿಸಲಿಕ್ಕೆ ಮತ್ತು ಸದರಿ ಮಾರಾಟದ ಉತ್ಪನ್ನವನ್ನು ಮಾರಾಟದ ಸಮಯದಲ್ಲಿ ಬಾಕಿ ಇದ್ದ ಇಡೀ ರಕಮನ್ನು ತುಂಬಿಸಿಕೊಡುವದರಲ್ಲಿ ಉಪಯೋಗಿಸಲಿಕ್ಕೆ ಮುಖ್ತಿಯಾರರಿರುತ್ತಾರೆಂದು ನಾನು ಇದರ ಮೂಲಕವಾಗಿ ಕಬೂಲ ಮಾಡುತ್ತೇನೆ.

೧೪. ಮತ್ತು ನಾನು ಇನ್ನೂ ಕಬೂಲ ಮಾಡುವದೇನಂದರೆ, ಸದರಿ ಭೂಮಿಗಳನ್ನು, ಈ ಕೆಳಗಿನ ಯಾವದಾದರೂ ಬಾಬತಿನಲ್ಲಿ, ಸನ್ ೧೮೮೨ನೇ ಇಸವಿಯ ಆಸ್ತಿಯನ್ನು ತಬದಿಲು ಮಾಡಿಕೊಡುವ ವಿಷಯದ ಆಕ್ಟಿನ ೬೯ನೇ ಕಲಮಿನನ್ವಯ ಕೋರ್ಟಿನ ಮುಖಾಂತರವಲ್ಲದೆ ಮಾರಿಸಲಿಕ್ಕೆ ಸೆ. ಸ್ಟೇ. ರವರಿಗೆ ಅಧಿಕಾರವದೆ, ಅಂದರೆ:—

(ಅ) ಸದರಿ ಹಣವು ಅಥವಾ ಅದರ ಯಾವದಾದರೂ ಭಾಗವು ಸಲ್ಲತಕ್ಕದಾಗಿದ್ದು ಮತ್ತು ಅದನ್ನು ಕೊಡಬೇಕೆಂಬ ವಿಷಯದ ಲೇಖೀ ನೋಟೀಸು ನನ್ನ ಮೇಲೆ ಬಜಾಯಿಸಲ್ಪಟ್ಟಿದ್ದು, ನಾನು ಆ ನೋಟೀಸು ಬಜಾಯಿಸಲ್ಪಟ್ಟ ನಂತರ ೩ ತಿಂಗಳ ವರೆಗೆ ಸದರಿ ರಕಮನ್ನು ಕೊಡದಿದ್ದಾಗ, ಅಥವಾ

[ಷ—ಷ] ಸಾಲ ತೆಗೆದುಕೊಳ್ಳುವವನು ಅಥವಾ ಒತ್ತೆ ಹಾಕಿದವನು ಪೂರ್ಣ ಮಾಲಿಕನಲ್ಲದಿದ್ದಾಗ, ಅಥವಾ ಆಸ್ತಿಯ ಮೇಲೆ ಮುಂಚಿನ ಬೋಜಾಗಳು ಇದ್ದಾಗ, ಕಂಸದೊಳಗಿನ ಶಬ್ದಗಳ ಬದಲಾಗಿ, ಅವನ ಹಿತಸಂಬಂಧದ ಪ್ರಕಾರವನ್ನು ಅಥವಾ ಇಂಥ ಬೋಜಾಗಳ ತಪಶೀಲನ್ನು ದಾಖಲು ಮಾಡಬೇಕು.

(ಬ) ಸದರಿ ಹುಕುಮಿನಲ್ಲಿ ಹೇಳಿದ ಸಾಲದ / ಸಾಲಗಳ ಮೇಲಿನ ಬಡ್ಡಿಯ ಪೈಕಿ ಐನೂರು ರೂಪಾಯಿಗಿಂತ (ರೂ. ೫೦೦) ಕಡಿಮೆಯಲ್ಲದಷ್ಟು ರಕಮು ಬಾಕಿ ಇದ್ದು, ಅದು ಸಲ್ಲತಕ್ಕದ್ದಾದ ನಂತರ ೩ ತಿಂಗಳ ವರೆಗೆ ಕೊಡಲ್ಪಡದಿದ್ದಾಗ.

ಈ ಹೊತ್ತು ತಾರೀಖು ನೇ ಸನ್ ೧೯ ನೇ ಇಸವಿ.

______________________

(ಸಾಲ ತೆಗೆದುಕೊಳ್ಳುವವನ ಸಹಿ.)




______________________

______________________

(ಇಬ್ಬರು ಸಾಕ್ಷಿದಾರರ ಸಹಿಗಳು.)

* * * *

೧೫. ಮೇಲೆ ಹೇಳಿದ ______________ ಇವನಿ ಸಾಲವಾಗಿ ಕೊಟ್ಟ ಮತ್ತು ಮೇಲಿ ಲೇಖೀ ಹುಕುಮಿನಲ್ಲಿ ಹೇಳಿದ ಹಣ ಮೊಬದಲೆಯಾಗಿ ಮತ್ತು ಆ ಹಣ ಯೋಗ್ಯರೀತಿಯಿಂದ ಹಿಂತಿರಿಗಿ ಕೊ ಲ್ಪಡುವ ಸಂಬಂಧದ ತಾರಣವೆಂದು ನಾನು ಕೆಳಗೆ ನಿರ್ದಿಷ್ಟ ಮಾಡಲ್ಪಟ್ಟ ಭೂಮಿಗಳನ್ನು ಕ್ಷ[ಇವುಗಳ ಮೇ ಯಾವವಾದರೂ ಬೋಜಾಗಳಿಲ್ಲ ಮತ್ತು ಇವುಗಳ ಮೇಲೆ ನನಗೆ ಪೂರ್ಣ ಹಕ್ಕಿರುತ್ತದೆ]ಕ್ಷ ಸೆ. ಸ್ಟೇ. ರಿಗೆ ಇವರ ಮೂಲ ಒತ್ತೆಗೆ ಕೊಡುತ್ತೇನೆ.

ತಾರಣವೆಂದು ಕೊಡಲೊಪ್ಪಿದ ಭೂಮಿಯನ್ನು ಒತ್ತೆಯಾಗಿ ಬರೆದು ಕೊಡೋಣ.

ಒತ್ತೆ ಇಡುವವನು ಸಾಲ ತೆಗೆದು ಕೊಳ್ಳುವವನಿರದೆ ಬೇರೊಬ್ಬ ಮನುಷ್ಯನಾಗಿರುತ್ತಾನೆ.

೧೬. ಮತ್ತು ಸದರಿ ಹಣದ ಯಾವದಾದರೂ ಭಾಗವನ್ನು ಕೊಡುವ ಬಗ್ಗೆ ಮೇಲಿನ ಲೇಖೀ ಹುಕುಮಿನಲ್ಲಿ ಅಥವಾ ಆ ಹುಕುಮಿನನ್ವಯ ಠರಾಯಿಸಿ

[ಕ್ಷ—ಕ್ಷ] ಸಾಲ ತೆಗೆದುಕೊಳ್ಳುವವನು ಅಥವಾ ಒತ್ತೆ ಹಾಕಿದವನು ಪೂರ್ಣ ಮಾಲಕನಲ್ಲದಿದ್ದಾಗ ಅಥವಾ ಆಸ್ತಿಯ ಮೇಲೆ ಮುಂಚಿನ ಬೋಜಾಗಳು ಇದ್ದಾಗ ಕಂಸದೊಳಗಿನ ಶಬ್ದಗಳ ಬದಲಾಗಿ, ಅವನ ಹಿತಸಂಬಂಧದ ಪ್ರಕಾರವನ್ನು ಅಥವಾ ಇಂಥ ಬೋಜಾಗಳ ತಪಶೀಲನ್ನು ದಾಖಲು ಮಾಡಬೇಕು.

ತಾರೀಖಿನ ದಿನ ಆ ಭಾಗವನ್ನು ಸದರಿ ಇವನು ಕೊಡದಿದ್ದರೆ, ಆ ಪ್ರಕಾರ ಕೊಡದಿದ್ದ ರಕಮನ್ನು ಸೆಕ್ರೆಟರಿ ಆಫ್ ಸ್ಟೇಟರವರಿಗೆ ಕೊಡಲಿಕ್ಕೆ ನಾನು ಇದರ ಮೇಲಿಂದ ಕಬೂಲಿ ಮಾಡುತ್ತೇನೆ, ಮತ್ತು ಅದಲ್ಲದೆ, ಇಂಥ ಯಾವದಾದರೂ ರಕಮು ನನ್ನಿಂದ ಕೊಡಲ್ಪಡದಿದ್ದರೆ, ಸೆಕ್ರೆಟರಿ ಆಫ್ ಸ್ಟೇಟರವರು ಸದರಿ ಭೂಮಿಗಳನ್ನು ಮಾರಿಸಲಿಕ್ಕೆ ಮತ್ತು ಆ ಪ್ರಕಾರ ಕೊಡಲ್ಪಡದಿದ್ದ ರಕಮನ್ನು ತುಂಬಿಸಿ ಕೊಡುವಲ್ಲಿ ಸದರಿ ಮಾರಾಟದ ಉತ್ಪನ್ನವನ್ನು ಉಪಯೋಗಿಸಲಿಕ್ಕೆ ಮುಖ್ತಿಯಾರರಿರುತ್ತಾರೆಂದು ನಾನು ಇದರ ಮೂಲಕವಾಗಿ ಕಬೂಲ ಮಾಡುತ್ತೇನೆ.

೧೭. ಮತ್ತು ನಾನು ಇನ್ನೂ ಕಬೂಲ ಮಾಡುವದೇನಂದರೆ, ಸದರಿ ಭೂಮಿಗಳನ್ನು, ಈ ಕೆಳಗಿನ ಯಾವದಾದರೂ ಬಾಬತಿನಲ್ಲಿ, ಸನ್ ೧೮೮೩ನೇ ಇಸವಿಯ ಆಸ್ತಿಯನ್ನು ತಬದಿಲು ಮಾಡಿಕೊಡುವ ವಿಷಯದ ಆಕ್ಟಿನ ೬೯ನೇ ಕಲಮಿನನ್ವಯ ಕೋರ್ಟಿನ ಮುಖಾಂತರವಲ್ಲದೆ ಮಾರಿಸಲಿಕ್ಕೆ ಸ. ಸ್ಟೇ. ರವರಿಗೆ ಅಧಿಕಾರವದೆ, ಅಂದರೆ :—

(ಅ) ಸದರಿ ಹಣವು ಅಥವಾ ಅದರ ಯಾವದಾದರೂ ಭಾಗವು ಸಲ್ಲತಕ್ಕದ್ದಾಗಿದ್ದು ಮತ್ತು ಅದನ್ನು ಕೊಡಬೇಕೆಂಬ ವಿಷಯದ ಲೇಖೀ ನೋಟೀಸು ನನ್ನ ಮೇಲೆ ಬಜಾಯಿಸಲ್ಪಟ್ಟಿದ್ದು, ನಾನು ಆ ನೋಟೀಸು ಬಜಾಯಿಸಲ್ಪಟ್ಟ ನಂತರ ೩ ತಿಂಗಳ ವರೆಗೆ ಸದರಿ ರಕಮನ್ನು ಕೊಡದಿದ್ದಾಗ, ಅಥವಾ

(ಬ) ಸದರಿ ಹುಕುಮಿನಲ್ಲಿ ಸೂಚಿಸಿದ ಸಾಲದ / ಸಾಲಗಳ ಮೇಲಿನ ಬಡ್ಡಿಯ ಪೈಕಿ ಐನೂರು ರೂಪಾಯಿಗಿಂತ (ರೂ. ೫೦೦) ಕಡಿಮೆಯಲ್ಲದಷ್ಟು ರಕಮು ಬಾಕಿ ಇದ್ದು, ಅದು ಸಲ್ಲತಕ್ಕದ್ದಾದ ನಂತರ ೩ ತಿಂಗಳ ವರೆಗೆ ಕೊಡಲ್ಪಡದಿದ್ದಾಗ.

ಈ ಹೊತ್ತು ತಾರೀಖು ನೇ ಸನ್ ೧೯ ನೇ ಇಸವಿ.

(ಒತ್ತೆ ಇಡುವವನ ಸಹಿ.)




(ಇಬ್ಬರು ಸಾಕ್ಷಿದಾರರ ಸಹಿಗಳು.)

## ನಮೂನೆ ೨.

(ಆಸ್ಸನ—ಇದರ ಜೊತೆಗಿರುವ 'ಅ' ಪರಿಶಿಷ್ಟದೊಳಗಿನ ಆಸನ).

೨ನೇ ಆಸನದಲ್ಲಿ ಸಾಲ ತೆಗೆದುಕೊಳ್ಳುವವರೆಂದು ನಮೂದ ಮಾಡಲ್ಪಟ್ಟ ಮನುಷ್ಯರು (ಇವರಿಗೆ ಇದರಲ್ಲಿ ಮುಂದೆ ಸದರಿ ಸಾಲ ತೆಗೆದುಕೊಳ್ಳುವವರೆಂದು ಕರೆದಿದೆ) ಸಾಕೀನ , ತಾಲೂಕು , ಜಿಲ್ಲಾ ಇಲ್ಲಿಯುವವರಾಗಿದ್ದು, ಅವರು ಭೂಮಿಯ / ಹೊಲ ಸುಧಾರಣೆಯನ್ನು ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯುದ ಆಕ್ಟು / ಮಾಡುವವರ ಸಾಲಗಳ ಆಕ್ಟು ಇದರನ್ವಯ ಸಾಲ ಸಿಗುವ ಬಗ್ಗೆ ಅರ್ಜಿ ಮಾಡಿರುತ್ತಾರೆ.

(ಭೂಮಿಯು ಸುಧಾರಣೆಯನ್ನು ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯುದ ಆಕ್ಟು. / ಹೊಲ ಮಾಡುವವರ ಸಾಲಗಳ ಆಕ್ಟು ಇದರನ್ವಯ ಒಟ್ಟಾಗಿ ಸಾಲವನ್ನು ಕೊಡುವ ವಿಷಯುದ ಹುಕಮು.)

೨. ಅ [ಮತ್ತು ಸದರಿ ಸಾಲ ತೆಗೆದುಕೊಳ್ಳುವವರಿಗೆ (ಅಥವಾ ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಕೆಲವರಿಗೆ, ಅಥವಾ ಒಬ್ಬನಿಗೆ) ಸದರಿ ಆಕ್ಟಿನನ್ವಯ ಮುಂಚೆ ಸಾಲವು ಕೊಡಲ್ಪಟ್ಟಿದೆ / ಸಾಲಗಳು ಕೊಡಲ್ಪಟ್ಟಿವೆ ಮತ್ತು ಸದರಿ ಸಾಲದ / ಸಾಲಗಳ ಸಂಬಂಧದಿಂದ ಈಗ ಬಾಕಿಯಾದ ರಕಮು ೩ನೇ ಆಸನದಲ್ಲಿ ತಪಶೀಲವಾರ ರೀತಿಯಿಂದ ತೋರಿಸಿದಂತೆ ಇರುತ್ತದೆ] ಅ

೩. ಮತ್ತು ಸದರಿ ಸಾಲ ತೆಗೆದುಕೊಳ್ಳುವವರು ಸದರಿ ಮುಂಚಿನ ಮತ್ತು ಅವರಿಗೆ ಈಗ ಕೊಡಲ್ಪಟ್ಟ ಈಗಿನ ಸಾಲಗಳನ್ನು / ಸಾಲವನ್ನು ಬಡ್ಡಿಯ ಸಹಿತ ಠರಾಯಿಸಿದ ಕಂತುಗಳಿಂದ ತೀರಿಸಲಿಕ್ಕೆ ತಾವು ಒಟ್ಟಾಗಿ ಮತ್ತು ಬೇರೆಬೇರೆಯಾಗಿ ಜಬಾಬದಾರರಿರುತ್ತೇವೆಂದು ಕಬೂಲ ಮಾಡಿರುತ್ತಾರೆ;

೪. ಆದದರಿಂದ ಈ ಹುಕುಮಿನ ಮೇಲಿಂದ ಜಾಹೀರು ಮಾಡಲ್ಪಡುವದೇನೆಂದರೆ, ಸದರಿ ಸಾಲ ತೆಗೆದುಕೊಳ್ಳುವವರಿಗೆ ಬ [೧ನೇ ಆಸನದೊಳಗಿರುವ ನೋಂದಿನಲ್ಲಿ ನಿರ್ದಿಷ್ಟ ಮಾಡಿಹ ಭೂಮಿಯ ಸಂಬಂಧದಿಂದ ೮ನೇ ಆಸನದೊಳಗಿನ ಸರಿ

[ಅ—ಅ] ಮುಂಚಿನ ಸಾಲಗಳು ಬಾಕಿ ಇಲ್ಲದಿದ್ದಾಗ, ಈ ಮಜಕೂರಿಗೆ ಕಾಟು ಹಾಕಬೇಕು.

[ಬ—ಬ] ಸುಧಾರಣೆ ಮಾಡುವ ಹಕ್ಕು ಎಲ್ಲ ಸಾಲ ತೆಗೆದುಕೊಳ್ಳುವವರಿಗಿದ್ದಾಗ, ಈ ಮಜಕೂರಿಗೆ ಕಾಟು ಹಾಕಬೇಕು.

ಬೀಳುವ ನೋಂದಿನಲ್ಲಿ ನಮೂದ ಮಾಡಿದ ಮನುಷ್ಯರ ಸಮ್ಮತಿಯಿಂದ, ಸದರಿ ಮನುಷ್ಯರ ಪೈಕಿ ಪ್ರತಿಯೊಬ್ಬ ಮನುಷ್ಯನು ನೇ ಆಸನದಲ್ಲಿ ತನ್ನ ಸಮ್ಮತಿಯ ಗುರುತೆಂದು ತನ್ನ ಸಹಿಯನ್ನು ಮಾಡಿರುತ್ತಾನೆ]ಬ, ನೇ ಆಸನದಲ್ಲಿ ಅನುಕ್ರಮ ವಾಗಿ ನಿರ್ದಿಷ್ಟ ಮಾಡಿದ ಕಾರಣಗಳ ಬಗ್ಗೆ, ಕ[ಮತ್ತು ನೇ ಆಸನದಲ್ಲಿ ನಮೂದು ಮಾಡಿದ ಭೂಮಿಗಳ ಹಿತದ ಬಗ್ಗೆ]ಕ ಪ್ರತಿವರ್ಷಕ್ಕೆ ಶೇಕಡಾ

ರ ಸರಳ ಬಡ್ಡಿಯಿಂದ (ನೇ ಕಾನೂನು ನೋಡಿರಿ) ಒಟ್ಟು ರೂಪಾಯಿಯ (ರೂ. ) ಸಾಲವು ಇದರ ಮೇಲಿಂದ ಕೊಡಲ್ಪಟ್ಟಿರುತ್ತದೆ.

೫. ಅದು ಬಡ್ಡಿಯ ಸಹಿತವಾಗಿ ಮತ್ತು ಈಗಿನ ಸಾಲವನ್ನು ಕೊಡುವ ಬಗ್ಗೆ ತಗಲಿದ ಖರ್ಚಿನ ಸಹಿತವಾಗಿ ಡ[ಸದರಿ ಮುಂಚಿನ ಸಾಲದ / ಸಾಲಗಳ ಪೈಕಿ ವಸೂಲಾಗದಿದ್ದ ಆಸಲು ಮತ್ತು ಅದರ ಬಡ್ಡಿ ಮತ್ತು ಖರ್ಚು ಇವುಗಳ ಸಹಿತವಾಗಿ]ಡ ಕೆಳಗೆ ನಿರ್ದಿಷ್ಟ ಮಾಡಿದ ರಕಮುಗಳ ಠರಾಯಿಸಿದ ಕಂತುಗಳಿಂದ ಮತ್ತು ಕೆಳಗೆ ನಿರ್ದಿಷ್ಟ ಮಾಡಿದ ತಾರೀಖುಗಳ ದಿವಸ ತಿರಿಗಿ ಕೊಡತಕ್ಕದ್ದಾಗಿದ್ದು. ಇಂಥ ಕಂತುಗಳನ್ನು, ಬರತಕ್ಕ ಎಲ್ಲ ಬಾಕಿಗಳು ತಿರಿಗಿ ಕೊಡಲ್ಪಡುವ ವರೆಗೆ, ಸರಕಾರದ ನಿರ್ಬಂಧಕ್ಕೆ ಒಳಪಟ್ಟು ಮುಲಕೀ ಅಧಿಕಾರಿಗಳಿಂದ ವೇಳೆವೇಳೆಗೆ ಠರಾಯಿಸಲ್ಪಡಬಹುದಾದ ಪ್ರಮಾಣದಿಂದ ಮತ್ತು ರಕಮುಗಳಿಂದ ಬಡ್ಡಿಯ ಮತ್ತು ಆಸಲಿನ ಖಾತೆಗೆ ಜಮಾ ಮಾಡಬೇಕು (ಆದರೆ ಸಾಲ ತೀರಿಸಲಿಕ್ಕೆ ವಿಲಂಬವಾದ ಕಾರಣದಿಂದ ಸದರಿ ಆಕ್ಟಿನನ್ವಯದ ಕಾನೂನುಗಳಿಗನುಸಾರವಾಗಿ ಇನ್ನೂ ಯಾವ ಸರಳಬಡ್ಡಿಯು ಅಥವಾ ಚಕ್ರಬಡ್ಡಿಯು ಹೊರಿಸಲ್ಪಡುವದೋ ಅದು ಸದರಿ ಠರಾಯಿಸಿದ ಕಂತುಗಳ ಹೊರ್ತು ಹೆಚ್ಚಾಗಿ ವಸೂಲ ಮಾಡಲ್ಪಡುವದು).

**ಕಂತುಗಳ ತಪಶೀಲು.**

| ಅನುಕ್ರಮ ನಂಬರು. | ತಾರೀಖು. | ರಕಮು. | ಶರಾ. |
|---|---|---|---|
| | | | |

[ಕ—ಕ] **ಸಾಲವು, ಹೊಲ ಮಾಡುವವರ ಸಾಲಗಳ ಆಕ್ಟಿನನ್ವಯ ಕೊಡಲ್ಪಟ್ಟಾಗ, ಈ ಮಜಕೂರಿಗೆ ಕಾಟು ಹಾಕಬೇಕು.**

[ಡ—ಡ] **ಮುಂಚಿನ ಸಾಲವು ಬಾಕಿ ಇಲ್ಲದಿದ್ದಾಗ್ಗೆ, ಈ ಮಜಕೂರಿಗೆ ಕಾಟು ಹಾಕಬೇಕು.**

೬. ಈ ಹುಕುಮಿನ ದಾಖಲೆಯುಳ್ಳ ಪ್ರತಿಯು                    ಇಲ್ಲಿಯ ಟ್ರೆಝುರಿಯಲ್ಲಿ ಹಾಜರು ಮಾಡಲ್ಪಡಲಾಗಿ, ಈ ಸಾಲವನ್ನು, ಸದರಿ ಸಾಲ ತೆಗೆದುಕೊಳ್ಳುವವರಿಗೆ, ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನ ಸಂಬಂಧದಿಂದ ನಿರ್ದಿಷ್ಟ ಮಾಡಿದ ರಕಮುಗಳಿಂದ ಮತ್ತು ೧ನೇ ಆಸನದಲ್ಲಿ ನಮೂದ ಮಾಡಿದ ತಾರೀಖುಗಳ ದಿವಸ ಮತ್ತು ಅದರಲ್ಲಿ ನಮೂದ ಮಾಡಿದ ಕಂತುಗಳಿಂದ ಕೊಡಬೇಕು.

೭. ಈ ಸಾಲವು ಸದರಿ ಆಕ್ಟಿನ ಮತ್ತು ಅದರನ್ವಯ ಆಯಾ ವೇಳೆಗೆ ಅಮಲಿನಲ್ಲಿದ್ದ ಕಾನೂನುಗಳ ಠರಾವುಗಳಿಗೆ ಮತ್ತು ಈ ಕೆಳಗಿನ ಶರ್ತುಗಳಿಗೆ ಪಾತ್ರ ಮಾಡಿಕೊಡಲ್ಪಟ್ಟಿದೆ, ಅಂದರೆ:—

(೧) ಈಗ ಕೊಟ್ಟಿರುವ ಸಾಲದ ಒಟ್ಟು ಅಸಲು ರಕಮನ್ನು ಹಿಂತಿರಿಗಿ ಕೊಡುವ ಸಂಬಂಧದಿಂದ, ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಪ್ರತಿಯೊಬ್ಬನು, ತನ್ನುತನ್ನೊಳಗೆ, ೨ನೇ ಆಸನದಲ್ಲಿ ನಿರ್ದಿಷ್ಟ ಮಾಡಿದ ರಕಮಿನ ಬಗ್ಗೆ ಜವಾಬದಾರನಾಗಿದ್ದು, ಆ ರಕಮನ್ನು ಕೊಡುವ ಬಗ್ಗೆ ಬದ್ಧನಾಗಿರುತ್ತಾನೆ;

(೨) ಇದರಲ್ಲಿ ಹಿಂದೆ ಹೇಳಲ್ಪಟ್ಟ ಒಟ್ಟುಕೂಡಿಸಿದ ಕಂತುಗಳನ್ನು, ಅಂದರೆ, ಯಾವ ಕಂತುಗಳಲ್ಲಿ ಈಗ ಕೊಟ್ಟ ಸಾಲದ (ಮತ್ತು ಮುಂಚಿನ ಬಾಕಿ ಇದ್ದ ಸಾಲಗಳ) ಅಸಲು, ಬಡ್ಡಿ ಮತ್ತು ಖರ್ಚು ಇವುಗಳ ಸಮಾವೇಶವಾಗುತ್ತದೋ ಆ ಕಂತುಗಳನ್ನು ಕೊಡುವ ಸಂಬಂಧದಿಂದ, ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಪ್ರತಿಯೊಬ್ಬನು, ತನ್ನುತನ್ನೊಳಗೆ, ೫ನೇ ಆಸನದಲ್ಲಿ ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನ ಸಂಬಂಧದಿಂದ ನಿರ್ದಿಷ್ಟ ಮಾಡಿದ ರಕಮಿನ ಬಗ್ಗೆ ಜವಾಬದಾರನಾಗಿದ್ದು ಅವನು ಆ ರಕಮನ್ನು (೭ನೇ ಶರ್ತಿಗೆ ಒಳಪಟ್ಟು) ಕೊಡಲಿಕ್ಕೆ ಬದ್ಧನಾಗಿರುತ್ತಾನೆ; ಮತ್ತು ಈ ರಕಮುಗಳನ್ನು, ಒಟ್ಟುಗೂಡಿಸಲ್ಪಟ್ಟ ಪ್ರತಿಯೊಂದು ಕಂತನ್ನು ಕೊಡುವ ಬಗ್ಗೆ ಇದರಲ್ಲಿ ಮೇಲೆ ಹೇಳಿದ ತಾರೀಖುಗಳ ದಿವಸ (೬ನೇ ಶರ್ತಿಗೆ ಒಳಪಟ್ಟು), ಕೊಡಬೇಕು;

(೩) ಆದರೂ, ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಎಲ್ಲರೂ ಒಟ್ಟಾಗಿ ಮತ್ತು ಬೇರೆಬೇರೆಯಾಗಿ, ಈಗ ಕೊಟ್ಟ ಸಾಲದ ಒಟ್ಟು ರಕಮಿನ ಬಗ್ಗೆ ಮತ್ತು ಬಡ್ಡಿಯ ಮತ್ತು ಖರ್ಚಿನ ಬಗ್ಗೆ (ಇದರಲ್ಲಿ ಮೇಲೆ ಹೇಳಿದ ಮುಂಚಿನ ಸಾಲಗಳ ಮೇಲಿನ ಬಡ್ಡಿಯನ್ನೂ ಖರ್ಚನ್ನೂ ಹಿಡಿದು ಬಾಕಿ ಆದ ಒಟ್ಟು ರಕಮಿನ ಸಹಿತವಾಗಿ) ಜವಾಬದಾರರಾಗಿದ್ದು, ಅವುಗಳನ್ನು ಸರಕಾರಕ್ಕೆ ಹಿಂತಿರಿಗಿ ಕೊಡಲಿಕ್ಕೆ ಬದ್ಧರಾಗಿರುತ್ತಾರೆ, ಮತ್ತು ಈ ಪ್ರಕಾರ ಕೊಡಬೇಕಾದ ಒಟ್ಟು ರಕಮನ್ನು, ಇದರಲ್ಲಿ ಮೇಲೆ ನಿರ್ದಿಷ್ಟ ಮಾಡಿದ ಕಂತುಗಳಿಂದ ಮತ್ತು ಮೇಲೆ ನಿರ್ದಿಷ್ಟ ಮಾಡಿದ ತಾರೀಖುಗಳ ದಿವಸ (೬ನೇ ಮತ್ತು ೭ನೇ ಶರ್ತುಗಳಿಗೊಳಪಟ್ಟು) ಒಟ್ಟಾಗಿ ಕೊಡಬೇಕು.

(೪) ಯಾವ ಕಾರಣದ ಬಗ್ಗೆ ಈ ಸಾಲವು ಕೊಡಲ್ಪಟ್ಟಿದೆಯೋ ಆ ಕಾರಣದ ಬಗ್ಗೆಯೇ ಅದನ್ನು ಉಪಯೋಗಿಸಬೇಕು.

(೫) ಯಾವ ಕೆಲಸದ / ಉದ್ದೇಶದ ಕಾರಣದ ಬಗ್ಗೆ ಈ ಸಾಲವು ಕೊಡಲ್ಪಟ್ಟಿದೆಯೋ ಆ ಕೆಲಸವು / ಉದ್ದೇಶವು ತಾರೀಖು          ತಿಂಗಳು          ಸನ್ ೧೯          ನೇ

ಇಸವಿಯ ಮುಂಚೆ ಅಥವಾ ಸಾಲ ಮಂಜೂರ ಮಾಡುವ ಅಮಲದಾರನಿಂದ ಯಾವ ನಂತರದ ತಾರೀಖಿನ ವರೆಗೆ ಸದರಿ ಮುದ್ದತು ಹೆಚ್ಚಿಸಲ್ಪಡುವದೋ ಆ ತಾರೀಖಿನ ಮುಂಚೆ ಮುಗಿಸಲ್ಪಡಬೇಕು. ಕೊನೆಗಾಣಿಸಲ್ಪಡಬೇಕು

(೬) ಈ (ಮತ್ತು ಮುಂಚಿನ) ಸಾಲದ (ಸಾಲಗಳ) ಯಾವದಾದರೂ ಕಂತು, ಆ ಸಂಬಂಧದಿಂದ ಇದರಲ್ಲಿ ಮೇಲೆ ಠರಾಯಿಸಿದ ತಾರೀಖಿಗಿಂತ ಮುಂಚಿನ ಯಾವ ತಾರೀಖಿನಲ್ಲಿ ಯಾವದಾದರೂ ವರ್ಷದಲ್ಲಿ ಪ್ರಾಂತ ಆಫೀಸರನು, ಆ ವರ್ಷದ ಹೊಲದ ಸಂಬಂಧದ ಯಾವದಾದರೂ ವಿಶೇಷ ಸ್ಥಿತಿಯ ಕಡೆಗೆ ಲಕ್ಷ್ಯಗೊಟ್ಟು (ಈ ಸ್ಥಿತಿಯ ಸಂಬಂಧದಿಂದ ಅವನ ನಿಕಾಲೆಯು ಕೊನೆಯದಾಗಿರುವದು) ಠರಾಯಿಸುವನೋ ಆ ತಾರೀಖಿಗೆ ಕೊಡಲ್ಪಡಬೇಕು.

(೭) ಈ (ಮತ್ತು ಮುಂಚಿನ) ಸಾಲದ (ಸಾಲಗಳ) ಯಾವದಾದರೂ ಕಂತು, ಇದರಲ್ಲಿ ಮೇಲೆ ಠರಾಯಿಸಲ್ಪಟ್ಟ ರಕಮಿನ ಇಮ್ಮಡಿಗಿಂತ ಹೆಚ್ಚಿಲ್ಲದಂಥ ಯಾವ ರಕಮನ್ನು ಪ್ರಾಂತ ಆಫೀಸರನು ಯಾವದೊಂದು ವರ್ಷದಲ್ಲಿ, ಆ ವರ್ಷದ ಹೊಲದ ಸಂಬಂಧದ ಯಾವದಾದರೂ ವಿಶೇಷ ಸ್ಥಿತಿಯ ಕಡೆಗೆ ಲಕ್ಷ್ಯಗೊಟ್ಟು (ಈ ಸ್ಥಿತಿಯ ಸಂಬಂಧದಿಂದ ಅವನ ನಿಕಾಲೆಯು ಕೊನೆಯದಾಗಿರುವದು) ಠರಾಯಿಸುವನೋ ಆ ರಕಮಿನ ವರೆಗೆ ಹೆಚ್ಚಿಸಲ್ಪಡಬಹುದು.

೮. ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಯಾರಾದರೂ ಮೇಲಿನ ಶರ್ತುಗಳ ಪೈಕಿ ಯಾವದೊಂದು ಶರ್ತನ್ನು ಯೋಗ್ಯರೀತಿಯಿಂದ ಪಾಲಿಸಲಿಕ್ಕೆ ತಪ್ಪಿದರೆ, ಅಥವಾ ಯಾವದೊಂದು ಕಂತನ್ನು ಕೊಡುವ ಬಗ್ಗೆ ಠರಾಯಿಸಿದ ತಾರೀಖಿನಿಂದ ಒಂದು ತಿಂಗಳೊಳಗೆ ಆ ಇಡೀ ಕಂತನ್ನು ಕೊಡದಿದ್ದರೆ, ಸಾಲವನ್ನು ತೀರಿಸುವ ಬಗ್ಗೆ ಠರಾಯಿಸಲ್ಪಟ್ಟ ಮುದ್ದತು ಕಳೆಯದಿದ್ದಾಗ್ಯೂ ಸದರಿ ಸಾಲ ತೆಗೆದುಕೊಳ್ಳುವವರ ಮೇಲೆ ಬಾಕಿ ಇದ್ದ ಎಲ್ಲ ರಕಮುಗಳನ್ನು ಸದರಿ ಸಾಲ ತೆಗೆದುಕೊಳ್ಳುವವರಿಂದ ಒಟ್ಟಾಗಿ ಮತ್ತು ಬೇರೆಬೇರೆಯಾಗಿ ಕೂಡಲೆ ವಸೂಲು ಮಾಡಬಹುದು.

* * * *

ಗಾನೇ ಆಸನದಲ್ಲಿ ನಮ್ಮ ಸಹಿಗಳನ್ನು ಹಾಕಿರುವಂಥ ನಾವು, ಇದರ ಮೂಲಕವಾಗಿ ಮೇಲೆ ಬರೆದ ಮುಚ್ಚಳಿಕೆಯ ಎಲ್ಲ ಕಲಮು ಮತ್ತು ಶರ್ತುಗಳನ್ನು ಮತ್ತು ಆ ಪರಿಶಿಷ್ಟದಲ್ಲಿ ನಿರ್ದಿಷ್ಟ ಮಾಡಿದ ಮಜಕೂರನ್ನು ಕಬೂಲು ಮಾಡುತ್ತೇವೆ, ಮತ್ತು ಅವು ಸರಿಯಾಗಿರುತ್ತವೆಂದು ಒಪ್ಪಿಕೊಳ್ಳುತ್ತೇವೆ, ಮತ್ತು ಇದರಲ್ಲಿ ಕೆಳಗೆ ಹಾಕಲ್ಪಟ್ಟ ನಮ್ಮ ಸಹಿಗಳು ಈ ನಮ್ಮ ಕಬೂಲಾಯತಿಯ ಮತ್ತು ಒಪ್ಪಿಗೆಯ ಬಗ್ಗೆ ಪುರಾವೆಯಾಗಿರುತ್ತವೆ.

ಮತ್ತು ಇದಲ್ಲದೆ ನಮ್ಮ ಪೈಕಿ ಯಾರಿಗಾದರೂ ಯಾವದಾದರೂ ಹಣವು ಕೊಡಲ್ಪಟ್ಟಾಗ, ಇದರಲ್ಲಿ ಕೆಳಗೆ ಬರೆದ ೨ ಪರಿಶಿಷ್ಟದಲ್ಲಿ ಸದರಿ ರಕಮನ್ನು ತೆಗೆದುಕೊಳ್ಳುವವನ ಸಹಿಯು ತೆಗೆದುಕೊಳ್ಳಲ್ಪಟ್ಟರೆ, ಆ ಸಹಿಯು ಆ ಪರಿಶಿಷ್ಟದಲ್ಲಿ ನಿರ್ದಿಷ್ಟ ಮಾಡಿದ ರಕಮಿನಷ್ಟು ಹಣವನ್ನು ಅವನು ಯೋಗ್ಯರೀತಿಯಿಂದ ತೆಗೆದುಕೊಂಡ ಬಗ್ಗೆ ಪುರಾವೆಯಾಗುವದೆಂದು ನಾವು ಕಬೂಲು ಮಾಡುತ್ತೇವೆ.

| ೧ | ೨ | ೩ | | | | |
|---|---|---|---|---|---|---|
| ಅನುಕ್ರಮ ನಂಬರು. | ಸಾಲ ತೆಗೆದುಕೊಳ್ಳುವವರ ಹೆಸರು ಮತ್ತು ಖಾತೆಯ ನಂಬರು. | ಈ ವರೆಗೂ ವಸೂಲಾಗದಿದ್ದ ಮುಂಚಿನ ಸಾಲದ ಬಾಕಿಗಳ ತಪಶೀಲು. | | | | |
| | | ಅ | ಬ | ಕ | ಡ | ಇ |
| | | ತಾರೀಖು. | ರಕಮು. | ಬಡ್ಡಿಯ ದರವು. | ಬಾಕಿ ಇದ್ದ ಅಸಲು. | ಬಾಕಿ ಇದ್ದ ಬಡ್ಡಿಯು. |
| | | | | | | |

ಪರಿಶಿಷ್ಟವು.

| ೪ | ೫ | | ೩ | ೨ | |
|---|---|---|---|---|---|
| ಈಗಿನ ಸಾಲವನ್ನು ಯಾವ ಭಾಗಗಳಿಂದ ತೀರಿಸುವ ಬಗ್ಗೆ ಸಾಲ ತೆಗೆದುಕೊಳ್ಳುವವರು ತಮ್ಮತಮ್ಮೊಳಗೆ ಅನುಕ್ರಮವಾಗಿ ಜವಾಬದಾರರಾಗಿರುತ್ತಾರೋ ಆ ಭಾಗಗಳು. | ಯಾವ ಒಟ್ಟುಗೂಡಿಸಿದ ಕಂತುಗಳ ಬಗ್ಗೆ (ಇವುಗಳಲ್ಲಿ ಮುಂಜಿನ ಮತ್ತು ಈಗಿನ ಸಾಲಗಳ ಸಂಬಂಧದ ಅಸಲು, ಬಡ್ಡಿ ಮತ್ತು ಖರ್ಚು ಇವುಗಳ ಸಮಾವೇಶವಾಗುತ್ತದೆ) ಸಾಲ ತೆಗೆದುಕೊಳ್ಳುವವರು ತಮ್ಮತಮ್ಮೊಳಗೆ ಅನುಕ್ರಮವಾಗಿ ಜವಾಬದಾರರಾಗಿರುತ್ತಾರೋ ಆ ಕಂತುಗಳು. | | ಈಗಿನ ಸಾಲವು ಯಾವ ಕಾರಣದ ಬಗ್ಗೆ ಕೊಡಲ್ಪಟ್ಟದೆಯೋ ಆ ಕಾರಣವು. | ಯಾವ ಭೂಮಿಯ ಹಿತದ ಬಗ್ಗೆ ಸಾಲವು ಕೊಡಲ್ಪಟ್ಟದೆಯೋ ಆ ಭೂಮಿಯ ತಪಶೀಲು. | |
| | ಸಂಖ್ಯೆ. | ಪ್ರತಿಯೊಂದರ ರಕಮು. | | ಸರ್ವೆ ನಂಬರು. | ಕ್ಷೇತ್ರಫಲ. |

ಅ ಪರಿಶಿಷ್ಟವು—

| | | ೮ (ಅ) | ೯ | | |
|---|---|---|---|---|---|
| ಯಾವ ಭೂಮಿಯ ಹಿತದ ಬಗ್ಗೆ ಸಾಲವು ಕೊಡಲ್ಪಟ್ಟದೆಯೋ ಆ ಭೂಮಿಯ ತಪಶೀಲು. | | ಸುಧಾರಣೆ ಮಾಡಲಿಕ್ಕೆ ಹಕ್ಕಿರುವ ಯಾವ ಮನುಷ್ಯನ ಸಮ್ಮತಿಯು ಸದರಿ ಸಾಲದ ಸಂಬಂಧದಿಂದ ಇದರ ಮೂಲಕವಾಗಿ ಕೊಡಲ್ಪಟ್ಟದೆಯೋ ಅವನ ಸಹಿ. | ಸಾಲ ತೆಗೆದುಕೊಳ್ಳುವವನ ವಹಿವಾಟಿನಲ್ಲಿ ಇರುವ ಭೂಮಿಯ ತಪಶೀಲು [ಒನೇ ಆಸನವು ಯಾವ ಬಾಬತುಗಳಿಗೆ ಲಾಗೂ ಆಗುವದಿಲ್ಲವೋ ಆ ಬಾಬತುಗಳಲ್ಲಿ ಇದನ್ನು ದಾಖಲು ಮಾಡಬೇಕು]. | | |
| ಆಕಾರ. | ಶರಾ. | | ಸರ್ವೆ ನಂಬರು. | ಕ್ಷೇತ್ರ ಫಲ. | ಆಕಾರ. |

(ಅ) ಹೊಲ ಮಾಡುವವರ ಸಾಲಗಳ ಆಕ್ಟಿನ ಪ್ರಕಾರವಿದ್ದಲ್ಲಿ ಇದನ್ನು

ಆ ಪರಿಶಿಷ್ಟವು—

| | | ೮ (ಅ) | ೯ | | |
|---|---|---|---|---|---|
| ಯಾವ ಭೂಮಿಯ ಹಿತದ ಬಗ್ಗೆ ಸಾಲವು ಕೊಡಲ್ಪಟ್ಟಿದೆಯೋ ಆ ಭೂಮಿಯ ತಪಶೀಲು. | | ಸುಧಾರಣೆ ಮಾಡಲಿಕ್ಕೆ ಹಕ್ಕಿರುವ ಯಾವ ಮನುಷ್ಯನ ಸಮ್ಮತಿಯು ಸದರಿ ಸಾಲದ ಸಂಬಂಧದಿಂದ ಇದರ ಮೂಲಕವಾಗಿ ಕೊಡಲ್ಪಟ್ಟದೆಯೋ ಅವನ ಸಹಿ. | ಸಾಲ ತೆಗೆದುಕೊಳ್ಳುವವನ ವಹಿವಾಟಿನಲ್ಲಿ ಇರುವ ಭೂಮಿಯ ತಪಶೀಲು [೭ನೇ ಆಸನವು ಯಾವ ಬಾಬತುಗಳಿಗೆ ಲಾಗೂ ಆಗುವದಿಲ್ಲವೋ ಆ ಬಾಬತುಗಳಲ್ಲಿ ಇದನ್ನು ದಾಖಲು ಮಾಡಬೇಕು]. | | |
| ಆಕಾರ. | ಶರಾ. | | ಸರ್ವೆ ನಂಬರು. | ಕ್ಷೇತ್ರ ಫಲ. | ಆಕಾರ. |
| | | | | | |

(ಅ) ಹೊಲ ಮಾಡುವವರ ಸಾಲಗಳ ಆಕ್ಟಿನ ಪ್ರಕಾರವಿದ್ದಲ್ಲಿ ಇದನ್ನು

[ಮುಂದೆಸಾಗಿದ್ದು].

| ೧೦ | | | | | | ೧೧ | ೧೨ |
|---|---|---|---|---|---|---|---|
| ಸಾಲ ತೆಗೆದುಕೊಳ್ಳುವವರಿಗೆ ಸದರಿ ಸಾಲವನ್ನು ಯಾವ ಕಂತುಗಳಿಂದ ಕೊಡತಕ್ಕದ್ದೋ ಆ ಕಂತುಗಳು. | | | | | | ಸಾಲ ತೆಗೆದು ಕೊಳ್ಳುವವರ ಸಹಿಗಳು. | ಶರಾ. |
| ೧ನೇ ಕಂತು. | | ೨ನೇ ಕಂತು. | | ೩ನೇ ಕಂತು. | | | |
| ರಕಮು. | ತಾರೀಖು. | ರಕಮು. | ತಾರೀಖು. | ರಕಮು. | ತಾರೀಖು. | | |
| | | | | | | | |

ಬಿಡಬೇಕು.

| | ಕೊಟ್ಟ ಹಣದ | | | | | |
|---|---|---|---|---|---|---|
| ಅನು ಕ್ರಮ ನಂಬರು. | ಹಣವು ಯಾವ ಮನುಷ್ಯನಿಗೆ ಕೊಡಲ್ಪಟ್ಟದೆ ಯೋ ಆ ಮನು ಷ್ಯನ ಹೆಸರು. | ಮೊದಲ ನೇ ಸಾರಿ ಹಣ ಕೊ ಟ್ಟ ತಾರೀ ಖು. | ರಕಮು. | ಹಣವು ಸಿಕ್ಕಿ ದ ಬಗ್ಗೆ ಪಾ ವತಿಯೆಂದು ಹಣ ತೆಗೆದು ಕೊಳ್ಳುವ ಮನುಷ್ಯನ ಸಹಿ. | ಹಣ ಕೊಡು ವ ಅಮಲ ದಾರನ ಸಹಿ. | ಎರಡನೇ ಸಾರಿ ಹಣ ಕೊ ಟ್ಟ ತಾರೀ ಖು. |
| ೧ | ೨ | ೩ | ೪ | ೫ | ೬ | ೭ |
| | | | | | | |

* ಟೀಪು.—ತಗಾಯಿೊ ಸಾಲವನ್ನು ಹುಲ್ಲಿನ ರೂಪದಿಂದ (ಅಥವಾ ಇತರ
ಈ ಆಸನಗಳು ಸಾಕಾಗುವದಿಲ್ಲ; ಬಿಳೀ ಕಾಗದವನ್ನು ಇದಕ್ಕೆ ಅಂಟಿಸಿ ಆಸನ

ಈ ಹೊತ್ತು ತಾರೀಖು ನೇ ಸನ್ ೧೯ ನೇ ಇಸವಿ

ಪರಿಶಿಷ್ಟವು.

ತಪಶೀಲು.

| ...ರಕಮು. | ಹಣವು ಸಿಕ್ಕಿದ ಬಗ್ಗೆ ಪಾವತಿಯಿಂದು ಹಣ ತೆಗೆದುಕೊಳ್ಳುವ ಮನುಷ್ಯನ ಸಹಿ. | ಹಣ ಕೊಡುವ ಅಮಲದಾರನ ಸಹಿ. | ಮೂರನೇ ಸಾರೆ ಹಣ ಕೊಟ್ಟ ತಾರೀಖು. | ರಕಮು. | ಹಣವು ಸಿಕ್ಕಿದ ಬಗ್ಗೆ ಪಾವತಿಯಿಂದು ಹಣ ತೆಗೆದುಕೊಳ್ಳುವ ಮನುಷ್ಯನ ಸಹಿ. | ಹಣ ಕೊಡುವ ಅಮಲದಾರನ ಸಹಿ. |
|---|---|---|---|---|---|---|
| ೮ | ೯ | ೧೦ | ೧೧ | ೧೨ | ೧೩ | ೧೪ |
| | | | | | | |

ಜೀನಸಿನ ರೂಪದಿಂದ) ಪ್ರತಿ ವಾರದ ಅಥವಾ ಮಾಸಿಕ ಕಂತುಗಳಿಂದ ಕೊಟ್ಟಾಗ, ಗಳನ್ನು ಬಳಿಸಬೇಕು.

[ಪ್ರಾ. ಅಮಲದಾರನು ಸಾಲ ಮಂಜೂರು ಮಾಡುವ ಅಮಲದಾರನಿದ್ದರೆ, ಸಾಲವನ್ನು ಮಂಜೂರು ಮಾಡುವ ಅಮಲದಾರನ ಅಥವಾ ಮಾಮಲೇದಾರನ ಸಹಿ].

## ನಮೂನೆ ೩.

(ಆಸನೆ—ಇದರ ಜೊತೆಯ ಪರಿಶಿಷ್ಟದ ಆಸನವು).

೨ನೇ ಆಸನದಲ್ಲಿ ಸಾಲ ತೆಗೆದುಕೊಳ್ಳುವವರೆಂದು ನಮೂದು ಮಾಡಲ್ಪಟ್ಟ ಮನುಷ್ಯರು (ಇವರಿಗೆ ಇದರಲ್ಲಿ ಮುಂದೆ ಸದರಿ ಸಾಲ ತೆಗೆದುಕೊಳ್ಳುವವರೆಂದು ಕರೆದಿದೆ) ಸಾಕೀನ , ತಾಲೂಕು , ಜಿಲ್ಹಾ , ಇಲ್ಲಿಯವರಾಗಿದ್ದು ಅವರ ಪೈಕಿ ಪ್ರತಿಯೊಬ್ಬನು ಭೂಮಿಯ ಸುಧಾರಣೆಯ ಸಾಲಗಳ / ಹೊಲ ಮಾಡುವವರ ಸಾಲಗಳ ಆಕ್ಟಿನನ್ವಯ ಸಾಲ ಸಿಗುವ ಬಗ್ಗೆ ಅರ್ಜಿ ಮಾಡಿರುತ್ತಾನೆ.

ಭೂಮಿಯ ಸುಧಾರಣೆ ಮಾಡುವ ವಿಷಯದ ಸಾಲಗಳ / ಹೊಲ ಮಾಡುವವರ ಸಾಲಗಳ ಆಕ್ಟಿನನ್ವಯ ಹಲವು ಸಾಲ ತೆಗೆದುಕೊಳ್ಳುವವರಿಗೆ ಬೇರೆಬೇರೆಯಾಗಿ ಸಾಲಗಳನ್ನು ಕೊಡುವ ವಿಷಯದ ಹುಕುಮು.

೨. ಅ[ ಮತ್ತು ಸದರಿ ಸಾಲ ತೆಗೆದುಕೊಳ್ಳುವವರಿಗೆ (ಅಥವಾ ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಕೆಲವರಿಗೆ, ಅಥವಾ ಒಬ್ಬನಿಗೆ) ಸದರಿ ಆಕ್ಟಿನನ್ವಯ ಮುಂಚೆ ಸಾಲವು ಕೊಡಲ್ಪಟ್ಟಿದೆ / ಸಾಲಗಳು ಕೊಡಲ್ಪಟ್ಟಿವೆ ಮತ್ತು ಸದರಿ ಸಾಲದ / ಸಾಲಗಳ ಸಂಬಂಧದಿಂದ ಈಗ ಬಾಕಿಯಾದ ರಕಮು ೩ನೇ ಆಸನದಲ್ಲಿ ತಪಶೀಲವಾರ ರೀತಿಯಿಂದ ತೋರಿಸಿದಂತೆ ಇರುತ್ತದೆ]ಅ

೩. ಮತ್ತು ಯಾರಿಗೆ ಮುಂಚೆ ಸಾಲವು ಕೊಡಲ್ಪಟ್ಟಿದೆಯೋ ಅವರ ಪೈಕಿ ಪ್ರತಿಯೊಬ್ಬನು ಸದರಿ ಬ[ಮುಂಚಿನ ಮತ್ತು]ಬ ಈಗಿನ ಸಾಲಗಳನ್ನು ಬಡ್ಡಿಯ ಸಹಿತವಾಗಿ ಠರಾಯಿಸಿದ ಕಂತುಗಳಿಂದ ಹಿಂತಿರುಗಿ ಕೊಡುವೆನೆಂದು ಕಬೂಲ ಮಾಡಿರುತ್ತಾನೆ.

೪. ಆದದರಿಂದ ಈ ಹುಕುಮಿನ ಮೇಲಿಂದ ಜಾಹೀರು ಮಾಡಲ್ಪಡುವದೇನಂದರೆ, ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಪ್ರತಿಯೊಬ್ಬನಿಗೆ, ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನ ಹೆಸರಿನ ಎದುರಿನಲ್ಲಿ, ೮ನೇ ಆಸನದಲ್ಲಿ ಹೇಳಿದ ರಕಮಿನ ಸಾಲವು ಕ[೬ನೇ ಆಸನದೊಳಗಿರುವ ನೋಂದಿನಲ್ಲಿ ನಿರ್ದಿಷ್ಟ ಮಾಡಿದ ಭೂಮಿಯ ಸಂಬಂಧದಿಂದ ೭ನೇ ಆಸನದೊಳಗಿನ ಸರಿಬೀಳುವ ನೋಂದಿನಲ್ಲಿ ನಮೂನ ಮಾಡಿದ ಮನುಷ್ಯರ ಸಮ್ಮತಿಯಿಂದ, ಸದರಿ ಮನುಷ್ಯರ ಪೈಕಿ ಪ್ರತಿಯೊಬ್ಬನು ೭ನೇ ಆಸನದಲ್ಲಿ ತನ್ನ ಸಮ್ಮತಿಯ ಗುರುತೆಂದು ತನ್ನ ಸಹಿಯನ್ನು ಮಾಡಿರುತ್ತಾನೆ]ಕ

[ಅ—ಅ] ಮುಂಚಿನ ಸಾಲಗಳು ಬಾಕಿ ಇಲ್ಲದಿದ್ದಾಗ, ಈ ಮಜಕೂರಿಗೆ ಕಾಟು ಹಾಕಬೇಕು.

[ಬ—ಬ] ಸದರ ಸದರ ಸದರ

[ಕ—ಕ] ಯಾವತ್ತು ಸಾಲ ತೆಗೆದುಕೊಂಡವರಿಗೆ ಭೂಮಿಯ ಸುಧಾರಣೆ ಮಾಡುವ ಹಕ್ಕಿದ್ದಾಗ, ಈ ಮಜಕೂರಿಗೆ ಕಾಟು ಹಾಕಬೇಕು.

ಅದೇ ಪರಿಶಿಷ್ಟದ ೯ನೇ ಆಸನದಲ್ಲಿ ಅನುಕ್ರಮವಾಗಿ ನಿರ್ದಿಷ್ಟ ಮಾಡಿದ ಕಾರಣಗಳ ಬಗ್ಗೆ ಅ [ಮತ್ತು ೭ನೇ ಆಸನದಲ್ಲಿ ಅನುಕ್ರಮವಾಗಿ ನಮೂದ ಮಾಡಿದ ಭೂಮಿಗಳ ಹಿತದ ಬಗ್ಗೆ] ಅ ಪ್ರತಿ ನೂರಕ್ಕೆ ವರ್ಷಕ್ಕೆ ರಂತೆ (೧೧ನೇ ಕಾನೂನು ನೋಡಿರಿ) ಸರಳಬಡ್ಡಿಯಿಂದ ಕೊಡಲ್ಪಟ್ಟಿದೆ.

೫. ಅದು, ಪ್ರತಿಯೊಂದು ಬಾಬತಿನಲ್ಲಿ, ಬಡ್ಡಿಯ ಸಹಿತವಾಗಿ ಮತ್ತು ಈಗಿನ ಸಾಲವನ್ನು ಕೊಡುವ ಬಗ್ಗೆ ತಗಲಿದ ಖರ್ಚಿನ ಸಹಿತವಾಗಿ ಬ[ಸದರಿ ಮುಂಚಿನ ಸಾಲಗಳ ಪೈಕಿ ವಸೂಲಾಗದಿದ್ದ ಅಸಲು ಮತ್ತು ಅದರ ಬಡ್ಡಿ ಮತ್ತು ಖರ್ಚು ಇವುಗಳ ಸಹಿತವಾಗಿ]ಬ ಕೆಳಗೆ ನಮೂದ ಮಾಡಿದ ರಕಮುಗಳ ಠರಾಯಿಸಿದ ಕಂತುಗಳಿಂದ ಮತ್ತು ಕೆಳಗೆ ನಿರ್ದಿಷ್ಟ ಮಾಡಿದ ತಾರೀಖುಗಳ ದಿವಸ ತಿರುಗಿ ಕೊಡತಕ್ಕದ್ದಾಗಿದ್ದು, ಇಂಥ ಕಂತುಗಳನ್ನು, ಪ್ರತಿಯೊಂದು ಬಾಬತಿನಲ್ಲಿ, ಬರತಕ್ಕ ಎಲ್ಲ ಬಾಕಿಗಳು ಹಿಂತಿರುಗಿ ಕೊಡಲ್ಪಡುವವರೆಗೆ, ಸರಕಾರದ ನಿರ್ಬಂಧಕ್ಕೆ ಒಳಪಟ್ಟು ಮುಲಕೀ ಅಧಿಕಾರಿಗಳಿಂದ ವೇಳೆವೇಳೆಗೆ ಠರಾಯಿಸಲ್ಪಡಬಹುದಾದ ಪ್ರಮಾಣದಿಂದ ಮತ್ತು ರಕಮುಗಳಿಂದ ಬಡ್ಡಿಯ ಮತ್ತು ಅಸಲಿನ ಖಾತೆಗೆ ಜಮಾ ಮಾಡಬೇಕು (ಆದರೆ, ಸಾಲ ತೀರಿಸಲಿಕ್ಕೆ ವಿಳಂಬವಾದ ಕಾರಣದಿಂದ ಸದರಿ ಆಕ್ಟಿನನ್ವಯದ ಕಾನೂನುಗಳಿಗನುಸಾರವಾಗಿ ಇನ್ನೂ ಯಾವ ಸರಳಬಡ್ಡಿಯು ಅಥವಾ ಚಕ್ರಬಡ್ಡಿಯು ಹೊರಿಸಲ್ಪಡುವದೋ ಅದು ಸದರಿ ಠರಾಯಿಸಿದ ಕಂತುಗಳ ಹೊರ್ತು ಹೆಚ್ಚಾಗಿ ವಸೂಲು ಮಾಡಲ್ಪಡುವದು).

ಕಂತುಗಳ ಪಟ್ಟಿಯು.

| ಅನುಕ್ರಮ ನಂಬರು. | ತಾರೀಖು | ರಕಮು. | ಷರಾ. |
|---|---|---|---|
| | | | |

೬. ಈ ಸಾಲಗಳ ಪೈಕಿ ಪ್ರತಿಯೊಂದು ಸಾಲವು, ಸದರಿ ಆಕ್ಟಿನ ಮತ್ತು ಅದರನ್ವಯ ಆಯಾ ವೇಳೆಗೆ ಅಮಲಿನಲ್ಲಿದ್ದ ಕಾನೂನುಗಳ ಠರಾವುಗಳಿಗೆ ಮತ್ತು ಈ ಕೆಳಗಿನ ಶರ್ತುಗಳಿಗೆ ಪಾತ್ರ ಮಾಡಿ ಕೊಡಲ್ಪಟ್ಟಿದೆ, ಅಂದರೆ:—

(೧) ಯಾವ ಕಾರಣದ ಬಗ್ಗೆ ಈ ಸಾಲಗಳ ಪೈಕಿ ಪ್ರತಿಯೊಂದು ಸಾಲವು ಕೊಡಲ್ಪಟ್ಟದೆಯೋ ಆ ಕಾರಣದ ಬಗ್ಗೆಯೇ ಅದನ್ನು ಉಪಯೋಗಿಸಬೇಕು.

[ಅ—ಅ] ಕೂಲ [illegible] ಸಾಲಗಳ ಆಕ್ಟಿನನ್ವಯ ಸಾಲಗಳನ್ನು ಕೊಟ್ಟಾಗ, ಈ ಮಜಕೂರಿಗೆ ಕಾಟು ಹಾಕಬೇಕು.

[ಬ—ಬ] ಮುಂಚಿನ ಸಾಲಗಳು ಬಾಕಿ ಇಲ್ಲದಿದ್ದಾಗ, ಈ ಮಜಕೂರಿಗೆ ಕಾಟು ಹಾಕಬೇಕು.

(೨) ಯಾವ ಕೆಲಸಗಳ/ಉದ್ದೇಶಗಳ ಕಾರಣಗಳ ಬಗ್ಗೆ ಈ ಸಾಲಗಳು ಕೊಡಲ್ಪಟ್ಟಿವೆಯೋ ಆ ಕೆಲಸಗಳು/ಉದ್ದೇಶಗಳು ಇದಕ್ಕೆ ಜೋಡಿಸಿದ ಆ ಪರಿಶಿಷ್ಟದ ೧೦ನೇ ಆಸನದಲ್ಲಿ ಪ್ರತಿಯೊಂದು ಸಾಲದ ಸಂಬಂಧದಿಂದ ನಿರ್ದಿಷ್ಟ ಮಾಡಿದ ತಾರೀಖಿನ ಮುಂಚೆ ಅಥವಾ ಸಾಲ ಮಂಜೂರು ಮಾಡುವ ಅಮಲದಾರನಿಂದ ಯಾವ ನಂತರದ ತಾರೀಖಿನ ವರೆಗೆ ಸದರಿ ಮುದ್ದತು ಹೆಚ್ಚಿಸಲ್ಪಡುವದೋ ಆ ತಾರೀಖಿನ ಮುಂಚೆ ಮುಗಿಸಲ್ಪಡಬೇಕು./ಕೊನೆಗಾಣಿಸಲ್ಪಡಬೇಕು.

(೩) ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಯಾರಾದರೂ ಮನುಷ್ಯರು, ಅವರ ವಾರಸದಾರರು, ಮೃತ್ಯುಪತ್ರ ನಡಿಸುವವರು, ವಹಿವಾಟು ನಡಿಸುವವರು ಅಥವಾ ಅಸೈನರು ಈ ಸಾಲಗಳ ಬಗ್ಗೆ ತಾರಣವೆಂದು ಒತ್ತೆ ಇಟ್ಟ ಯಾವದಾದರೂ ಭೂಮಿಯನ್ನು ಒತ್ತೆಯ, ಮಾರಾಟದ, ದೇಣಿಗೆಯ ಅಥವಾ ವಿಭಾಗಣಿಯ ಮೂಲಕವಾಗಿ ಅಥವಾ ಇತರ ರೀತಿಯಿಂದ ತಬದೀಲು ಮಾಡಿಕೊಡಬಾರದು.

(೪) ಈ ಸಾಲಗಳ ಬಗ್ಗೆ ಸದರಿ ಸಾಲ ತೆಗೆದುಕೊಳ್ಳುವವರು ತಾರಣವೆಂದು ಒತ್ತೆ ಇಟ್ಟ ಭೂಮಿಗಳ ಮೇಲೆ ಈಗ ಯಾವ ಬೋಜಾಗಳಿದ್ದಾವೋ ಅವುಗಳ ಪತ್ರಕವು/ಯಾವವಾದರೂ ಬೋಜಾಗಳಿಲ್ಲವೆಂಬ ವಿಷಯದ ಪತ್ರಕವು (ಈ ತಪಶೀಲುಗಳು ಆ ಪರಿಶಿಷ್ಟದ ೧೨ನೇ ಆಸನದಲ್ಲಿ ಕೊಡಲ್ಪಟ್ಟಿವೆ) ನಿಜವಾದದ್ದೂ ಪೂರ್ಣವಾದದ್ದೂ ಇರುತ್ತದೆ.

(೫) ಇವುಗಳ ಪೈಕಿ ಯಾವವಾದರೂ (ಮತ್ತು ಮುಂಚಿನ) ಸಾಲಗಳ ಯಾವದಾದರೂ ಕಂತು, ಆ ಸಂಬಂಧದಿಂದ ಇದರಲ್ಲಿ ಮೇಲೆ ಠರಾಯಿಸಿದ ತಾರೀಖಿಗಿಂತ ಮುಂಚಿನ ಯಾವ ತಾರೀಖನ್ನು ಯಾವದಾದರೂ ವರ್ಷದಲ್ಲಿ ಪ್ರಾಂ. ಅಮಲದಾರನು ಆ ವರ್ಷದ ಹೊಲದ ಸಂಬಂಧದ ಯಾವದಾದರೂ ವಿಶೇಷ ಸ್ಥಿತಿಯ ಕಡೆಗೆ ಲಕ್ಷ್ಯಗೊಟ್ಟು (ಈ ಸ್ಥಿತಿಯ ಸಂಬಂಧದಿಂದ ಅವನ ನಿಕಾಲೆಯು ಕೊನೆಯದಾಗಿರುವದು) ಠರಾಯಿಸುವನೋ ಆ ತಾರೀಖಿಗೆ ಕೊಡಲ್ಪಡಬೇಕು.

(೬) ಇವುಗಳ ಪೈಕಿ ಯಾವವಾದರೂ (ಮತ್ತು ಮುಂಚಿನ) ಸಾಲಗಳ ಕಂತು, ಇದರಲ್ಲಿ ಮೇಲೆ ಠರಾಯಿಸಲ್ಪಟ್ಟ ರಕಮಿನ ಇಮ್ಮಡಿಗಿಂತ ಹೆಚ್ಚಲ್ಲದಂಥ ಯಾವ ರಕಮನ್ನು ಪ್ರಾಂತ ಆಫಿಸರನು ಯಾವದೊಂದು ವರ್ಷದಲ್ಲಿ, ಆ ವರ್ಷದ ಹೊಲದ ಸಂಬಂಧದ ಯಾವದಾದರೂ ವಿಶೇಷ ಸ್ಥಿತಿಯ ಕಡೆಗೆ ಲಕ್ಷ್ಯಗೊಟ್ಟು (ಈ ಸ್ಥಿತಿಯ ಸಂಬಂಧದಿಂದ ಅವನ ನಿಕಾಲೆಯು ಕೊನೆಯದಾಗಿರುವದು) ಠರಾಯಿಸುವನೋ ಆ ರಕಮಿನ ವರೆಗೆ ಹೆಚ್ಚಿಸಲ್ಪಡಬಹುದು.

ಸದರಿ ಸಾಲ ತೆಗೆದುಕೊಳ್ಳುವವರ ಪೈಕಿ ಯಾವನಾದರೂ ಮನುಷ್ಯನು ಮೇಲಿನ ಶರ್ತುಗಳ ಪೈಕಿ ಯಾವದೊಂದು ಶರ್ತನ್ನು ಯೋಗ್ಯ ರೀತಿಯಿಂದ ಪಾಲಿ

ಸಲಿಕ್ಕೆ ತಪ್ಪಿದರೆ, ಅಥವಾ ಯಾವದೊಂದು ಕಂತನ್ನು ಕೊಡುವ ಬಗ್ಗೆ ಠರಾಯಿಸಿದ ತಾರೀಖಿನಿಂದ ಒಂದು ತಿಂಗಳೊಳಗೆ ಯಾವನಾದರೂ ಸಾಲ ತೆಗೆದುಕೊಳ್ಳುವವನು ಅದನ್ನು ಕೊಡದಿದ್ದರೆ, ಸಾಲವನ್ನು ತೀರಿಸುವ ಬಗ್ಗೆ ಠರಾಯಿಸಲ್ಪಟ್ಟ ಮುದ್ದತು ಕಳೆಯದಿದ್ದಾಗ್ಯೂ, ಅಂಥ ಸಾಲ ತೆಗೆದುಕೊಳ್ಳುವವನ ಮೇಲೆ ಆ ವೇಳೆಯಲ್ಲಿ ಬಾಕಿಯಾದ ಎಲ್ಲ ರಕಮುಗಳನ್ನು ಕೂಡಲೆ ವಸೂಲು ಮಾಡಬಹುದು.

ಈ ಹುಕುಮಿನ ದಾಖಲೆಯುಳ್ಳ ಪ್ರತಿಯು ಇಲ್ಲಿಯ ಟ್ರೆಝುರಿಯಲ್ಲಿ ಹಾಜರು ಮಾಡಲ್ಪಡಲಾಗಿ, ಈ ಸಾಲಗಳನ್ನು, ಸದರಿ ಸಾಲ ತೆಗೆದುಕೊಳ್ಳುವವರಿಗೆ, ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನ ಸಂಬಂಧದಿಂದ ೨ನೇ ಆಸನದಲ್ಲಿ ನಮೂದ ಮಾಡಿದ ತಾರೀಖುಗಳ ದಿವಸ ಮತ್ತು ಅದರಲ್ಲಿ ನಮೂದ ಮಾಡಿದ ಕಂತುಗಳಿಂದ ಕೊಡಬೇಕು.

೬ಅ. ಸಾಲ ತೆಗೆದುಕೊಳ್ಳುವವನಿಂದ ಬರತಕ್ಕ ಯಾವದೇ ಕಂತು, ಅದನ್ನು ಕೊಡುವ ಬಗ್ಗೆ ಠರಾಯಿಸಿದ ತಾರೀಖಿನಿಂದ ಒಂದು ತಿಂಗಳೊಳಗೆ ಕೊಡಲ್ಪಡದಿದ್ದರೆ, ಸಾಲ ಮಂಜೂರ ಮಾಡುವವನು ೬ನೇ ಶರ್ತಿನ ಪ್ರಕಾರ ಕೆಲಸ ನಡಿಸುವವರ ಬದಲಾಗಿ, ಸದರಿ ಕಂತಿನ ರಕಮು ಅದರ ಮೇಲಿನ ಬಡ್ಡಿಯ ಸಹಿತವಾಗಿ ಕೊಡಲ್ಪಡುವವರೆಗೆ, ಸದರಿ ಕಂತನ್ನು ಕೊಡಲಿಕ್ಕೆ ತಪ್ಪಿದ ತಾರೀಖಿನಿಂದ ಸಾಲವನ್ನು ಮಂಜೂರ ಮಾಡುವ ಹುಕುಮಿನಲ್ಲಿ ಠರಾಯಿಸಿದ ಬಡ್ಡಿಯ ದರಕ್ಕೆ ಸರಿಯಾದ ದರದ ಪ್ರಕಾರ ಸದರಿ ಕಂತಿನ ಮೇಲೆ ಚಕ್ರಬಡ್ಡಿ ಮತ್ತು ನೂರಕ್ಕೆ ಎರಡರಂತೆ ಇವುಗಳ ಸಹಿತವಾಗಿ, ಕೊಡಲ್ಪಡದಿದ್ದ ಕಂತನ್ನು ವಸೂಲ ಮಾಡಬಹುದು.

*       *       *       *       *       *

ನಮ್ಮ ಪೈಕಿ, ಅಂದರೆ, ಇದರಲ್ಲಿ ಕೆಳಗೆ ಬರೆದ ೨ನೇ ಆಸನದಲ್ಲಿ ಸಾಲ ತೆಗೆದುಕೊಳ್ಳುವವರೆಂದು ನಮೂದ ಮಾಡಲ್ಪಟ್ಟ ಯಾವ ಮನುಷ್ಯರು ೧೧ನೇ ಆಸನದಲ್ಲಿ ತಮ್ಮ ಸಹಿಗಳನ್ನು ಮಾಡಿರುತ್ತಾರೋ ಆ ಮನುಷ್ಯರ ಪೈಕಿ ಪ್ರತಿಯೊಬ್ಬನು ಇದರ ಮೂಲಕವಾಗಿ, ಈ ಹುಕುಮಿನ ಎಲ್ಲ ಕರಾರು ಮತ್ತು ಶರ್ತುಗಳನ್ನು ಮತ್ತು ಸದರಿ ಅ ಪರಿಶಿಷ್ಟದಲ್ಲಿ ನಿರ್ದಿಷ್ಟ ಮಾಡಿದ ಮುಚಲಕಾದನ್ನು, ತನಗೆ ಕೊಟ್ಟಿರುವ ಸಾಲಗಳ ಸಂಬಂಧದಿಂದ ಸದರಿ ಕರಾರುಗಳು, ಶರ್ತುಗಳು ಮತ್ತು ಮುಚಲಕಾ ಎಷ್ಟರ ಮಟ್ಟಿಗೆ ಲಾಗೂ ಇರುವವೋ ಅಷ್ಟರ ಮಟ್ಟಿಗೆ ಕಬೂಲ ಮಾಡುತ್ತಾನೆ. ಮತ್ತು ಅವು ಸರಿಯಾಗಿರುತ್ತವೆಂದು ನಮ್ಮ ಪೈಕಿ ಪ್ರತಿಯೊಬ್ಬನು ಒಪ್ಪಿಕೊಳ್ಳುತ್ತಾನೆ, ಮತ್ತು ಸದರಿ ೧೧ನೇ ಆಸನದಲ್ಲಿ ಅವನು ಹಾಕಿರುವ ತನ್ನ ಸಹಿಯು ಈ ಅವನ ಕಬೂಲಾಯತಿಯ ಮತ್ತು ಒಪ್ಪಿಗೆಯ ಪ್ರಮಾಣವಾಗಿರುತ್ತದೆ.

ಮತ್ತು ನಮ್ಮ ಪೈಕಿ ಪ್ರತಿಯೊಬ್ಬನು ಇನ್ನೂ ಕಬೂಲ ಮಾಡುವದೇನೆಂದರೆ, ಅವನಿಗೆ ಯಾವದಾದರೂ ಹಣವು ಕೊಡಲ್ಪಟ್ಟಾಗ, ಇದರಲ್ಲಿ ಕೆಳಗೆ ಬರೆದ ಬ ಪರಿಶಿಷ್ಟದಲ್ಲಿ ಸದರಿ ರಕಮನ್ನು ತೆಗೆದುಕೊಳ್ಳುವವನ ಸಹಿಯು ಅಥವಾ ಅವನ ಹೆಬ್ಬೆಟ್ಟಿನ ಮುದ್ರೆಯು ತೆಗೆದುಕೊಳ್ಳಲ್ಪಟ್ಟರೆ, ಆ ಸಹಿಯು ಅಥವಾ ಮುದ್ರೆಯು ಆ ಪರಿಶಿಷ್ಟದಲ್ಲಿ ನಿರ್ದಿಷ್ಟ ಮಾಡಿದ ರಕಮಿನಷ್ಟು ಹಣವನ್ನು ಅವನು ಯೋಗ್ಯರೀತಿಯಿಂದ ತೆಗೆದುಕೊಂಡ ಬಗ್ಗೆ ಪುರಾವೆಯಾಗುವದೆಂದು ತಿಳಿಯಬೇಕು.

**ಜಾಮೀನಿನ ಕಬೂಲಾಯಿತು.**

೧೬ನೇ ಆಸನದಲ್ಲಿ ೨ನೇ ಆಸನದೊಳಗಿನ ಸಾಲ ತೆಗೆದುಕೊಳ್ಳುವವರ ಹೆಸರುಗಳ ಎದುರಿನಲ್ಲಿ ಜಾಮೀನದಾರರೆಂದು ಸಹಿಗಳನ್ನು ಹಾಕಿದವರಾದ ನಾವು ಇದರ ಮೇಲಿಂದ ಇಕರಾರು ಮಾಡುವದೇನೆಂದರೆ, ನಮ್ಮ ಪೈಕಿ ಯಾರ ಹೆಸರುಗಳು ಯಾವನಾದರೂ ಸಾಲ ತೆಗೆದುಕೊಳ್ಳುವವನ ಹೆಸರಿನ ಎದುರಿನಲ್ಲಿ ದಾಖಲು ಮಾಡಲ್ಪಟ್ಟಿವೆಯೋ ಅಂಥ ಯಾವನಾದರೊಬ್ಬನ, ಇಬ್ಬರ ಅಥವಾ ಹೆಚ್ಚು ಜನರ ಸಂಬಂಧದಿಂದ ನಾವು ಇಂಥ ಸಾಲ ತೆಗೆದುಕೊಳ್ಳುವವನ ಬಗ್ಗೆ ಜಾಮೀನುದಾರರಿದ್ದೇವೆ; ಮತ್ತು ಈ ರೀತಿಯಿಂದ ದಾಖಲು ಮಾಡಲ್ಪಟ್ಟ ನಮ್ಮ ಪೈಕಿ ಪ್ರತಿಯೊಬ್ಬ ಮನುಷ್ಯನು ಮತ್ತು ಪ್ರತಿ ಎರಡು ಅಥವಾ ಹೆಚ್ಚು ಮನುಷ್ಯರು ಇದರ ಮೇಲಿಂದ ಕಬೂಲ ಮಾಡುವದೇನೆಂದರೆ. ಸದರಿ ಸಾಲ ತೆಗೆದುಕೊಳ್ಳುವವನು ಅವನಿಗೆ ಈಗ ಕೊಡಲ್ಪಟ್ಟಿರುವ ಸಾಲವನ್ನು / ಅವನ ಮೇಲೆ ತಕಾವಿಯ ಬಾಬತಿನಲ್ಲಿ ಬಾಕಿಯಾದ ಒಟ್ಟು ರಕಮುಗಳನ್ನು ಆ ಸಾಲವು / ಆ ರಕಮುಗಳು ಅವನಿಂದ ಸಲ್ಲತಕ್ಕದ್ದಾದ ಯಾವನಾದರೂ ವೇಳೆಯಲ್ಲಿ ಹಿಂತಿರಿಗಿ ಕೊಡಲಿಕ್ಕೆ ತಪ್ಪಿದರೆ, ಸದರಿ ಹಣವನ್ನು ನಮ್ಮಿಂದ ಒಟ್ಟಾಗಿ ಮತ್ತು ಬೇರೆಬೇರೆಯಾಗಿ ವಸೂಲ ಮಾಡಬಹುದು; ಮತ್ತು ನಾವು ಇದರ ಮೇಲಿಂದ ಇಕರಾರು ಮಾಡುವದೇನಂದರೆ, ೧೬ನೇ ಆಸನದಲ್ಲಿ ಮಾಡಲ್ಪಟ್ಟ ನಮ್ಮ ಸಹಿಗಳು ಈ ನಮ್ಮ ಕಬೂಲಾಯತಿಯ ಪುರಾವೆಯಾಗಿರುತ್ತವೆ.

**ಒತ್ತೆಯ ಕಬೂಲಾಯಿತು (ಸಾಲ ತೆಗೆದುಕೊಳ್ಳುವವರು ಇಟ್ಟಿರುವ ಒತ್ತೆಗಳ ಸಂಬಂಧದಿಂದ).**

ನಮ್ಮ—ಅಂದರೆ ಸಾಲ ತಕ್ಕೊಂಡವರ—ಪೈಕಿ ಯಾರ್ಯಾರು ೧೩ನೇ ಆಸನದಲ್ಲಿ ತಮ್ಮ ಸಹಿಗಳನ್ನು ಮಾಡಿರುತ್ತಾರೋ ಅಂಥ ಪ್ರತಿಯೊಬ್ಬನು ಅವನಿಗೆ ಈಗ ಕೊಡಲ್ಪಟ್ಟ ಸಾಲವನ್ನು / ತಕಾವಿಯ ಬಾಬತಿನಲ್ಲಿ ಅವನ ಮೇಲೆ ಬಾಕಿಯಾದ ಒಟ್ಟು ರಕಮುಗಳನ್ನು ಸೆಕ್ರೆಟರಿ ಆಫ್ ಸ್ಟೇಟರವರಿಗೆ ಹಿಂತಿರಿಗಿ ಕೊಡಲಿಕ್ಕೆ ಇದರ ಮೇಲಿಂದ ಕಬೂಲ ಮಾಡುತ್ತಾನೆ, ಮತ್ತು ಅದರ / ಅವುಗಳ ಮೊಬದಲಿಯಾಗಿ ಮತ್ತು ಅದನ್ನು / ಅವುಗಳನ್ನು ಯೋಗ್ಯರೀತಿಯಿಂದ ಹಿಂತಿರಿಗಿ ಕೊಡುವ ಸಂಬಂಧದ ಕಾರಣವೆಂದು ಇಂಥ ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನು, ೧೧ನೇ ಆಸನದಲ್ಲಿ ಅವನ ಹೆಸರಿನ ಎದುರಿಗೆ ನಿರ್ದಿಷ್ಟ ಮಾಡಿದ ಭೂಮಿಗಳನ್ನು, ಅಂದರೆ ಯಾವ ಭೂಮಿಗಳ ಮೇಲೆ ಅವನಿಗಿರುವ ಹಿತಸಂಬಂಧವು ೧೨ನೇ ಆಸನದಲ್ಲಿ ನಿರ್ದಿಷ್ಟ ಮಾಡಲ್ಪಟ್ಟದೆಯೋ ಆ ಭೂಮಿಗಳನ್ನು ಸೆಕ್ರೆಟರಿ ಆಫ್ ಸ್ಟೇಟರವರಿಗೆ ಇದರ ಮೂಲಕ ಒತ್ತೆಗೆ ಕೊಡುತ್ತಾನೆ.

ಮತ್ತು ಸದರಿ ಹಣದ ಯಾವದಾದರೂ ಭಾಗವನ್ನು ಕೊಡುವ ಬಗ್ಗೆ ಮೇಲಿನ ಲೇಖೀ ಹುಕುಮಿನಲ್ಲಿ ಅಥವಾ ಆ ಹುಕುಮಿನನ್ವಯ ಠರಾಯಿಸಿದ ಯಾವದಾದರೂ ತಾರೀಖಿನ ದಿನ ಆ ಭಾಗವನ್ನು ಕೊಡಲಿಕ್ಕೆ ಅವನು ತಪ್ಪಿದರೆ, ಸೆಕ್ರೆಟರಿ ಆಫ್ ಸ್ಟೇಟ ರವರು ಸದರಿ ಭೂಮಿಗಳನ್ನು ಮಾರಿಸಲಿಕ್ಕೆ ಮತ್ತು ಮಾರಾಟದ ವೇಳೆಯಲ್ಲಿ ಅವನ ಮೇಲೆ ಬಾಕಿಯಾದ ಎಲ್ಲ ರಕಮುಗಳನ್ನು ತುಂಬಿಸಿ ಕೊಡುವದಕ್ಕೆ ಸದರಿ ಮಾರಾಟದ ಉತ್ಪನ್ನವನ್ನು ಉಪಯೋಗಿಸಲಿಕ್ಕೆ ಮುಖ್ತ್ಯಾರರಾಗುತ್ತಾರೆಂದು ಇಂಥ ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನು ಇದರ ಮೇಲಿಂದ ಕಬೂಲ ಮಾಡುತ್ತಾನೆ;

ಮತ್ತು ಅವನು, ಅಂದರೆ, ಸಾಲ ತೆಗೆದುಕೊಳ್ಳುವವನು ಮತ್ತು ಇಂಥ ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನು ಇನ್ನು ಕಬೂಲ ಮಾಡುವದೇನಂದರೆ, ಸದರಿ ಭೂಮಿಗಳನ್ನು, ಈ ಕೆಳಗಿನ ಯಾವದಾದರೂ ಪ್ರಸಂಗದಲ್ಲಿ, ಸನ್ ೧೮೮೨ನೇ ಇಸವಿಯ ಆಸ್ತಿಯನ್ನು ತಬದೀಲು ಮಾಡಿಕೊಡುವ ವಿಷಯದ ಆಕ್ಟಿನ ೬೯ನೇ ಕಲಮಿನನ್ವಯ ಕೋರ್ಟಿನ ಮುಖಾಂತರವಲ್ಲದೆ ಮಾರಿಸಲಿಕ್ಕೆ ಸೆಕ್ರೆಟರಿ ಆಫ್ ಸ್ಟೇಟರವರಿಗೆ ಅಧಿಕಾರವಿದೆ; ಅಂದರೆ:—

(ಅ) ಸದರಿ ಹಣವು ಅಥವಾ ಅದರ [illegible] ಕೊಡತಕ್ಕದ್ದಾಗಿದ್ದು ಮತ್ತು ಅದನ್ನು ಕೊಡಬೇಕೆಂದು [illegible] ನೋಟೀಸು ಸದರೀ ಸಾಲ ತೆಗೆದುಕೊಳ್ಳುವವನ ಮೇಲೆ ಜಾರಿಮಾಡಲ್ಪಟ್ಟು, ಅವನು ಆ ನೋಟೀಸು ಬಜಾಯಿಸಲ್ಪಟ್ಟ ನಂತರ ಮೂರು ತಿಂಗಳ ವರೆಗೆ ಸದರಿ ರಕಮನ್ನು ಕೊಡದಿದ್ದಾಗ, ಅಥವಾ

(ಬ) ಸದರಿ ಹುಕುಮಿನಲ್ಲಿ ಹೇಳಿದ ಸಾಲದ/ಸಾಲಗಳ ಮೇಲಿನ ಬಡ್ಡಿಯು ಪ್ರತಿ ಐನೂರು ರೂಪಾಯಿಗಿಂತ (ರೂ. ೫೦೦) ಹೆಚ್ಚಿನದನ್ನು, [illegible] ಬಾಕಿ ಇದ್ದು, ಅದು ಕೊಡತಕ್ಕದ್ದಾದ ನಂತರ [illegible] ಕೊಡಲ್ಪಡದಿದ್ದಾಗ.

ಮತ್ತು ಇಂಥ ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನು ಇದರ ಮೇಲಿಂದ ಕೊನೆಗೆ ಕಬೂಲ ಮಾಡಿ [illegible] ಬರೆಯಲ್ಪಟ್ಟ ಅವನ ಸಹಿಯು ಈ ಕರಾರು [illegible] ಪ್ರಮಾಣವಾಗಿರುತ್ತದೆ.

*   *   *   *

**ಒತ್ತೆಯ ಕಬೂಲಾಯತು (ಸಾಲ ತೆಗೆದುಕೊಳ್ಳುವವರ ಹೊರತು ಬೇರೆ ಮನುಷ್ಯರು ಕೊಟ್ಟಿರುವ ಒತ್ತೆಗೆ ಸಂಬಂಧದಿಂದ).**

ನಮ್ಮ ಪೈಕಿ, ಇಂಥ [illegible] ಪ್ರತಿ [illegible] ಕೆಳಗೆ [illegible] ಮಾಡುತ್ತೇವೆ:—

ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನಿಗೆ (ಅವನ ಹೆಸರಿನ ಎದುರಿಗೆ ಪ್ರತಿಯೊಬ್ಬ ಒತ್ತೆ ಇಡುವವನು ತನ್ನ ಸಹಿಯನ್ನು ಹಾಕಿರುತ್ತಾನೆ ಮತ್ತು ಈ ಕಬೂಲು

ಯತಿನಲ್ಲಿ ಮುಂದೆ ಇವನಿಗೆ ಸದರಿ ಸಾಲ ತೆಗೆದುಕೊಳ್ಳುವವನು ಎಂದು ಕರೆದಿದೆ) ಸಾಲವಾಗಿ ಕೊಟ್ಟ ಹಣದ ಮೊಬದಲೆಯಾಗಿ ಮತ್ತು ಆ ಹಣವು ಯೋಗ್ಯರೀತಿಯಿಂದ ಹಿಂತಿರಿಗಿ ಕೊಡಲ್ಪಡುವ ಸಂಬಂಧದ ತಾರಣವೆಂದು, ಅಂಥ ಪ್ರತಿಯೊಬ್ಬ ಒತ್ತೆ ಇಡುವವನು, ಕೆಳಗೆ ನಿರ್ದಿಷ್ಟ ಮಾಡಲ್ಪಟ್ಟ ಭೂಮಿಗಳನ್ನು ಅ [ಇವುಗಳ ಮೇಲೆ ಯಾವವಾದರೂ ಭಾರಗಳಿಲ್ಲ ಮತ್ತು ಇವುಗಳ ಮೇಲೆ ಸದರಿ ಪ್ರತಿಯೊಬ್ಬ ಒತ್ತೆ ಇಡುವವನಿಗೆ ಪೂರ್ಣ ಹಕ್ಕಿರುತ್ತದೆ] ಅ ಸೆಕ್ರೆಟರಿ ಆಫ್ ಸ್ಟೇಟರವರಿಗೆ ಇದರ ಮೂಲಕ ಒತ್ತೆಗೆ ಕೊಡುತ್ತಾನೆ;

ಮತ್ತು ಸದರಿ ಹಣದ ಯಾವದಾದರೂ ಭಾಗವನ್ನು ಕೊಡುವ ಬಗ್ಗೆ ಮೇಲಿನ ಲೇಖೀ ಹುಕುಮಿನಲ್ಲಿ ಅಥವಾ ಆ ಹುಕುಮಿನನ್ವಯ ಠರಾಯಿಸಿದ ಯಾವದಾದರೂ ತಾರೀಖಿನ ದಿನ ಆ ಭಾಗವನ್ನು ಸದರಿ ಸಾಲ ತೆಗೆದುಕೊಳ್ಳುವವನು ಕೊಡದಿದ್ದರೆ, ಆ ಪ್ರಕಾರ ಕೊಡದಿದ್ದ ರಕಮನ್ನು ಸೆಕ್ರೆಟರಿ ಆಫ್ ಸ್ಟೇಟರವರಿಗೆ ಕೊಡಲಿಕ್ಕೆ ಇಂಥ ಪ್ರತಿಯೊಬ್ಬ ಒತ್ತೆ ಇಡುವವನು ಇದರ ಮೇಲಿಂದ ಕಬೂಲ ಮಾಡುತ್ತಾನೆ; ಮತ್ತು ಅದಲ್ಲದೆ ಇಂಥ ಯಾವದಾದರೂ ರಕಮು ತನ್ನಿಂದ ಕೊಡಲ್ಪಡದಿದ್ದರೆ, ಸೆಕ್ರೆಟರಿ ಆಫ್ ಸ್ಟೇಟರವರು ಸದರಿ ಭೂಮಿಗಳನ್ನು ಮಾರಿಸಲಿಕ್ಕೆ ಮತ್ತು ಆ ಪ್ರಕಾರ ಕೊಡಲ್ಪಡದಿದ್ದ ರಕಮನ್ನು ತುಂಬಿಸಿಕೊಡುವದರಲ್ಲಿ ಸದರಿ ಮಾರಾಟದ ಉತ್ಪನ್ನವನ್ನು ಉಪಯೋಗಿಸಲಿಕ್ಕೆ ಮುಖ್ತಿಯಾರರಿರುತ್ತಾರೆಂದು ಇಂಥ ಪ್ರತಿಯೊಬ್ಬ ಒತ್ತೆ ಇಡುವವನು ಕಬೂಲ ಮಾಡುತ್ತಾನೆ, ಮತ್ತು ಇಂಥ ಪ್ರತಿಯೊಬ್ಬ ಒತ್ತೆ ಇಡುವವನು ಇನ್ನೂ ಕಬೂಲ ಮಾಡುವದೇನೆಂದರೆ, ಸದರಿ ಭೂಮಿಗಳನ್ನು, ಈ ಕೆಳಗಿನ ಯಾವದಾದರೂ ಬಾಬತಿನಲ್ಲಿ, ಸನ್ ೧೮೮೨ನೇ ಇಸವಿಯ ಆಸ್ತಿಯನ್ನು ತಬದಿಲ ಮಾಡಿಕೊಡುವ ವಿಷಯದ ಆಕ್ಟಿನ ೬೯ನೇ ಕಲಮಿನನ್ವಯ ಕೋರ್ಟಿನ ಮುಖಾಂತರ ವಲ್ಲದೆ ಮಾರಿಸಲಿಕ್ಕೆ ಸೆಕ್ರೆಟರಿ ಆಫ್ ಸ್ಟೇಟರವರಿಗೆ ಅಧಿಕಾರವಿದೆ, ಅಂದರೆ:—

(ಅ) ಸದರಿ ಹಣವು ಅಥವಾ ಅದರ ಯಾವದಾದರೂ ಭಾಗವು ಸಲ್ಲತಕ್ಕದ್ದಾಗಿದ್ದು ಮತ್ತು ಅದನ್ನು ಕೊಡಬೇಕೆಂಬ ವಿಷಯದ ಲೇಖೀ ನೋಟೀಸು ಸದರಿ ಒತ್ತೆ ಇಡುವವನ ಮೇಲೆ ಬಜಾಯಿಸಲ್ಪಟ್ಟದ್ದು, ಅವನು ಆ ನೋಟೀಸು ಬಜಾಯಿಸಲ್ಪಟ್ಟ ನಂತರ ೩ ತಿಂಗಳ ವರೆಗೆ ಸದರಿ ರಕಮನ್ನು ಕೊಡದಿದ್ದಾಗ, ಅಥವಾ

(ಬ) ಸದರಿ ಹುಕುಮಿನಲ್ಲಿ ಹೇಳಿದ ಸಾಲದ / ಸಾಲಗಳ ಮೇಲಿನ ಬಡ್ಡಿಯ ಪೈಕಿ ಐನೂರು ರೂಪಾಯಿಗಿಂತ (ರೂ. ೫೦೦) ಕಡಿಮೆಯಲ್ಲದಷ್ಟು ರಕಮು ಬಾಕಿ ಇದ್ದು, ಅದು ಸಲ್ಲತಕ್ಕದ್ದಾದ ನಂತರ ೩ ತಿಂಗಳ ವರೆಗೆ ಕೊಡಲ್ಪಡದಿದ್ದಾಗ.

ಮತ್ತು ಇಂಥ ಪ್ರತಿಯೊಬ್ಬ ಒತ್ತೆ ಇಡುವವನು ಇದರ ಮೇಲಿಂದ ಕೊನೆಗೆ ಕಬೂಲ ಮಾಡಿ ಇಕರಾರು ಮಾಡುವದೇನೆಂದರೆ, ಇದರಲ್ಲಿ ೧೫ನೇ ಆಸನದಲ್ಲಿ

---

[ಅ—ಅ] ಸಾಲ ತೆಗೆದುಕೊಳ್ಳುವವನು ಅಥವಾ ಒತ್ತೆ ಹಾಕಿದವನು ಪೂರ್ಣ ಮಾಲಕನಲ್ಲದಿದ್ದಾಗ ಅಥವಾ ಆಸ್ತಿಯ ಮೇಲೆ ಮುಂಚಿನ ಬೋಜಾಗಳು ಇದ್ದಾಗ, ಕಂಸದೊಳಗಿನ ಶಬ್ದಗಳ ಬದಲಾಗಿ ಅವನ ಹಿತಸಂಬಂಧದ ಪ್ರಕಾರವನ್ನು ಅಥವಾ ಇಂಥ ಬೋಜಾಗಳ ತಪಶೀಲನ್ನು ದಾಖಲ ಮಾಡಬೇಕು.

**ಮಾಡಲ್ಪಟ್ಟ ಅವನ ಸಹಿಯು ಈ ಅವನ ಕಬೂಲಾಯತಿಯ ಪುರಾವೆಯಾಗಿರುತ್ತದೆ**

<u>ಸಾಕ್ಷಿ ಹಾಕುವ ಸಾಕ್ಷಿದಾರರ ಇಕರಾರು.</u>

೧೪ನೇ ಮತ್ತು ೧೯ನೇ ಆಸನಗಳಲ್ಲಿ ಸಾಕ್ಷಿ ಹಾಕುವ ಸಾಕ್ಷಿದಾರರೆಂದು ಸಹಿಗಳನ್ನು ಮಾಡಿದವರಾದ <u>ನಾವು</u> ಮತ್ತು ನಮ್ಮ ಪೈಕಿ ಪ್ರತಿಯೊಬ್ಬನು ಇದರ ಮೇಲಿಂದ ಇಕರಾರು ಮಾಡುವದೇನೆಂದರೆ, ಹೀಗೆ ಮಾಡುವದರಿಂದ, ಪ್ರಸಂಗದ ಪ್ರಕಾರ, ೩ನೇ ಅಥವಾ ೧೮ನೇ ಆಸನದಲ್ಲಿ ನಮೂದ ಮಾಡಿದ ಮನುಷ್ಯರು ೧೧ನೇ ಅಥವಾ ೧೭ನೇ ಆಸನದಲ್ಲಿ ವರ್ಣನೆ ಮಾಡಿದ ಭೂಮಿಗಳನ್ನು ಒತ್ತೆ ಇಟ್ಟಿರುತ್ತಾರೆಂಬ ಬಗ್ಗೆ ನಾವು ಸಾಕ್ಷಿದಾರರಾಗಿದ್ದೇವೆ ಮತ್ತು ಇಂಥ ಪ್ರತಿಯೊಬ್ಬನು ಸಾಕ್ಷಿದಾರನಾಗಿದ್ದಾನೆ.

ಟೀಪು.—ಈ ಯಾವತ್ತು ಬಾಂಡಿನ ನಮೂನೆಗಳಲ್ಲಿ, "ಸಹಿ" ಹಾಗೂ ಅದರ ರೂಪಾಂತರಗಳ ಅರ್ಥವು, "ಹೆಬ್ಬೊಟ್ಟಿನ ಮುದ್ರೆ ಮಾಡೋಣ" ಎಂದಾಗುತ್ತದೆ ಹಾಗೂ ಅದರಲ್ಲಿ "ಹೆಬ್ಬೊಟ್ಟಿನ ಮುದ್ರೆ ಮಾಡೋಣ" ಎಂಬದು ಸೇರುತ್ತದೆ.

ಅ

| ೧ | ೨ | ೩ | | | | | |
|---|---|---|---|---|---|---|---|
| ಅನು ಕ್ರಮ ನಂಬರು. | ಸಾಲ ತೆಗೆದು ಕೊಳ್ಳುವ ವನ ಹೆಸರು ಮತ್ತು ಖಾತೆಯ ನಂಬರು. | ಮುಂಚಿನ ಸಾಲಗಳ ತಪಶೀಲು. | | | | | |
| | | ಅ | ಬ | ಕ | ಡ | ಇ | ಫ |
| | | ತಾರೀಖು. | ರಕಮು. | ಬಾಕಿ ಇದ್ದ ಅಸಲು. | ಬಡ್ಡಿಯ ದರವು. | ಬಾಕಿ ಇದ್ದ ಬಡ್ಡಿಯು. | ಒಟ್ಟು ಬಾಕಿ. |
| | | | | | | | |

ಪರಿಶಿಷ್ಟವು.

| ೪ | ೫ | | | | | |
|---|---|---|---|---|---|---|
| ಈಗಿನ ಸಾಲದ ಅಸಲು ರಕಮು. | ಯಾವ ಒಟ್ಟುಗೂಡಿಸಿದ ಕಂತುಗಳಿಂದ (ಇವುಗಳಲ್ಲಿ ಮುಂಚಿನ ಮತ್ತು ಈಗಿನ ಸಾಲಗಳ ಸಂಬಂಧದ ಅಸಲು, ಬಡ್ಡಿ ಮತ್ತು ಖರ್ಚು ಇವುಗಳ ಸಮಾವೇಶವಾಗುತ್ತದೆ.) ಸಾಲವನ್ನು ತೀರಿಸತಕ್ಕದ್ದೋ ಆ ಕಂತುಗಳು ಮತ್ತು ಅವುಗಳನ್ನು ಕೊಡುವ ತಾರೀಖುಗಳು. | | | | | |
| | ೧ನೇ | | ೨ನೇ | | ೩ನೇ | |
| | ರಕಮು. | ತಾರೀಖು. | ರಕಮು. | ತಾರೀಖು. | ರಕಮು. | ತಾರೀಖು. |
| | | | | | | |

ಅ ಪರಿಶಿಷ್ಟವು—

| ೬ | | | | ೭(ಅ) | ೮ | | |
|---|---|---|---|---|---|---|---|
| ಯಾವ ಭೂಮಿಯ ಹಿತದ ಸಲುವಾಗಿ ಸಾಲವನ್ನು ಕೊಟ್ಟದೆಯೋ ಆ ಭೂಮಿಯ ತಪಶೀಲು. | | | | ಇವರ ಮೇಲಿಂವ ಸಾಲಕ್ಕೆ ಸಮ್ಮತಿ ಕೊಟ್ಟ ಸದರಿ ಭೂಮಿಯನ್ನು ಸುಧಾರಿಸುವದಕ್ಕೆ ಹಕ್ಕುಳ್ಳ ಮನುಷ್ಯನ ಸಹಿ. | ಸಾಲ ತೆಗೆದುಕೊಳ್ಳುವವರ ವಹಿವಾಟಿನಲ್ಲಿರುವ ಭೂಮಿಯ ತಪಶೀಲುಗಳು [೬ನೇ ಆಸನವು ಲಾಗೂ ಆಗದಿರುವ ಪ್ರಸಂಗಗಳಲ್ಲಿ ದಾಖಲ ಮಾಡತಕ್ಕದ್ದು]. | | |
| ಸರ್ವೆ ನಂಬರು. | ಕ್ಷೇತ್ರ ಫಲ. | ಆಕಾರ. | ಶರಾ. | | ಸರ್ವೆ ನಂಬರು. | ಕ್ಷೇತ್ರ ಫಲ. | ಆಕಾರ. |
| | | | | | | | |

(ಅ) ಹೊಲ ಮಾಡುವವರ ಸಾಲಗಳ ಆಕ್ಟಿನ ಪ್ರಕಾರವಿದ್ದಲ್ಲಿ ಇದನ್ನು ಬಿಟ್ಟು

| ೧೨ | ೧೩ | ೧೪ | ೧೫ | ೧೬ |
|---|---|---|---|---|
| ೧೧ನೇ ಆಸನದೊಳಗಿನ ಭೂಮಿಯ ಮೇಲಿನ ಬೋಜಾಗಳ [ಅಥವಾ ಬೋಜಾಗಳಿಲ್ಲವೆಂಬ ವಿಷಯದ] ನಿರೂಪಣವು ಮತ್ತು ಆ ಭೂಮಿಯ ಸಂಬಂಧದಿಂದ ಸಾಲ ತೆಗೆದುಕೊಳ್ಳುವವನಿಗಿರುವ ಹಿತಸಂಬಂಧದ ಪ್ರಮಾಣವು. | ೧೧ನೇ ಮತ್ತು ೧೨ನೇ ಆಸನಗಳೊಳಗಿನ ನೋಂದುಗಳು ಸರಿಯಾಗಿರುತ್ತವೆಂದು ತೋರಿಸುವ ಬಗ್ಗೆ ಮತ್ತು ಒತ್ತೆಯ ಪುರಾವೆಯ ಬಗ್ಗೆ ಸಾಲ ತೆಗೆದುಕೊಳ್ಳುವವನು ಮಾಡಿದ ಸಹಿಯು. | ಸಾಕ್ಷಿ ಹಾಕುವ ಸಾಕ್ಷಿದಾರರ ಸಹಿಗಳು. | ಹುಕುಮಿನ ಶರ್ತುಗಳಿಗೆ ತನ್ನ ಸಮ್ಮತಿಯನ್ನು ತೋರಿಸುವ ಬಗ್ಗೆ ಸಾಲ ತೆಗೆದುಕೊಳ್ಳುವವನು ಮಾಡಿದ ಸಹಿಯು. | ಜಾಮೀನುದಾರರ ಸಹಿಗಳು. |
| | | | | |

[ಮುಂದೆಸಾಗಿದ್ದು].

| ೧೭ | | | | ೧೮ |
|---|---|---|---|---|
| ಸಾಲ ತೆಗೆದುಕೊಳ್ಳುವವನ ಹೊರ್ತು ಇತರ ಮನುಷ್ಯರು ಒತ್ತೆ ಇಟ್ಟ ಭೂಮಿಯು. | | | | ೧೭ನೇ ಅಸನದಲ್ಲಿ ದಾಖಲು ಮಾಡಿದ ಭೂಮಿಯನ್ನು ಒತ್ತೆ ಇಡುವವರ ಹೆಸರು ಮುಂತಾದ್ದು, ಮತ್ತು ಸಹಿಗಳು. |
| ಸರ್ವೆ ನಂಬರು. | ಕ್ಷೇತ್ರಫಲ. | ಅಕಾರ. | ಶರಾ. | |
| | | | | |

# ಅ ಪರಿಶಿಷ್ಟವು—[ಸಂಪೂರ್ಣ].

| ೧೯ | ೨೦ | | | | | |
|---|---|---|---|---|---|---|
| ಸಾಕ್ಷಿ ಹಾಕುವ ಸಾಕ್ಷಿದಾರರ ಸಹಿಗಳು. | ಸಾಲ ತೆಗೆದುಕೊಳ್ಳುವವರಿಗೆ ಸದರಿ ಸಾಲಗಳನ್ನು ಯಾವ ಕಂತುಗಳಿಂದ ಕೊಡತಕ್ಕದ್ದೋ ಆ ಕಂತುಗಳು. | | | | | |
| | ೧ನೇ | | ೨ನೇ | | ೩ನೇ | |
| | ರಕಮು. | ತಾರೀಖು. | ರಕಮು. | ತಾರೀಖು. | ರಕಮು. | ತಾರೀಖು. |
| | | | | | | |

ಬ ಪರಿಶಿಷ್ಟ

| | ಕೊಟ್ಟ ಹಣದ | | | | | |
|---|---|---|---|---|---|---|
| ಅನು ಕ್ರಮ ನಂಬರು. | ಹಣವು ಯಾವ ಮನುಷ್ಯನಿಗೆ ಕೊಡಲ್ಪಟ್ಟಿದೆಯೋ ಆ ಮನುಷ್ಯನ ಹೆಸರು. | ಮೊದಲನೇ ಸಾರೆ ಹಣ ಕೊಟ್ಟ ತಾರೀಖು. | ರಕಮು. | ಹಣ ತೆಗೆದುಕೊಳ್ಳುವ ಮನುಷ್ಯನ ಸಹಿ. | ಹಣ ಕೊಡುವ ಅಮಲದಾರನ ಸಹಿ. | ಎರಡನೇ ಸಾರೆ ಹಣ ಕೊಟ್ಟ ತಾರೀಖು. |
| ೧ | ೨ | ೩ | ೪ | ೫ | ೬ | ೭ |
| | | | | | | |

* ಟೀಪು.—ತಗಾಯಿ ಸಾಲವನ್ನು ಹುಲ್ಲಿನ ರೂಪದಿಂದ (ಅಥವಾ ಇತರ
ಈ ಆಸನಗಳು ಸಾಕಾಗುವದಿಲ್ಲ; ಬಿಳೇ ಕಾಗದವನ್ನು ಇದಕ್ಕೆ ಅಂಟಿಸಿ ಆಸನ

ಈ ಹೊತ್ತು ತಾರೀಖು ನೇ ಸನ್ ೧೯ ನೇ ಇಸವಿ.

ವ.

ತಪಶೀಲು.

| ರಕಮು. | ಹಣ ತೆಗೆದುಕೊಳ್ಳುವ ಮನುಷ್ಯನ ಸಹಿ. | ಹಣ ಕೊಡುವ ಅಮಲದಾರನ ಸಹಿ. | ಪೂರಾನೇ ಸಾಲಿ [illegible] ತಾರೀಖು. | ರಕಮು. | ಹಣ ತೆಗೆದುಕೊಳ್ಳುವ ಮನುಷ್ಯನ ಸಹಿ. | ಹಣ ಕೊಡುವ ಅಮಲದಾರನ ಸಹಿ. |
|---|---|---|---|---|---|---|
| ೮ | ೯ | ೧೦ | ೧೧ | ೧೨ | ೧೩ | ೧೪ |
| | | | | | | |

ಜೀನಸಿನ ರೂಪದಿಂದ) ಪ್ರತಿ ವಾರದ ಅಥವಾ ಮಾಸಿಕ ಕಂತುಗಳಿಂದ ಕೊಟ್ಟಾಗ, ಗಳನ್ನು ಬೆಳಿಸಬೇಕು.

[ಸಾಲವನ್ನು ಮಂಜೂರ ಮಾಡುವವನು ಪ್ರಾಂತ ಅಮಲದಾರನಾಗಿದ್ದರೆ ಸಾಲ ಮಂಜೂರ ಮಾಡುವವನ ಅಥವಾ ಮಾಮಲೇದಾರನ ಸಹಿ.]

## ಕೆಲಸವನ್ನು ಠರಾಯಿಸಿದ ಮುದ್ದತಿನೊಳಗೆ ಮಾಡಲಿಕ್ಕೆ ತಪ್ಪಿದ್ದರ ಸಲುವಾಗಿ ಶಿಕ್ಷೆ.

೧೩. ಯಾವ ಶರ್ತುಗಳ ಮೇರೆಗೆ ಪ್ರತಿಯೊಂದು ಸಾಲವು ಕೊಡಲ್ಪಡುವವೋ ಆ ಶರ್ತುಗಳಲ್ಲಿ ಈ ಕೆಳಗಿನವು ಸೇರುತ್ತವೆ, ಅಂದರೆ, ಸಾಲ ತೆಗೆದುಕೊಳ್ಳುವವನು ಠರಾಯಿಸಿದ ಮುದ್ದತಿನೊಳಗೆ ಯಾವ ಕೆಲಸದ ಸಲುವಾಗಿ ಅಥವಾ ಅದರ ಭಾಗದ ಸಲುವಾಗಿ ಸಾಲವನ್ನು ಅಥವಾ ಅದರ ಯಾವದೊಂದು ಕಂತನ್ನು ತಕ್ಕೊಂಡಿರುವನೋ ಅದನ್ನು ಮುಗಿಸಲಿಕ್ಕೆ(೨೧) ತಪ್ಪಿದರೆ,(೨೦)ಸಾಲ ಕೊಡುವವನು ಸಂಕ್ಷಿಪ್ತ ರೀತಿಯಿಂದ ಕೆಲಸ ನಡಿಸಿ ವಸೂಲ ಮಾಡುವ ಬಗ್ಗೆ ಹುಕುಮು ಮಾಡಬಹುದು; ಆದರೆ ಈ ಶರ್ತನ್ನು ಅಮಲಿನಲ್ಲಿ ತರುವವರ ಬದಲಾಗಿ ಅವನು, ಸದರಿ ಕೆಲಸವನ್ನು ಮುದ್ದತಿನೊಳಗಾಗಿ ಮುಗಿಸಲಿಕ್ಕೆ ತಪ್ಪಿದ್ದರ ಬಗ್ಗೆ ವಾಜವಿ ಕಾರಣವು ತೋರಿಸಿ ಕೊಡಲ್ಪಟ್ಟರೆ, ಅದನ್ನು ಪೂರ್ತಿ ಮಾಡುವದರ ಸಲುವಾಗಿ ಗೊತ್ತು ಮಾಡಿದ ಮುದ್ದತನ್ನು ಬೆಳಿಸಬಹುದು; ಮತ್ತು ಹೀಗೆ ಬೆಳಿಸಲಾದ ಮುದ್ದತಿನಲ್ಲಿ ಕೆಲಸವನ್ನು ಅಥವಾ ಅದರ ಭಾಗವನ್ನು ಮುಗಿಸಲಿಕ್ಕೆ ಸಾಲ ತೆಗೆದುಕೊಳ್ಳುವವನು ತಪ್ಪಿದರೆ, ಸಾಲ ಕೊಡುವವನು ನಿರ್ಣಯಿಸಬಹುದಾದಂತೆ ಸಾಲದ ಯಾವತ್ತು ರಕಮನ್ನು ಅಥವಾ ಅಪವ್ಯಯ ಮಾಡಲ್ಪಟ್ಟ ಅದರ ಭಾಗವನ್ನು ಅದರ ಮೇಲಿನ ಸರಳ ಬಡ್ಡಿಯ ಸಹಿತವಾಗಿ ಸಂಕ್ಷಿಪ್ತ ರೀತಿಯಿಂದ ಕೆಲಸ ನಡಿಸಿ ವಸೂಲ ಮಾಡುವದಕ್ಕೆ ತತ್ಕಾಲಕ್ಕೆ ಉಪಾಯಗಳನ್ನು ಕೈಕೊಳ್ಳಬೇಕು.

[೨೦] ಕೆಲಸ ಮುಗಿಸಲಿಕ್ಕೆ ತಪ್ಪೋಣವೆಂದರೆ, ಹಣದ ಅಪವ್ಯಯ ಮಾಡೋಣವೆಂದು ಅವಶ್ಯವಾಗಿ ತಿಳಿಯತಕ್ಕದ್ದಲ್ಲ; ಸದರಿ ಹಣವನ್ನು ಖರ್ಚು ಮಾಡುವದಕ್ಕೆ ಅಥವಾ ಅದರ ಯಾವದೊಂದು ವಾಜವಿ ಭಾಗವನ್ನು ಖರ್ಚು ಮಾಡುವದಕ್ಕೆ ಬುದ್ಧಿಪೂರ್ವಕವಾಗಿ ತಪ್ಪಿದ್ದಾನೆಂದು ನಾವು ಕಂಡುಹಿಡಿಯತಕ್ಕದ್ದು. ಯಾವನೊಬ್ಬ ಸಾಲ ತೆಗೆದುಕೊಳ್ಳುವವನು ಸಾಲದ ಅರ್ಧ ರಕಮನ್ನು ಖರ್ಚು ಮಾಡಿದ ನಂತರ ಸದರಿ ಕೆಲಸವನ್ನು ಮುಗಿಸುವದು ಅಶಕ್ಯವೆಂದು ಅವನಿಗೆ ಕಂಡುಬಂದರೆ, ಸದರಿ ಕೆಲಸವನ್ನು ಬಂದಮಾಡಿ ಉಳಿದ ರಕಮನ್ನು ಹಿಂತಿರಿಗಿ ಕೊಡಬಹುದು. ಹೀಗೆ ಮಾಡಿದರೆ ಹಣದ ದುರುಪಯೋಗ ಮಾಡಿದಂತಾಗಲಿಕ್ಕಿಲ್ಲ (ಎಫ್. ೪೨೦೬—೦೬).

[೨೧] ಭೂಮಿಯ ಸುಧಾರಣೆಯ ಯಾವತ್ತು ಕೆಲಸಗಳು ಶಕ್ಯವಿದ್ದಷ್ಟು ಮೇಲಿನ ದರ್ಜೆಯ ಅಮಲದಾರನಿಂದ ತಪಾಸಿಸಲ್ಪಡುವ ಬಗ್ಗೆ ತಜವೀಜು ಮಾಡುವದು ಜರೂರಿರುತ್ತದೆ. ಮಾಮಲೇದಾರನಿಂದ ಅಥವಾ ಸರ್ಕಲ್ ಇನ್ಸ್‌ಪೆಕ್ಟರನಿಂದ ಈ ಮೊದಲು ತಪಾಸಿಸಲ್ಪಟ್ಟ ಕೆಲಸಗಳನ್ನು ಕೆಲವು ಸಾರೆ ಪ್ರಾಂತ ಆಫೀಸರನು ವಿಶಿಷ್ಟವಾಗಿ ತಪಾಸ ಮಾಡಬೇಕು. ನಿಜವಾಗಿ ಬಹಳೇ ಕೆಲಸವಿದ್ದ ಹೊರ್ತಾಗಿ, ತಪಾಸಣಿಯ ಕೆಲಸವನ್ನು ಸರ್ಕಲ್ ಇನ್ಸ್‌ಪೆಕ್ಟರನ ಕಡೆಗೆನೇ ಬಿಡಬಾರದು.

ತಪಾಸಣಿ ಮಾಡುವ ಬಗ್ಗೆ ಈ ಕೆಳಗಿನದೊಂದು ಒಳ್ಳೇ ವಿಧಾನವಿರುತ್ತದೆ:—

ಸಾಲವನ್ನು ಮಂಜೂರ ಮಾಡಿದ ಕೂಡಲೇ ಸದರಿ "ಪ್ರಕರಣ"ವನ್ನು ತ. ನ. ಖರರೊಂದಿಗೆ ಫೈಲಿನಲ್ಲಿ ಅವರ ಯೋಗ್ಯ ಸ್ಥಳದಲ್ಲಿಡಬೇಕು. ಅದಕ್ಕೆ ಸ್ಪಷ್ಟವಾಗಿ ಕಾಣಿಸುವ ಒಂದು ನಿಶಾನಿಯನ್ನು ಹಚ್ಚಿ, ಆ ನಿಶಾನಿಯಲ್ಲಿ, ಸದರಿ ಕೆಲಸವು ಯಾವ ತಾರೀಖಿನ ಸುಮಾರಿಗೆ ತಪಾಸಿಸಲ್ಪಡಬೇಕೆಂಬದನ್ನು ಬರೆದಿಡಬೇಕು. ಕೆಲವು ಪ್ರಸಂಗಗಳಲ್ಲಿ ಕಂತುಗಳಿಂದ ಮಾಡಲ್ಪಡುವ ಕೆಲಸಗಳನ್ನು ಅನೇಕ ಸಾರೆ ತಪಾಸ ಮಾಡಬೇಕಾಗುತ್ತದೆ. ಪ್ರತಿತಿಂಗಳ ಮೊದಲನೇ ತಾರೀಖಿನ ದಿವಸ ಸದರಿ ತಿಂಗಳಲ್ಲಿ ತಪಾಸಿಸಲ್ಪಡಬೇಕಾದ ಪ್ರಕರಣಗಳನ್ನು ಮುಂದಿಡುವದು ಕಾರಕೂನನ ಕರ್ತವ್ಯವಿರುತ್ತದೆಂದು ಅವನಿಗೆ ಹೇಳಬೇಕು. ಮಾಮಲೇದಾರನು ತಪಾಸಣಿಯ ಬಗ್ಗೆ ವ್ಯವಸ್ಥೆ ಮಾಡಬೇಕು. ಪ್ರಾಂತ ಅಮಲದಾರನು ಮಾಮಲೇದಾರನ ತಾಲೂಕಿನಲ್ಲಿದ್ದರೆ, ಮಾಮಲೇದಾರನು ಪ್ರಕರಣಗಳ ಗಂಟನ್ನು ಅವನ ಕಡೆಗೆ, ಅವನು ತಪಾಸ ಮಾಡಲಿರುವ ಕೆಲಸಗಳನ್ನು ಆರಿಸಿಕೊಳ್ಳುವದರ ಸಲುವಾಗಿ, ಕಳುಹಿಸಬಹುದು. ಉಳಿದವುಗಳ ಪೈಕಿ ಕೆಲವನ್ನು ಅವನು ಸ್ವತಃ ತಪಾಸ ಮಾಡಬೇಕು ಮತ್ತು ಉಳಿದವುಗಳನ್ನು ಅವನ ಅವಲ ಕಾರಕೂನನಿಗೆ ಅಥವಾ ಕೊನೆಗೆ ಸರ್ಕಲ್ ಇನ್ಸ್‌ಪೆಕ್ಟರನಿಗೆ ಒಪ್ಪಿಸಿಕೊಡಬಹುದು.

ತಪಾಸಣಿಗಳು ಮುಗಿದ ನಂತರ, ಬಾವಿ, ಕೆರೆ, ನೀರಿನ ಹರಿ ಮುಂತಾದ ಹೊಸತಾಗಿ ಮುಗಿಸಲ್ಪಟ್ಟ ನೀರಾವರಿಯ ಯಾವತ್ತು ಕೆಲಸಗಳನ್ನು, ಕುಲಕರ್ಣಿಯು ನೀರಿನ ಪುರವಣಿಯ ವಾರ್ಷಿಕ ಪತ್ರಕವನ್ನು ತಯಾರಿಸುವಾಗ ಅವುಗಳ ಕಡೆಗೆ ದುರ್ಲಕ್ಷ್ಯ ಮಾಡದಂತೆ, ನಕಾಶದ ಮೇಲೆ ಗುರ್ತು ಮಾಡಿಡಬೇಕು. ನಕಾಶದಲ್ಲಿಯ ಈ ದಾಖಲೆಗಳಿಂದ, ಅನೇಕ ಅಮಲದಾರರಿಗೆ, ತಗಾಯಿಯಿಂದ ಎಷ್ಟರ ಮಟ್ಟಿಗೆ ಕಲ್ಯಾಣವಾಗಿದೆಂಬದರ ಮಾಹಿತಿ ಮಾಡಿಕೊಡಲಿಕ್ಕೆ ಬರುವದು.

ಪ್ರಾಂತ ಅಮಲದಾರನು ತಾನು ಫಿರತಿ ಮಾಡುವಾಗ ಹಿಂದಿನ ವರ್ಷಗಳಲ್ಲಿ ಮುಗಿಸಲಾಗಿದ್ದ ಕೆಲಸಗಳನ್ನೂ ತಪಾಸಿಸಬೇಕು. ಇತರ ಗ್ರಾಮಗಳಿಗೆ ಅನುಸರಿಸುವದಕ್ಕೆ ಆದರ್ಶವಾಗುವ ಮಟ್ಟಿಗೆ ಅವು ಯಶಸ್ವಿಯಾಗಿರುತ್ತವೆಂದು ಅವನಿಗೆ ಕಂಡುಬರಬಹುದು; ಅಥವಾ, ಕೆಲವು ಕೆಲಸಗಳು ಬಹಳೇ ಕೆಟ್ಟುಹೋಗಿರುವವೆಂದು ಅವನಿಗೆ ಕಂಡುಬರಬಹುದು ಮತ್ತು ಇದರಿಂದ, ಅವನು ಇನ್ನುಮುಂದೆ ಮಾಡಲಿರುವ ಚೌಕಸಿಗಳಿಗೆ ಉಪಯುಕ್ತವಾಗುವ ಅನುಭವವು ಅವನಿಗೆ ದೊರೆಯು

ಬಹುದು, ಅಥವಾ ಕಂತುಗಳನ್ನು ಕಡಿಮೆ ಮಾಡಿ ಸವಲತ್ತನ್ನು ತೋರಿಸಬೇಕೆಂದು ಅವನು ಒಂದು ವೇಳೆ ತಿಳಕೊಳ್ಳಬಹುದು.

ಪ್ರಾಂತ ಅಮಲದಾರನು ತನ್ನ ತಾಬೆಯಲ್ಲಿರುವ ಯಾವತ್ತು ಕೆಲಸಗಳ ಪೈಕಿ ನೂರಕ್ಕೆ ಹತ್ತರಷ್ಟು ಕೆಲಸಗಳನ್ನು ಪರೀಕ್ಷಿಸಬೇಕು, ಅಥವಾ (ಅವು ೨೦ಕ್ಕೆ ಮಿಕ್ಕಿದ್ದರೆ) ಹಂಗಾಮಿನಲ್ಲಿ ಕನಿಷ್ಠ ಪಕ್ಷಕ್ಕೆ ಅವುಗಳ ಪೈಕಿ ೨೦ನ್ನಾದರೂ ಪರೀಕ್ಷಿಸಬೇಕು ಎಂಬ ನಿಯುಮವಿರುತ್ತದೆ (ಎಫ್. ೪೨೦೬—೦೬, ೨೧೯೫—೦೭, ೧೦೩೦೭—೦೭, ೨೯೨೭—೦೮).

ಪೂರ್ಣವಾಗಿ ಮುಗಿದ ಅಥವಾ ಅಂಶತಃ ಮುಗಿದ ಕೆಲಸಗಳ ಈ ತಪಾಸಣೆಗಳನ್ನು ಮಾಡುವಾಗ, ಮುಂದೆ ಪರೀಕ್ಷೆ ಮಾಡಲಿರುವ ಯಾವನೇ ಅಮಲದಾರನಿಗೆ ಅಥವಾ ಆ ನಂತರದ ಯಾವನೇ ಇನ್ಸ್‌ಪೆಕ್ಟರನು ಸದರಿ ಸಂಗತಿಗಳನ್ನು ಸರಿಯಾಗಿ ರಿಪೋರ್ಟು ಮಾಡಲಿಕ್ಕೆ ಸಮರ್ಥನಾಗುವಂತೆ ಅಳತೆಗಳನ್ನು ನಮೂದು ಮಾಡಿಡುವದೂ, ಒಂದು ನಕಾಶವನ್ನು ತಯಾರ ಮಾಡಿಡುವದೂ ಅತಿ ಅವಶ್ಯವು. ನಕಾಶವಿಲ್ಲದೆ ಅಥವಾ ಅಳತೆಗಳಿಲ್ಲದೆ ಬರೇ ಕಣ್ಣಿನಿಂದ ನೋಡಿ ಮಾಡಿದ ಅನೇಕ ಕೆಲಸಗಳ ತಪಾಸಣೆಯು ವ್ಯರ್ಥವು. ತಪಾಸಣೆಯನ್ನು ಮಾಡುವಾಗ ಶಿಥಿಲತೆಯನ್ನು ತೋರಿಸಿದರೆ, ಅರ್ಜಿಗಳಲ್ಲಿ ಅವಿಚಾರಕ್ಕೂ ಮೋಸಕ್ಕೂ ಎಡೆದೊರೆಯುತ್ತದೆಂಬದಕ್ಕೇನೂ ಸಂದೇಹವಿಲ್ಲ, ಮತ್ತು ಇದರ ಮೂಲಕ, ಈ ಸಾಲಗಳಲ್ಲಿ ತೊಡಗಿದ ಸರಕಾರೀ ಭಂಡವಾಳಕ್ಕೆ ಬಹಳ ಅಪಾಯತಟ್ಟುವ ಸಂಭವವಿರುತ್ತದೆ.

## ಲೇಖೀ ಹುಕುಮಿನ ನಕಲನ್ನು ಹಾಗೂ ಸದರಿ ಹುಕುಮಿನ ಜೊತೆಗಿದ್ದ ಕರಾರಿನ ನಕಲನ್ನು ಸಾಲ ತೆಗೆದುಕೊಳ್ಳುವವನಿಗೆ ಕೊಡಬೇಕು.

೧೪. ನಿಜವಾದ ನಕಲಿರುತ್ತದೆಂದು ಸಾಲ ಮಂಜೂರ ಮಾಡುವವನಿಂದ ದಾಖಲೆ ಕೊಡಲ್ಪಟ್ಟ ಹುಕುಮಿನ ನಕಲನ್ನು, ಹಾಗೂ ಸದರಿ ಹುಕುಮಿನ ಜೊತೆಗಿದ್ದ ಕರಾರಿನ ನಕಲನ್ನು, ಹಣವನ್ನು ಕೊಡುವಾಗ ಅಥವಾ ಹಣವನ್ನು ಕೊಟ್ಟ ಕೂಡಲೇ ಸಾಲ ತೆಗೆದುಕೊಳ್ಳುವವನು ಅಥವಾ ಸಾಲ ತೆಗೆದುಕೊಳ್ಳುವವರು ಬೇಡಿದರೆ ಅದನ್ನು ಅವನಿಗೆ ಅಥವಾ ಅವರಿಗೆ ಕೊಡಬೇಕು.

## ಯಾವದೇ ಶರ್ತನ್ನು ಉಲ್ಲಂಘಿಸಿದ ಪ್ರಸಂಗದಲ್ಲಿ ಅನಂತರದ ಕಂತುಗಳನ್ನು ತಹಕೂಬಿಡಲಾಗುವದು.

೧೫. ಸಾಲ ತೆಗೆದುಕೊಳ್ಳುವವನಿಗೆ ಯಾವದೊಂದು ಸಾಲವು ಕಂತುಗಳಿಂದ ಕೊಡಲ್ಪಡುತ್ತಿರುವಾಗ, ಸದರಿ ಹುಕುಮಿನ ಹಾಗೂ ಅದರ ಜೊತೆಗಿದ್ದ ಕರಾರಿನ ಯಾವದೇ ಶರ್ತಿನಂತೆ ನಡೆಯಲಿಕ್ಕೆ ತಪ್ಪಿ

ಲಾಗಿದೆ ಎಂದು ಸಾಲ ಮಂಜೂರ ಮಾಡುವವನಿಗೆ ಖಾತ್ರಿಯಾದರೆ, ಅವನು ಮೊದಲನೇ ಕಂತಿನ ನಂತರದ ಯಾವದೇ ಕಂತನ್ನು ಕೊಡಲಿಕ್ಕೆ ಒಪ್ಪಿನ್ನಬಹುದು.

[೨೨] ಯಾವದೊಂದು ಸಾಲವನ್ನು ಕೊಡುವಾಗ ಉಂಟಾದ ಖರ್ಚನ್ನು ವಸೂಲ ಮಾಡುವದು.

೧೬. ಯಾವದೊಂದು ಸಾಲವನ್ನು ಕೊಡುವಾಗ ಯಾವದೇ ಖರ್ಚು ಉಂಟಾಗಿದ್ದರೆ, ಅದನ್ನು, ಸಾಲ ತೆಗೆದುಕೊಳ್ಳುವವನು ಕೊಡುವ ಮೊದಲನೇ ವಾರ್ಷಿಕ ಕಂತಿನ ರಕಮಿನೊಂದಿಗೆ ಕೊಡಬೇಕು.

[೨೨] (೧) ೫ನೇ ಕಾನೂನಿನ ಕೆಳಗಿನ ಟಿಪ್ಪಣಿಗಳನ್ನು ನೋಡಿರಿ.—ಸಾಲದ ಬಗ್ಗೆ ಒತ್ತಿ ಇಡಲಾಗಿದ್ದ ಭೂಮಿಯ ಮೇಲಿನ ದಿವಾಣೀ ಕೋರ್ಟಿನ ಜಪ್ತಿಯನ್ನು ತೆಗೆದುಹಾಕುವದರ ಸಲುವಾಗಿ ದಾವೆಯನ್ನು ದಾಖಲ ಮಾಡಬೇಕಾಗಿದ್ದ ಪ್ರಸಂಗದಲ್ಲಿ, ವಕೀಲನ ಫೀಯನ್ನು ಹಿಡಿದು ಸದರಿ ದಾವೆಯ ವೆಚ್ಚಗಳನ್ನು ಕಾಯದೆಯ ಖರ್ಚಿನ ಕೆಳಗೆ ಖರ್ಚು ಹಾಕಬೇಕೆಂತಲೂ, ಇದಕ್ಕೆ ಸರಕಾರದವರ ಮಂಜೂರಿ ಪಡೆಯಬೇಕೆಂತಲೂ, ಈ ಕಾನೂನಿನನ್ವಯ ವೆಚ್ಚಗಳಿಂದು ಆಕಾರಿಸಬಾರದೆಂತಲೂ ನಿರ್ಣಯಿಸಲಾಗಿತ್ತು (ಎಫ್. ೯೮೬–೯೪, ಆರ್. ೫೦೫೭–೦೨).

(೨) ಸಾಲವನ್ನು ಕೊಡಬೇಕೆಂದು ನಿರ್ಣಯಿಸುವ ಪೂರ್ವದಲ್ಲಿ ಆ ವೆಚ್ಚಗಳನ್ನು ಮಾಡಿದ್ದರೆ, ಅರ್ಜಿದಾರನ ಕಡೆಯಿಂದ ಸದರಿ ಖರ್ಚಿನ ಬಗ್ಗೆ ಅಮಾನತನ್ನು ತಕ್ಕೊಳ್ಳುವದು ಅಥವಾ ವೆಚ್ಚಗಳನ್ನು ಕೊಡಿಸುವದು ಜಾಣತನದ್ದಾಗುವದೆಂದು ೨(೨)ನೇ ಟಿಪ್ಪಣಿಯಲ್ಲಿ ತೋರಿಸಿಕೊಡಲಾಗಿದೆ. ಆದರೆ ಈ ತರುವಾಯ ಮಾಡಿದ ವೆಚ್ಚಗಳನ್ನು ಈ ಕಾನೂನಿನಲ್ಲಿ ಹೇಳಿದಂತೆ ಕಂತಿನಲ್ಲಿ ಸಮಾವಿಷ್ಟ ಮಾಡಬಹುದು.

(೩) ವಾಡಿಕೆಯಾಗಿ ಎಗ್ಝಿಕ್ಯೂಟಿವ್ ಎಂಜಿನಿಯರನು ತನಗೆ ಅನಾನುಕೂಲವಾಗದಿದ್ದರೆ ಏನೂ ಹಣ ತಕ್ಕೊಳ್ಳದೆ ಸಲಹೆಯನ್ನು ಕೊಡುವನು. ಬಹಳ ವೇಳೆಯನ್ನು ಖರ್ಚು ಮಾಡಬೇಕಾದ ದೊಡ್ಡ ಕೆಲಸಗಳ ಬಾಬತಿನಲ್ಲಿ ಅವನ ಪರಿಶ್ರಮದ ಸಲುವಾಗಿ ಹಣವನ್ನು ತಕ್ಕೊಳ್ಳಲಾಗುವದು.

[೨೩] ಕಂತುಗಳನ್ನು ತಹಕೂಬಿಡೋಣ.

೧೭. ಸಾಲ ತೆಗೆದುಕೊಂಡವನ ನಿಯಂತ್ರಣಕ್ಕೆ ಮೀರಿದ ಕಾರಣಗಳಿಂದ ಅವನ ಬೆಳೆಯು ಬಾರದಿದ್ದ ಮೂಲಕವಾಗಿ, ಕಂತು ಕೊಡುವದು ಬಹಳೇ ಭಾರವಾಗಿ ಅವನಿಗೆ ಕಂತುಬಂದಾಗೆಲ್ಲ ಸದರಿ

ಕಂತನ್ನು ತಹಕೂಬಿಡಬೇಕು. ಭೂಮಿಯ ಮಹಸೂಲನ್ನು (೨೪) ತಹಕೂಬಿಟ್ಟಾಗ್ಗೆಲ್ಲ, ಸಾಲಗಳನ್ನೂ ಅದೇ ಕಾಲಕ್ಕೆ ಹಾಗೂ ಅದೇ ಮಟ್ಟಿಗೆ ಸಾಮಾನ್ಯವಾಗಿ ತಹಕೂಬಿಡಬೇಕು; ಈ ಮೇರೆಗೆ, ಭೂಮಿಯ ಮಹಸೂಲಿನ ಬರೇ ಅರ್ಧದಷ್ಟನ್ನು ತಹಕೂಬಿಟ್ಟರೆ, ಚಾಲೂ ಕಂತಿನ ಅರ್ಧದಷ್ಟು ರಕಮನ್ನು ಮಾತ್ರ ತಹಕೂಬಿಡ ಬೇಕು. ಭೂಮಿಯ ಮಹಸೂಲನ್ನು ಸಾಮಾನ್ಯವಾಗಿ ತಹಕೂಬಿ ಡುವಷ್ಟರ ಮಟ್ಟಿಗೆ ಹಂಗಾಮು ಕೆಟ್ಟಿದ್ದ ಹೊರ್ತು, ಸಾಲಗಳನ್ನು ಸಾಮಾನ್ಯವಾಗಿ ತಹಕೂಬಿಡುವದು ಯೋಗ್ಯವಾಗಲಿಕ್ಕಿಲ್ಲ. ಸಾಲ ಗಳನ್ನು ಸಾಮಾನ್ಯವಾಗಿ ತಹಕೂಬಿಟ್ಟ ಬಾಬತಿನಲ್ಲಿ, ಸದರಿ ಹುಕು ಮಿನ ಅಮಲಿನೊಳಗಿಂದ ಯಾವದೊಂದು ವರ್ಗದ ಜನರನ್ನು ಹೊರ್ತುಪಡಿಸುವದು ಕಲೆಕ್ಟರನ ಮರ್ಜಿಯ ಮೇಲೆ—ಅವನು ಈ ಬಗ್ಗೆ ಸರಕಾರದವರ ಮಂಜೂರಿಯನ್ನು ಪಡೆಯಬೇಕು—ಅವಲಂಬಿ ಸಿರುತ್ತದೆ.

ಈ ಕಾನೂನಿನನ್ವಯ ಯಾವದೊಂದು ಕಂತನ್ನು ಕೊಡುವ ದನ್ನು ತಹಕೂಬಿಟ್ಟಾಗ, ಸದರಿ ಕಂತನ್ನು ಕೊಡಬೇಕಾದ ತಾರೀಖಿ ನಿಂದ ಸದರಿ ಕಂತು ಹಾಗೂ ಅದರ ಸಂಬಂಧದಿಂದ ಸಲ್ಲತಕ್ಕ ಬಡ್ಡಿಯು ಕೊಡಲ್ಪಡುವ ವರೆಗಿನ ಅವಧಿಯ ಬಗ್ಗೆ ಸಾಲವನ್ನು ಮಂಜೂರ ಮಾಡಿದ ಹುಕುಮಿನಲ್ಲಿ ಗೊತ್ತುಮಾಡಿದ ದರದಂತೆ ಚಕ್ರಬಡ್ಡಿಯನ್ನು ಸದರಿ ಕಂತಿನ ಮೇಲೆ ಆಕಾರಿಸಲಾಗುವದು (ಆರ್. ೯೩೨೪/೨೮—೩ನೇ ಮಾರ್ಚ ಸನ್ ೧೯೩೩).

೧-೪-೨೧ನೇ ತಾರೀಖಿನ ಪೂರ್ವದಲ್ಲಿ ಯಾವ ಸಾಲಗಳು (೧೯ನೇ ಕಾನೂನಿನನ್ವಯ ಅವುಗಳ ಬಡ್ಡಿಯ ದರವನ್ನು ನೂರಕ್ಕೆ ೬¼ರವಷ್ಟು ಬೆಳಿಸಲ್ಪಟ್ಟ ಸಾಲಗಳ ಹೊರ್ತು) ಕೊಡಲ್ಪಟ್ಟಿದ್ದವೋ ಅಂಥ ಸಾಲಗಳನ್ನು ೧-೧೦-೨೪ನೇ ತಾರೀಖಿನ ನಂತರ ತಹಕೂಬಿಟ್ಟ ಬಾಬತುಗಳಲ್ಲಿ ನೂರಕ್ಕೆ ೭·೨೯ರ (ಪ್ರತಿ ರೂಪಾಯಿಗೆ ೧೪ ಪೈಗಳ)

ಹೆಚ್ಚಿಸಿದ ಬಡ್ಡಿಯನ್ನು ಆಕಾರಿಸಲಾಗುವದು. (ಎಫ್. ೮೩-೨-೦ ೧೨-೨೪).

ಯಾವ ಸಾಲಗಳು (೧) ಸನ್ ೧೯೨೧ನೇ ಇಸವಿಯು ಎಪ್ರಿಲ್ ತಿಂಗಳ ೧ನೇ ತಾರೀಖಿಗಿಂತ ಮುಂಚೆ ಕೊಡಲ್ಪಟ್ಟಿದ್ದವೋ ಮತ್ತು (೨) ಯಾವವುಗಳ ಬಡ್ಡಿಯ ದರವನ್ನು ಈ ಮೊದಲೇ ನೂರಕ್ಕೆ ೬ಕ್ಕಿರಂತೆ ಅಥವಾ ೭·೫೦ರಂತೆ ಅಥವಾ ೭·೨೫ರಂತೆ ಬೆಳೆಸಲ್ಪಟ್ಟವೋ ಅಂಥ ಸಾಲಗಳ ಸಂಬಂಧದಿಂದ ಸನ್ ೧೯೨೭ನೇ ಇಸವಿಯು ಎಪ್ರಿಲ ತಿಂಗಳ ೧ನೇ ತಾರೀಖಿನ ನಂತರ ತಹಕೂಬಿಗಳನ್ನು ಕೊಟ್ಟಾಗ್ಗೆಲ್ಲ, ಹೀಗೆ ಸಾಲವನ್ನು ಮುಂದೆ ಹಾಕಿದ್ದರ ಸಲುವಾಗಿ ಪ್ರತಿಫಲವೆಂದು, ಸಾಲಗಾರನು, ತನ್ನ ಮೂಲದ ಕರಾರಿನಲ್ಲಿದ್ದ ಬಡ್ಡಿಯ ದರದ ಬದಲಾಗಿ ನೂರಕ್ಕೆ ೬·೭೫ರಂತೆ ಬಡ್ಡಿಯನ್ನು ಕೊಡುತ್ತೇನೆಂದು ಜಾಮೀನದಾರರೊಂದಿಗೆ ಹೊಸತಾಗಿ ಕರಾರು ಮಾಡಿಕೊಡಬೇಕು (ಎಫ್. ೮೩ ತಾರೀಖು ೧೦ನೇ ಜೂನ ಸನ್ ೧೯೨೭ನೇ ಇಸವಿ).

ಸನ್ ೧೯೩೦ನೇ ಇಸವಿಯು ನವೆಂಬರ ತಿಂಗಳ ೧ನೇ ತಾರೀಖಿನ ನಂತರ ತಗಾಯಿ ಸಾಲಗಳನ್ನು ಮುಂದೆ ಹಾಕಿದ್ದರೆ ಅಥವಾ ತಹಕೂಬಿಟ್ಟಿದ್ದರೆ, ಸಾಲಗಾರನು ಮೂಲದ ಕರಾರಿನಲ್ಲಿದ್ದ ಬಡ್ಡಿಯ ದರದ ಬದಲಾಗಿ ನೂರಕ್ಕೆ ೬ಕ್ಕಿರಂತೆ ಬಡ್ಡಿಯನ್ನು ಕೊಡುತ್ತೇನೆಂದು ಜಾಮೀನದಾರರೊಂದಿಗೆ ಹೊಸತಾಗಿ ಕರಾರು ಮಾಡಿಕೊಡಬೇಕು (ಆರ್. ಪಿ. ೩೨-೨೬-೫೧).

[೨೩] (೧) ಅನಂತರದಲ್ಲಿ ಕೊಡಲಿರುವ ಯಾವತ್ತು ರಕಮುಗಳನ್ನು ಕೊಡುವದನ್ನು ಮುಂದೆ ಹಾಕುವದು ಯಾವಪೊಂದು ತಹಕೂಬಿಯ (ಎಫ್. ೨೪೧೦-೦೯) ಪರಿಣಾಮವಿರುತ್ತದೆ. ಇದರ ಪರಿಣಾಮವಾಗಿ ಮತ್ತೊಂದು ವರ್ಷದ ಬಡ್ಡಿಯು ಆಕಾರಿಸಲ್ಪಡುವದು; ಆದರೆ ಸಾಲ ತೆಗೆದುಕೊಂಡವನ ಸಾಮರ್ಥ್ಯಕ್ಕನುಸಾರವಾಗಿ ಕೊಡಲಿರುವ ವಾರ್ಷಿಕ ಕಂತು ಮೊದಲಿನಂತೆ ಚಾಲೂ ಇರುವದು (ಎಫ್. ೧೯೪೧-೦೫). ತಹಕೂಬಿಯ ವರ್ಷದ ನಂತರ ಚನ್ನಾಗಿ ಬೆಳೆ ಬಂದ ವರ್ಷವು ಬಂದರೆ ಮತ್ತು ಸಾಲ ತೆಗೆದುಕೊಂಡವರು ಕೊಡಲಿಕ್ಕೆ ಸಮರ್ಥರಿದ್ದರೆ, ೧ಕ್ಕಿ ಅಥವಾ ೨ ಕಂತುಗಳನ್ನು ವಸೂಲ ಮಾಡುವದು ಯೋಗ್ಯವಾಗುವದು. ಹಂಗಾಮಿನ ಕಾರಣದಿಂದ ಹಾಗೂ ಬಂದ ಉತ್ಪನ್ನದ ಬೆಲೆಯ ಮೇರೆಗೆ ಹೀಗೆ ಹೆಚ್ಚಿಗೆ ವಸೂಲ ಮಾಡಲಿಕ್ಕೆ ಬರುವಂತಿದ್ದಾಗೆಲ್ಲ, ಸಾಲ ತೆಗೆದುಕೊಂಡವರ ಹಿತಾರ್ಥವಾಗಿ ಇಂಥ ಹೆಚ್ಚಿನ ರಕಮನ್ನು ವಸೂಲ ಮಾಡ

ತಕ್ಕದ್ದು. ಇದು ಬೆಳೆ ಬಾರದಿದ್ದ ಹಂಗಾಮುಗಳಲ್ಲಿ ಕೊಟ್ಟ ತಹಕೂಬಿಗಳ ಹಾಗೂ ಸವಲತ್ತುಗಳ ಸ್ವಾಭಾವಿಕ ಭರಪಾಯಿಯಾಗಿರುತ್ತದೆ.

(೨) ಕಂತುಗಳನ್ನು ತಹಕೂಬಿಟ್ಟಾಗ್ಯೂ, ಪರಿಸ್ಥಿತಿಯು ಅತ್ಯಂತವಾಗಿ ಕೆಟ್ಟದ್ದ ಹೊರ್ತು, ಶಕ್ಯವಿದ್ದರೆ, ಆ ವರ್ಷದ ಬಡ್ಡಿಯನ್ನು ವಸೂಲ ಮಾಡತಕ್ಕದ್ದು [ಆರ್. ೮೪೫೧ (೭)-೧೦].

(೨೪) ಭೂಮಿಯ ಮಹಸೂಲನ್ನು ಹಾಗೂ ತಗಾಯಿಯನ್ನು ತಹಕೂಬಿಡುವ ಹುಕುಮುಗಳನ್ನು ಒಟ್ಟಾಗಿ, ಮತ್ತು ಶಕ್ಯವಿದ್ದರೆ ಅಕ್ಟೋಬರ ತಿಂಗಳ ೩ನೇ ತಾರೀಖಿಗಿಂತ ಮುಂಚೆ ಕೊಡಬೇಕು. ಅವುಗಳನ್ನು ಇಷ್ಟು ಮುಂಚೆ ಕೊಡಲಿಕ್ಕೆ ಬಾರದಿದ್ದರೆ, ಅವುಗಳನ್ನು ಕನಿಷ್ಠ ಪಕ್ಷಕ್ಕೆ ಮೊದಲನೇ ಕಂತಿನ ಪೂರ್ವದಲ್ಲಿ ಕೊಡಬೇಕು. ಮೊದಲನೇ ಕಂತು ಕೆಲಮಟ್ಟಿಗೆ ಮುಂಚಿತವಾಗಿಯೇ ಸಲ್ಲತಕ್ಕದ್ದಾದರೆ ಮತ್ತು ಅದರ ವಸೂಲಿಯು ಪ್ರಾರಂಭವಾಗುವದಕ್ಕಿಂತ ಮುಂಚೆ ಚೌಕಸಿಗಳನ್ನು ಪೂರ್ತಿಮಾಡಿ ಹುಕುಮುಗಳನ್ನು ಹೊರಡಿಸುವದು ಶಕ್ಯವಿರದಿದ್ದರೆ, ಯೋಗ್ಯ ನಿರ್ಣಯವನ್ನು ಮಾಡುವದರ ಸಲುವಾಗಿ ೧೫ ಅಥವಾ ೩೦ ದಿವಸಗಳ ವರೆಗೆ ಮೊದಲನೇ ಕಂತನ್ನು ಮುಂದೆ ಹಾಕುವದಕ್ಕೆ ಮಂಜೂರಿ ಬೇಡುವದೇ ಇಂಥ ಪರಿಸ್ಥಿತಿಯಲ್ಲಿಯ ಯೋಗ್ಯ ಮಾರ್ಗವಿರುತ್ತದೆ. ಹುಕುಮುಗಳನ್ನು ಹೊರಡಿಸಿದ ನಂತರ, ಮಾಮಲೇದಾರನು ತ. ನ. ೪ನ್ನು ಅಥವಾ ಅದನ್ನು ಯಾವ ನೋಂದುಗಳ ಮೇಲೆ ಆಧರಿಸಿರುವದೋ ಆ ತ. ನ. ೩ರಲ್ಲಿಯ ನೋಂದುಗಳನ್ನು ತಯಾರಿಸಬೇಕಾಗುವದು, ಮತ್ತು ಅವುಗಳನ್ನು ಕುಲಕರ್ಣಿಗೆ ಅವನು ಕಂತನ್ನು ವಸೂಲ ಮಾಡುವದಕ್ಕೆ ಪ್ರಾರಂಭಿಸುವ ಮುಂಚೆ ಕೊಡಬೇಕು.

## ಆನಂತರ ಕೊಂಡುಕೊಂಡವನು.

೧೮. ತಾರಣವೆಂದು ಒತ್ತೆಯಿಟ್ಟ ಯಾವದೇ ಭೂಮಿಯನ್ನು ತಬದಿಲ ಮಾಡಿದರೆ, [೨೩] ಬಾಕಿ ಉಳಿದ ಯಾವತ್ತು ರಕಮನ್ನು ಕೂಡಲೇ ವಸೂಲ ಮಾಡಲಾಗುವದೆಂಬ ಶರ್ತಿನ ಮೇಲೆ ಭೂಮಿಯ ಸುಧಾರಣೆಗೋಸ್ಕರ ಸಾಲವನ್ನು ಕೊಟ್ಟ ಬಾಬತಿನಲ್ಲಿ, ತಬದಿಲಿ ಪಡೆದ ಮನುಷ್ಯನು ಸಾಲ ಮಂಜೂರ ಮಾಡುವ ಮನುಷ್ಯನ ಮರ್ಜಿಯ ಮೇರೆಗೆ ಬಾಕಿ ಉಳಿದ ರಕಮನ್ನು ಕೊಟ್ಟರೆ ಅಥವಾ ಬಾಕಿ ಉಳಿದ ರಕಮನ್ನು ಹಿಂತಿರಿಗಿ ಕೊಡುವದರ ಸಲುವಾಗಿ ಸದರಿ ಭೂಮಿಯನ್ನು ತಾರಣವೆಂದು ಒತ್ತೆಯಿಟ್ಟು ಹೊಸ ಬಾಂಡನ್ನು ಬರೆದುಕೊಟ್ಟರೆ, ಈ ಶರ್ತನ್ನು [೨೫] ಅಮಲಿನಲ್ಲಿ ತರತಕ್ಕದ್ದಲ್ಲ.

[೨೫] ಸಾಲ ತೆಗೆದುಕೊಳ್ಳುವವನು ಭೂಮಿಯನ್ನು ತಬದಿಲ ಮಾಡಿದರೆ, ಸದರಿ ಹುಕುಮಿನಲ್ಲಿಯ ಹಾಗೂ ತಾರಣದ ಬಾಂಡಿನಲ್ಲಿಯ ಶರ್ತುಗಳ ಮೇಲಿಂದ ಸಾಲವನ್ನು ವಸೂಲ ಮಾಡಬಹುದು, ಮತ್ತು ಇದರ ಮೂಲಕ ಸಾಲ ತೆಗೆದುಕೊಳು

ವವನ ಮೇಲೆ ನಿರ್ಬಂಧವಿಡಲಾಗುತ್ತದೆ; ಆದರೆ ಸಾಲ ಮಂಜೂರ ಮಾಡುವವನು ತಬದಿಲಿ ಪಡೆದವನಿಂದ ಬಾಕಿ ಉಳಿದ ರಕಮನ್ನು ವಸೂಲು ಮಾಡಿದರೆ ಅಥವಾ ಅದನ್ನು ಹಿಂತಿರುಗಿ ಕೊಡಲಿಕ್ಕೆ ಅವನನ್ನು ಜವಾಬದಾರನನ್ನಾಗಿ ಮಾಡಿದರೆ. ಹೀಗೆ ತಬದಿಲು ಮಾಡಲಿಕ್ಕೆ ಪರವಾನಗಿ ಕೊಡುವ ಬಗ್ಗೆ ಸಾಲ ಮಂಜೂರ ಮಾಡುವವನಿಗೆ ಈ ಕಾನೂನಿನಿಂದ ಅಧಿಕಾರ ದೊರೆಯುತ್ತದೆ.

(೨೬) ಯಾವದೊಂದು ಸಾಲದ ಫಲವಾಗಿ ಭೂಮಿಯನ್ನು ಒತ್ತೆಹಾಕಿದ ನಂತರ, ಸದರಿ ಭೂಮಿಯು, ಭೂಮಿಯನ್ನು ಸಂಪಾದಿಸುವ ಕಾನೂನಿನ ಪ್ರಕಾರ ಸಂಪಾದಿಸಲ್ಪಟ್ಟರೆ, ಸರಕಾರದವರಿಗೆ ಆ ಸಂಬಂಧದಿಂದ ದೊರೆಯುವ ಪರಿಹಾರದ ರಕಮನ್ನು ಮಾಡಿ ಸಿಗ್ಗೆ ಮಾಡತಕ್ಕದ್ದು. ನಿವಾಡಿ ಕೊಟ್ಟ ರಕಮಿನೊಳಗಿಂದ ಕೊಡುವ ಬಾಕಿ ಉಳಿದ ರಕಮನ್ನು ವಸೂಲ ಮಾಡಬೇಕು. ಆದರೆ ನಿಜವಾಗಿ ಯಾವದೇ ಸುಧಾರಣೆಯನ್ನು ಮಾಡಿರದಿದ್ದರೆ, ಭೂಮಿಯು ಸಂಪಾದನೆ ಮಾಡುವ ಅಧಿಕಾರಿಯು ಸದರಿ ಭೂಮಿಯ ನಿಜವಾದ ಬೆಲೆಗಿಂತ ಯಾವದೇ ಹೆಚ್ಚಿನ ರಕಮನ್ನು ಕೊಡಲಿಕ್ಕೆ ಪಾತ್ರ ನಿರಲಿಕ್ಕಿಲ್ಲ. ಆರ್. ೧೯೧೬—೧೭ನೇದರಲ್ಲಿ ಇಂಥ ಒಂದು ಪ್ರಕರಣವನ್ನು ಕುರಿತು ವಿಚಾರ ಮಾಡಿರುತ್ತದೆ.

ಸಾಲ ತೆಗೆದುಕೊಳ್ಳುವವನು ಭೂಮಿಯನ್ನು ತಬದಿಲ ಮಾಡಿದ ಬಾಬತಿನಲ್ಲಿ, ಎಫ್. ೨೨೪೩—೪೪ ಇದನ್ನು ನೋಡಿರಿ.

## ಶರ್ತುಗಳಂತೆ ನಡೆಯಲಿಕ್ಕೆ ತಪ್ಪಿದರೆ [೨೮] ಸಾಲವನ್ನು ವಸೂಲ ಮಾಡುವದು.

೧೫. ಸಾಲ ತೆಗೆದುಕೊಳ್ಳುವವನು ಯಾವದೊಂದು ಶರ್ತಿನನ್ವಯ ನಡೆಯಲಿಕ್ಕೆ ತಪ್ಪಿರುತ್ತಾನೆಂದು ಯಾವದೇ ಕಾಲಕ್ಕೆ ಸಾಲ ಮಂಜೂರ ಮಾಡುವವನಿಗೆ ಖಾತ್ರಿಯಾದರೆ,—

(ಅ) ಸದರಿ ತಪ್ಪೋಣವು ಸಾಲದ ಅಪವ್ಯಯ ಮಾಡಿದ್ದರಿಂದ ಉಂಟಾಗಿರುತ್ತದೆಂದು ಕಂಡುಬಂದರೆ ಅವನು, ಇಂಥ ಮನುಷ್ಯನು ಇನ್ನೂ ಕೊಡಬೇಕಾಗಿದ್ದ ಯಾವದೇ ರಕಮನ್ನು ೭ನೇ ಕಲಮಿನ (ಅಥವಾ ಹೊಲ ಮಾಡುವವರ ಸಾಲಗಳ ಆಕ್ಟಿನ ಬಾಬತಿನಲ್ಲಿ ೫ನೇ ಕಲಮಿನ) ಠರಾವುಗಳನ್ವಯ ವಸೂಲ ಮಾಡಲುಪಕ್ರಮಿಸತಕ್ಕದ್ದು, ಮತ್ತು

(ಬ) ಸದರಿ ತಪ್ಪೋಣವು ಇತರ ಯಾವದೇ ಕಾರಣದಿಂದ ಉಂಟಾಗಿದ್ದರೆ, ತನ್ನ ನಿರ್ಣಯದ ಕಾರಣಗಳನ್ನು ಬರೆದಿಟ್ಟು ಅವನು, ಇಂಥ ಮನುಷ್ಯನು ಇನ್ನೂ ಕೊಡಬೇಕಾಗಿದ್ದ

ಯಾವದೇ ರಕಮನ್ನು ೭ನೇ ಕಲಮಿನ (ಅಥವಾ ಹೊಲ ಮಾಡುವವರ ಸಾಲಗಳ ಅಕ್ಟಿನ ಬಾಬತಿನಲ್ಲಿ ೫ನೇ ಕಲಮಿನ) ಠರಾವುಗಳನ್ವಯ ವಸೂಲ ಮಾಡಲುಪಕ್ರಮಿಸಬಹುದು :

ಆದರೆ ಗೊತ್ತುಪಡಿಸುವದೇನಂದರೆ, ಯಾವನೇ ಸಾಲ ತೆಗೆದುಕೊಂಡವನು ಕೊಡಬೇಕಾದ ಯಾವದೊಂದು ಕಂತು, ಅದನ್ನು ಹಿಂತಿರಿಗಿ ಕೊಡುವದರ ಸಲುವಾಗಿ ಗೊತ್ತುಮಾಡಿದ ತಾರೀಖಿನಿಂದ ಒಂದು ತಿಂಗಳೊಳಗಾಗಿ ಕೊಡಲ್ಪಡದಿದ್ದರೆ, ಸಾಲ ಮಂಜೂರ ಮಾಡುವವನು, ತನ್ನ ಮರ್ಜಿಯ ಮೇರೆಗೆ, ಆಯಾ ಕಾಲಕ್ಕೆ ಸಾಲ ತೆಗೆದುಕೊಂಡವನು ಕೊಡದೆ ಬಾಕಿ ಉಳಿದ ಯಾವತ್ತು ರಕಮನ್ನು ವಸೂಲ ಮಾಡುವದರ ಬದಲಾಗಿ, ಸದರಿ ಬಾಕಿ ಉಳಿದ ಕಂತನ್ನು ಮಾತ್ರ, ಸದರಿ ಕಂತನ್ನು ಕೊಡಲಿಕ್ಕೆ ತಪ್ಪಿದ ತಾರೀಖಿನಿಂದ ಸದರಿ ಕಂತಿನ ಇಡೀ ರಕಮು ಹಾಗೂ ಅದರ ಮೇಲಿನ ಬಡ್ಡಿಯು ಕೊಡಲ್ಪಡುವ ವರೆಗೆ, ಸಾಲವನ್ನು ಮಂಜೂರ ಮಾಡುವ ಹುಕುಮಿನಲ್ಲಿ ಠರಾಯಿಸಿದ ಬಡ್ಡಿಯ ದರಕ್ಕೆ ಸರಿಯಾದ ಬಡ್ಡಿಯ ದರದ ಪ್ರಕಾರ ಸದರಿ ಕಂತಿನ ಮೇಲೆ ಚಕ್ರಬಡ್ಡಿಯ ಸಹಿತವಾಗಿ ಮತ್ತು ನೂರಕ್ಕೆ ಎರಡರಂತೆ ಬಡ್ಡಿಯ ಸಹಿತವಾಗಿ, ಸದರಿ ಕಲಮಿನ ಠರಾವುಗಳನ್ವಯ ವಸೂಲು ಮಾಡಬಹುದು. (ಆರ್. ೯೩೨೪/೨೮-೬ನೇ ಮಾರ್ಚ ಸನ್ ೧೯೩೫ನೇ ಇಸವಿ).

[೨೭](ಎಫ್. ೨೪೮೮-೧೨ ಇದನ್ನು ನೋಡಿರಿ).

ಖಚಿತ್ವಾದ ಬಾಕಿಯೆಂದು ಬಿಟ್ಟುಬಿಡಲಾದ [೨೮] ರಕಮುಗಳ ರಿಪೋರ್ಟು.

೨೦. (೧) ಯಾವದೇ ಸಾಲವು ಅಥವಾ ಅದರ ಯಾವದೇ ಭಾಗವು ವಸೂಲಾಗಲಾರದೆಂದು ಕಂಡುಬಂದರೆ, ಅದನ್ನು ಕಲೆಕ್ಟರನು—

(ಅ) ಸದರಿ ರಕಮು ೧೦೦ ರೂಪಾಯಿ ಅಥವಾ ಅದಕ್ಕಿಂತ ಕಡಿಮೆ ಇದ್ದರೆ, ತನ್ನ ಸ್ವಂತ ಅಧಿಕಾರದಿಂದ,

(ಬ) ಸದರಿ ರಕಮು ೧೦೦ ರೂಪಾಯಿಗಳಿಗಿಂತ ಹೆಚ್ಚಿಗಿದ್ದರೆ, ಕಮೀಶನರನ ಮಂಜೂರಿಯನ್ನು ಮುಂಚಿತವಾಗಿ ಪಡೆದು ಖಚಿತ್ಮಾದ ಬಾಕಿಯೆಂದು ಬಿಟ್ಟುಬಿಡಬಹುದು.

(೨) ಕಲೆಕ್ಟರನು, ತಾನು (೧)ನೇ ಪೋಟ-ಕಾನೂನಿನ (ಅ) ರಕಮಿನನ್ವಯ ಖಚಿತ್ಮಾದ ಬಾಕಿಯೆಂದು ಬಿಟ್ಟುಬಿಡುವದಕ್ಕೆ ಹುಕುಮು ಮಾಡಿದ ಪ್ರತಿಯೊಂದು ರಕಮಿನ ಬಗ್ಗೆ ಕಾರಣಗಳನ್ನು ಕೊಟ್ಟು, ಖಚಿತ್ಮಾದ ಬಾಕಿಯೆಂದು ಬಿಟ್ಟುಬಿಟ್ಟ ಯಾವತ್ತು ರಕಮುಗಳ ಸಂಬಂಧದಿಂದ ತನ್ನ ಷಾಣ್ಮಾಸಿಕ ಪತ್ರಕದಲ್ಲಿ ಕಮೀಶನರನ ಕಡೆಗೆ ರಿಪೋರ್ಟು ಮಾಡಬೇಕು.

[೨೮] (೧) ಯಾವದೊಂದು ಸಾಲವು ಖಚಿತ್ಮಾದ ಬಾಕಿಯಾಗಿರುತ್ತದೆಂದು ಅದನ್ನು ಬಿಟ್ಟುಬಿಡುವದು ಅವಶ್ಯವಾದಾಗ ಅಥವಾ ಹೀಗೆ ಮಾಡಬೇಕಾಗುವದೆಂದು ಮುಂದಾಗಿ ಗೊತ್ತಾದಾಗ, ಸಾಲ ಮಂಜೂರು ಮಾಡುವವನ ಹಾಗೂ ಚೌಕಶಿ ಮಾಡುವವನ ವೈಯಕ್ತಿಕ ಜವಾಬದಾರಿಯ ಪ್ರಶ್ನವನ್ನು ಕುರಿತಾಗಿಯೂ ವಿಚಾರ ಮಾಡಬೇಕು (ಎಫ್. ೪೯೨೪–೦೮). ವಾಡಿಕೆಯ ಹಾಗು ವಾಜವಿಯಾಗಿರುವ ಯಾವತ್ತು ಕಾಳಜಿಯನ್ನು ತಕ್ಕೊಂಡು ವರ್ತಿಸಿದ್ದರೆ, ಕ್ರಮಬದ್ಧವಾದ ಕೆಲಸದ ವಿಧಾನವನ್ನನುಸರಿಸಿದ್ದರೆ ಹಾಗೂ ಮೋಸ ಮಾಡಲಾಗಿದೆ ಎಂದು ಸಾಬೀತಾಗದಿದ್ದರೆ, ಮೇಲಿನ ಜವಾಬದಾರಿಯು ಹೊರಿಸಲ್ಪಡಲಿಕ್ಕಿಲ್ಲ [ಪ್ಯಾರಾ ೨(ಜ), ಎಫ್. ೩೦೧೬–೪೧].

(೨) ಸಕ್ತಿಯ ಉಪಾಯಗಳನ್ನನುಸರಿಸಿ ಕಂತುಗಳನ್ನು ವಸೂಲ ಮಾಡುವ ವಿಷಯದ ಸೂಚನೆಗಳನ್ನು ತ. ನ. ೪ರಲ್ಲಿ ಕೊಡಲಾಗಿದೆ. ತಗಾಯಿ ವಸೂಲಿಗಳನ್ನು ಮಾಡುವಾಗ, ಭೂಮಿಯ ಮಹಸೂಲನ್ನು ವಸೂಲ ಮಾಡುವ ಕಾಲದಲ್ಲಿ ಉಪಯೋಗಿಸಲಾಗುವಷ್ಟು ಒತ್ತಾಯವನ್ನು ಉಪಯೋಗಿಸಬಾರದೆಂದು ಕೆಲವು ಸಾರೆ ಹೇಳಲಾಗುತ್ತದೆ. ಆದರೆ ಎಷ್ಟು ಉದಾರಮನಸ್ಸಿನಿಂದ ೧೭ನೇ ಕಾನೂನಿನನ್ವಯ ತಪಕೂಬಿಗಳನ್ನು ಕೊಡಲಾಗುತ್ತದೆಂಬದನ್ನು ನಾವು ಲಕ್ಷ್ಯಕ್ಕೆ ತಂದರೆ, ವಸೂಲ ಮಾಡತಕ್ಕದ್ದೆಂದು ಠರಾಯಿಸಿದ ಬಾಕಿಯನ್ನು ವಸೂಲ ಮಾಡಲೇಬೇಕೆಂದು ನಮಗೆ ತಿಳಿದುಬರುವದು. ಸಿಂಧ ಹಾಗೂ ನಗರದಲ್ಲಿಯ ವಸೂಲಿಗಳ ಸಲುವಾಗಿ (ಆರ್. ೫೭೭೮–೧೭ ಇದನ್ನು ನೋಡಿರಿ). ಭೂಮಿಯ ಮಹಸೂಲು ಭೂಮಿಯ ಮೇಲಿನ ಮೊದಲನೇ ಬೋಜಾವಿರುತ್ತದೆ, ಆದರೆ ತಗಾಯಿಯು ನಿಜವಾದ ಸಾರ್ವಜನಿಕ ರಕಮಿದ್ದು, ಅದನ್ನು ಭೂಮಿ ಧಾರಣ ಮಾಡುವವನಿಗೆ ಸಾಲ ಕೊಟ್ಟಿರುತ್ತದೆ. ಆದರೆ, ಭೂಮಿಯ ಮಹಸೂಲು ಉತ್ಪನ್ನದ ಲೆಕ್ಕದ ಸದರು ಇರುತ್ತದೆ. ತಗಾಯಿಯು, ಸಾಲ ಕೊಟ್ಟದ್ದು ಹಾಗೂ ಅದನ್ನು ವಸೂಲ ಮಾಡಿದ್ದು ಎಂಬ ಎರಡೂ ಬಾಜುಗಳನ್ನು ಸರಿಗೋಳಿಸುವ ಸಾಲದ ಲೆಕ್ಕದ ಸದರು ಇರುತ್ತದೆ; ಆದದರಿಂದ, ಭೂಮಿಯ ಮಹಸೂಲನ್ನು ಅಥವಾ ತಗಾಯಿಯನ್ನು ಸೂಟು

ಬಿಡಬೇಕೋ ಅಥವಾ ವಸೂಲಾಗದಂಥಾದ್ದೆಂದು ತಿಳಿಯಬೇಕೋ ಅಥವಾ ಇಲ್ಲವೋ ಎಂಬ ಪ್ರಶ್ನವು ಉಪಸ್ಥಿತವಾದಾಗ, ತಗಾಯಿಯನ್ನು ವಸೂಲ ಮಾಡತಕ್ಕದ್ದೆಂದು ನಿರ್ಣಯಿಸಬೇಕು. ಯಾವನೊಬ್ಬ ಸಾಲ ತೆಗೆದುಕೊಂಡವನು ೨೦ ರೂಪಾಯಿ ಭೂಮಿಯ ಮಹಸೂಲನ್ನು ಮತ್ತು ೨೦ ರೂಪಾಯಿ ತಗಾಯಿ ಸಾಲವನ್ನು ಕೊಡಬೇಕಾಗಿದ್ದು, ಅವನು ಯಾವದೇ ಆಸ್ತಿಯನ್ನು ಬಿಡದೆ ಮೃತಪಟ್ಟರೆ ಅಥವಾ ಕಡುತನವಾದ ಸಕ್ತಿಯ ಉಪಾಯಗಳನ್ನು ಉಪಯೋಗಿಸಿದ್ದಾಗ್ಯೂ ಅವನ ಕಡೆಯಿಂದ ೨೦ ರೂಪಾಯಿಗಳಿಗಿಂತ ಹೆಚ್ಚಿಗೆ ವಸೂಲಾಗದಷ್ಟು ಅವನು ದರಿದ್ರನಿದ್ದರೆ, ಈ ರಕಮನ್ನು ವಸೂಲ ಮಾಡಿ ತಗಾಯಿ ಲೆಕ್ಕಕ್ಕೆ ಜಮಾ ಹಿಡಿಯಬೇಕು, ಮತ್ತು ಭೂಮಿಯ ಮಹಸೂಲನ್ನು ಖಟ್ಲಾದ ಬಾಕಿಯೆಂದು ಬಿಟ್ಟುಬಿಡಬೇಕು (ಎಫ್. ೪೨೭–೦೫ ಇವರಲ್ಲಿಯ ಹಿಂದುಸ್ಥಾನ ಸರಕಾರದವರ ಪತ್ರದ ೯ನೇ ಹಾಗೂ ೧೨ನೇ ಪ್ಯಾರಾಗಳು).

(೩) “ಖಟ್ಲಾದ ಬಾಕಿಯೆಂದು ಬಿಟ್ಟುಬಿಡುವದು” ಅಂದರೆ, ಕಾಯದೆಶೀರವಾಗಿರುವ ಯಾವ ಉಪಾಯಗಳನ್ನು ಕೈಕೊಂಡಾಗ್ಯೂ ಅವುಗಳು ನಿಷ್ಫಲವಾಗಿರುವುವೋ ಅಥವಾ ನಿರುಪಾಯವಾಗಿ ಅವೆಲ್ಲವುಗಳನ್ನು ಬಿಟ್ಟುಬಿಡಲಾಯಿತೋ ಅಂಥ ಕಾಯದೆಶೀರವಾದ ಯಾವವೇ ಉಪಾಯಗಳನ್ನು ಉಪಯೋಗಿಸಿದಾಗ್ಯೂ, ಯಾವದೊಂದು ರಕಮನ್ನು ವಸೂಲು ಮಾಡುವದು ಶಕ್ಯವಿರುವದಿಲ್ಲವೆಂದು ನಿರ್ಣಯಿಸುವದು ಎಂದರ್ಥವಾಗುತ್ತದೆ. ವಸ್ತಗೀರು ಮಾಡಿ ಜೇಲಿನಲ್ಲಿ ಅಟಂಕಿಸಿಡುವ ಸ್ವರೂಪದ ಅತಿ ಕಠೋರವಾದ ಉಪಾಯಗಳನ್ನು ಯೋಗ್ಯರೀತಿಯಿಂದ ಕೈಕೊಳ್ಳಬೇಕಾದ ಪ್ರಸಂಗಗಳೂ ಇರುತ್ತವೆ (೧೦ನೇ ಕಾನೂನಿನ ಮೇಲಿನ ಟಿಪ್ಪಣಿಗಳನ್ನು ನೋಡಿರಿ). ಆದರೆ, ಕಾಯದೆಯ ಉಪಾಯಗಳಿಂದ ಇದಕ್ಕಿಂತ ಹೆಚ್ಚಿಗೆ ರಕಮನ್ನು ವಸೂಲು ಮಾಡುವುದು ಅಶಕ್ಯವಾದರೆ, ಸಾಲದ ಪೈಕಿ ಬಾಕಿ ಉಳಿದ ರಕಮು ವಸೂಲಾಗಲಾರದಂಥಾದ್ದಿರುವದರಿಂದ, ಅದನ್ನು ಖಟ್ಲಾದ ಬಾಕಿಯೆಂದು ಬಿಟ್ಟುಬಿಡಬೇಕು. ಆದರೆ, ಸೂಟು ಬಿಡುವದೆಂದರೆ, ಇನ್ನೂ ಹೆಚ್ಚಿಗೆ ಸಕ್ತಿಯ ಉಪಾಯಗಳನ್ನು ಕೈಕೊಂಡು ಯಾವದೊಂದು ರಕಮನ್ನು ವಸೂಲು ಮಾಡಬಹುದಾಗಿದ್ದರೂ, ಅದನ್ನು ವಸೂಲ ಮಾಡದೆ ಬಿಟ್ಟುಬಿಡುವದು ಎಂದು ತಿಳಿಯಬೇಕು. ಸೂಟು ಬಿಡುವ ಅಧಿಕಾರವನ್ನು ಸರಕಾರದವರು ಸಂಪೂರ್ಣವಾಗಿ ತಮ್ಮ ಕಡೆಗೆ ಇಟ್ಟುಕೊಂಡಿದ್ದಾರೆ, ಮತ್ತು ಅದನ್ನು ಉಪಯೋಗಿಸಲಿಕ್ಕೆ ಅವರು ಸಮ್ಮತಿಸುವದಿಲ್ಲ (ಎಫ್. ೨೧೨–೦೩, ೧೯೯–೦೪, ಆರ್. ೨೯೩–೦೭, ಎಫ್. ೨೯೨೮–೦೮, ೨೯೬೨–೦೯). ಭೂಮಿಯ ಮಹಸೂಲನ್ನು ಸೂಟು ಬಿಡುವ ವಿಷಯದ ಕಾನೂನುಗಳು ಲಾಗೂ ಆಗುವದಿಲ್ಲ (ಎಫ್. ೨೪೭–೧೦). ಸಾಲ ತೆಗೆದುಕೊಂಡವನ ನಿಯಂತ್ರಣಕ್ಕೆ ಮೀರಿದ ಕಾರಣಗಳ ಮೂಲಕ ಕೆಲಸಗಳು ನಿಷ್ಫಲವಾದಾಗ, ಸರಕಾರದವರು ಯಾವಾಗಾದರೊಮ್ಮೆ ಸೂಟು ಕೊಡುತ್ತಾರೆ (ಎಫ್. ೧೮೩೬–೧೧), ಮತ್ತು ೫೮೦–೧೨. ನಿಶ್ಚಿತವಾಗಿ ಮಳೆಯಾಗದ ಕ್ಷೇತ್ರಗಳಲ್ಲಿ ಬಾವಿಗಳನ್ನು ಅಗಿಯುವದರ ಸಲುವಾಗಿ ಪ್ರಯೋಗಾತ್ಮಕವಾಗಿ ಬೋರಿಂಗುಗಳನ್ನು ಮಾಡಿದಾಗ, ಸದರಿ ಬೋರಿಂಗು ಯಶಸ್ವಿಯಾದರೆ, ಬೋರಿಂಗಿನ ಖರ್ಚನ್ನು ತಗಾಯಿಯೆಂದು ಆಕಾರಿಸಿ ವಸೂಲ ಮಾಡುವದು ಯೋಗ್ಯವಿರುತ್ತದೆಂದು, ಹಾಗೂ ಅದು ಯಶಸ್ವಿಯಾಗದಿದ್ದರೆ, ಕೊಟ್ಟ ಸಾಲವನ್ನು ಸೂಟು ಬಿಡಬೇಕೆಂದು ಸರಕಾರ

ದವರು ನಿರ್ಣಯಿಸಿದ್ದಾರೆ (ಎಫ್. ೧೧೩೦೭–೦೭). ಅಪರಾಧ ಮಾಡುವ ಜಾತಿಗಳಿಗೆ ಸಾಲ ಕೊಟ್ಟ ರಕಮುಗಳನ್ನು ಸೂಟು ಬಿಡುವದರ ಸಲುವಾಗಿ ಎಫ್. (ಹುಕುಮು) ೨೪೩೨–೧೫ ಮತ್ತು ಎಫ್. ೨೦೧೮–೧೬ ಹಾಗೂ ೩೮—ತಾರೀಖು ೧೩ನೇ ಡಿಸೆಂಬರ ಸನ್ ೧೯೧೭ನೇ ಇಸವಿ, ಇವುಗಳನ್ನು ನೋಡಿರಿ.

(೪) ಸೂಟುಗಳ ಸಂಬಂಧದಿಂದ ಹಿಂದುಸ್ಥಾನ ಸರಕಾರದವರ ಹುಕುಮುಗಳು (ಅಥವಾ ವಿಚಾರಗಳು) ಎಫ್. ೪೨೭೯–೦೫ ಇದರಲ್ಲಿವೆ. ಎರಡು ಶರ್ತುಗಳು ಪೂರೈಸಲ್ಪಡಬೇಕು: (ಅ) ಸಾಲ ತೆಗೆದುಕೊಂಡವನ ನಿಯಂತ್ರಣಕ್ಕೆ ಮೀರಿದ ಕಾರಣಗಳಿಂದ ಕೆಲಸವು ನಿಷ್ಫಲವಾಗೋಣ; (ಬ) ವಸೂಲಿಯ ಕೆಲಸವನ್ನು ಅಮಲಿನಲ್ಲಿ ತರುವದರಿಂದ ಕಡುತರವಾದ ಕಷ್ಟವುಂಟಾಗೋಣ. ಸೂಟು ಬಿಡುವ ಅಧಿಕಾರವನ್ನು ಕಲೆಕ್ಟರರಿಗೆ ಒಪ್ಪಿಸಿಕೊಡುವದನ್ನು ಎಫ್. ೫೩೨೪ (೧೭೧)-೧೯ ಇದರನ್ವಯ ಸಾಕಾರಿಸಲಾಗಿದೆ. ಆದರೆ ಈಗ ಅದನ್ನು, "೪೭, ಮಿಸ್." ಇದರನ್ವಯದ ಬಜೆಟದಲ್ಲಿಯ ತಜವೀಜಿಗೊಳಪಟ್ಟು ಕಮೀಶನರರ ಕಡೆಗೆ ಒಪ್ಪಿಸಿಕೊಡಲಾಗಿದೆ. "ಖಟ್ಲಾದ ಬಾಕಿಯೆಂದು ಬಿಟ್ಟುಬಿಟ್ಟ ವಸೂಲಾಗಲಾರದ ಹಂಗಾಮಿ ಸಾಲಗಳು," ಮತ್ತು (೧) ಪ್ರತಿಭಾಗದ ಸಲುವಾಗಿ ೧೦,೦೦೦ ರೂಪಾಯಿಗಳ, (೨) ಪ್ರತಿಯೊಂದು ಜಿಲ್ಹೆಯಲ್ಲಿ, ಎರಡೂ ಆಕ್ಟುಗಳನ್ವಯ ಬಾಕಿ ಉಳಿದ ಒಟ್ಟು ಸಾಲದ ನೂರಕ್ಕೆ ಒಂದರಷ್ಟು, ವಾರ್ಷಿಕ ಮರ್ಯಾದೆಯ ವರೆಗೆ ವಸೂಲಾಗಲಾರದ್ದೆಂದು ಖಟ್ಲಾದ ಬಾಕಿ ಎಂದು ಬಿಟ್ಟುಬಿಡಲಾದ ಯಾವದೇ ರಕಮನ್ನು ಈ ಲೆಕ್ಕದಲ್ಲಿ ಸೇರಿಸಬೇಕು (ಎಫ್. ೧೩೯೪–೨೩).

ಸನ್ ೧೯೨೫ನೇ ಇಸವಿಯ ಅಕ್ಟೋಬರ ತಿಂಗಳ ೧ನೇ ತಾರೀಖಿನಿಂದ, ಇಡೀ ಮಧ್ಯಭಾಗದಲ್ಲಿ (ಪೂರ್ವ ಖಾನದೇಶ ಹಾಗೂ ಪಶ್ಚಿಮ ಖಾನದೇಶವನ್ನು ಬಿಟ್ಟು) ಮತ್ತು ವಿಜಾಪೂರದಲ್ಲಿ ಹಾಗೂ ಮಿತಿಯಲ್ಲಿ, ಚಾಜ್ರೋದಲ್ಲಿ, ದಿಸ್ಲೋ ಹಾಗೂ ನಗರ ಪಾರ್ಕರದಲ್ಲಿ ಬಾವಿಗಳಿಗಾಗಿ ಕೊಟ್ಟ ಸಾಲದ ಪೈಕಿ, ಬಾವಿಗಳು ನಿರುಪಯುಕ್ತವಾಗಿದ್ದರಿಂದ ಬಾಕಿ ಉಳಿದ ಸಾಲಗಳ ಮೇಲಿನ ಬಡ್ಡಿಯನ್ನು ಸೂಟ ಬಿಡಬೇಕೆಂದು ಸರಕಾರದವರು ಠರಾಯಿಸಿದ್ದಾರೆ (ಆರ್. ೩೪೭೪, ತಾರೀಖು ೨೮ನೇ ಎಪ್ರಿಲ ಸನ್ ೧೯೨೭ನೇ ಇಸವಿ). "ನಿರುಪಯುಕ್ತವಾದದ್ದು" ಅಂದರೆ, ಸೌಳಿದ್ದ ಅಥವಾ ಒಣಗಿದ್ದ ಕಾರಣದಿಂದ ನೀರುಣಿಸುವದರ ಸಲುವಾಗಿ ಎಂದಿಗೂ ಉಪಯೋಗಿಸದಿದ್ದದ್ದು ಎಂದರ್ಥವಾಗುತ್ತದೆ: ಆದರೆ ಗೊತ್ತುಪಡಿಸುವದೇನೆಂದರೆ, ಬಾವಿಯು ಸಾಲ ತೆಗೆದುಕೊಂಡವನ ತಾತ್ಸಾರದಿಂದ ಅಥವಾ ತಪ್ಪಿನ ಕಾರಣದಿಂದ ನಿರುಪಯುಕ್ತವಾಗಿರಬಾರದು (ಎಫ್. ಎಲ್. ೩೭೧, ತಾರೀಖು ೩೦ನೇ ಜೂನ ಸನ್ ೧೯೨೫ನೇ ಇಸವಿ ಹಾಗೂ ೧೦ನೇ ಸಪ್ಟೆಂಬರ ಸನ್ ೧೯೨೫ನೇ ಇಸವಿ).

ಬಡ್ಡಿಯನ್ನು ಸೂಟು ಬಿಡುವದಲ್ಲದೆ, ನಿರುಪಯುಕ್ತವಾದ ಬಾವಿಗಳ ಸಂಬಂಧದ ಸಾಲಗಳ ಬಾಕಿ ಉಳಿದ ರಕಮಿನ ಪೈಕಿ ನೂರಕ್ಕೆ ೨೦ರಷ್ಟನ್ನು ಸೂಟು ಬಿಡಲಾಗುವದು. ಮೇಲೆ ನಮೂದಿಸಿದ ಕ್ಷೇತ್ರಗಳಲ್ಲಿ ಇನ್ನುಮುಂದೆ ನಿರುಪಯುಕ್ತವಾಗಬಹುದಾದ ಯಾವತ್ತು ಬಾವಿಗಳಿಗೆ ಈ ಸವಲತ್ತನ್ನು ಕೊಡಲಾಗುವದು, ಆದರೆ ಹೀಗೆ ನಿರುಪಯುಕ್ತವಾಗೋಣವು, ಸಾಲ ತೆಗೆದುಕೊಂಡವರ ಯಾವದೇ ತಪ್ಪಿನಿಂದ ಅಥವಾ ತಾತ್ಸಾರದಿಂದ ಆಗಿರಬಾರದು.

(೫) ತಗಾಯಿಯು ಸಾಲದ ಲೆಕ್ಕದ ಸದರಿರುವದರಿಂದ, ಯಾವದೇ ರಕಮನ್ನು ಸೂಟು ಬಿಟ್ಟಾಗ್ಯೂ ಅಥವಾ ಖಟ್ಟಾದ ಬಾಕಿಯೆಂದು ಬಿಟ್ಟುಕೊಟ್ಟಾಗ್ಯೂ, ಅದನ್ನು ವಸೂಲಿಯೆಂದು ಜಮಾ ಹಿಡಿದು "೪೭-ಮಿಸ್ಸೆಲೇನಿಯಸ್; ವಸೂಲಾಗಲಾರದ ಸಾಲಗಳೆಂದು ಬಿಟ್ಟುಕೊಟ್ಟದ್ದು." ಎಂಬದರ ಕೆಳಗೆ ಖರ್ಚೆಂದು ಖರ್ಚು ಹಾಕಬೇಕು. ಸೂಟು ಬಿಡುವದೆಂದರೆ, ಹಣವನ್ನು ಸಾಲಗಾರನು ಕೊಡುವದರ ಬದಲಾಗಿ ಸರಕಾರದವರು ಅದನ್ನು ನಿಜವಾಗಿ ಕೊಡುವದೆಂಬದನ್ನು ನಮ್ಮ ಜ್ಞಾಪಕಕ್ಕೆ ತಂದುಕೊಳ್ಳುವದಕ್ಕೆ ಇದರಿಂದ ನಮಗೆ ಸಹಾಯವಾಗುತ್ತದೆ.

(೬) ಮೇಲಿನ ಶರಾಗಳು, ಮುಖ್ಯವಾಗಿ, ಸೂಟ ಬಿಟ್ಟ ಹಾಗೂ ಖಟ್ಟಾದ ಬಾಕಿಯೆಂದು ಬಿಟ್ಟುಬಿಟ್ಟ ಅಸಲಿಗೆ ಲಾಗೂ ಆಗುತ್ತವೆ. ಬಡ್ಡಿಯನ್ನು, ಖಟ್ಟಾದ ಬಾಕಿಯೆಂದು ಬಿಟ್ಟುಬಿಟ್ಟರೆ, ಅದನ್ನು ಸಾಲದ ಖಾತೆಗೆ ಜಮಾ ಹಿಡಿಯಲಾಗುವದಿಲ್ಲ ಅಥವಾ ಮಿಸ್ಸೆಲೇನಿಯಸ್‌ದ ಖಾತೆಗೆ ಖರ್ಚು ಹಾಕಲಾಗುವದಿಲ್ಲ. ಇತರ ಯಾವದೊಂದು ಮಹಸೂಲನ್ನು ವಸೂಲ ಮಾಡುವದಕ್ಕೆ ತಪ್ಪುವಂತೆ ಇದಾದರೂ ಕೇವಲ ವಸೂಲಾಗದ ಮಹಸೂಲಿರುತ್ತದೆ. ಆದರೆ, ಈ ಮೇರೆಗೆ ಇತರ ಸಾಲ ತೆಗೆದುಕೊಂಡವರನ್ನು ಉದಾರಮನಸ್ಸಿನಿಂದ ನಡಿಸಿಕೊಳ್ಳುವದರಿಂದ ಸರಕಾರದವರ ಉತ್ಪನ್ನದ ಮೇಲೆ ಯಾವ ಪ್ರಕಾರದ ಪರಿಣಾಮವಾಗುತ್ತದೆಂಬದನ್ನು ೧೧ನೇ ಕಾನೂನಿನಲ್ಲಿ ವಿವರಿಸಲಾಗಿದೆ. ಆದ್ದರಿಂದ, ಮಾದರಿಯ ಲೆಕ್ಕಗಳಲ್ಲಿ ತೋರಿಸಲಾಗುವಂತೆ, ಖಟ್ಟಾದ ಬಾಕಿಯೆಂದು ಬಿಟ್ಟುಬಿಟ್ಟ ಬಡ್ಡಿಯ ರಕಮನ್ನೂ ಅದರ ಕಾರಣಗಳನ್ನೂ ಷಾಣ್ಮಾಸಿಕ ಪತ್ರಕದಲ್ಲಿ ತೋರಿಸಲಾಗುತ್ತದೆ; ತ. ನ. ೯ನೇಪರ ಮೇಲಿನ ಶರಾಗಳ ೭ನೇ ಪ್ಯಾರಾವನ್ನು ನೋಡಿರಿ.

(೭) (ಅಸಲನ್ನು ಸಹ ಸೂಟು ಬಿಡಬೇಕಾದ ಪರಿಸ್ಥಿತಿಯಿದ್ದ ಹೊರ್ತು) ಬಡ್ಡಿಯನ್ನು ಎಂದಿಗೂ ಸೂಟ ಬಿಡತಕ್ಕದ್ದಲ್ಲ; (ಎಫ್. ೪೪೦೩-೦೧, ೧೯೫೫-೦೨, ೨೭೩೮-೦೫, ಆರ್. ೧೧೩೬೩-೦೬ ಇದರ ೬ನೇ ಪ್ಯಾರಾ, ಎಫ್ ೫೯೭೩-೦೭, ೫೯೬೬-೦೯); ಆದರೆ ವಸೂಲಾಗಲಾರದಿದ್ದರೆ, ಶಕ್ಯವಿರುವ ಯಾವತ್ತು ವಸೂಲಿಗಳನ್ನು ಮಾಡಲಾಗಿದೆಯೋ ಇಲ್ಲವೋ ಎಂಬದನ್ನು ನಾವು ಮೊದಲಿಗೆ ನೋಡುತ್ತೇವೆ: ಮತ್ತು ಬರತಕ್ಕ ಬಡ್ಡಿಯು ಬಾಕಿ ಉಳಿದಾಗ ಯಾವದೇ ರಕಮನ್ನು ಅಸಲೆಂದು ಜಮಾ ಹಿಡಿದಿದ್ದರೆ, ಸದರಿ ರಕಮನ್ನು (ಅಥವಾ ಅದರ ಪೈಕಿ ಸಾಕಷ್ಟು ಭಾಗವನ್ನು) ಬಡ್ಡಿಯೆಂದು ಜಮಾ ಹಿಡಿಯಬೇಕು (ಎಫ್. ೫೯೭೬-೦೯). ಬಡ್ಡಿಯ ಖಾತೆಗೆ ಜಮಾ ಮಾಡಲಿಕ್ಕೆ ಬರುವ ಯಾವದೇ ವಸೂಲಾದ ರಕಮು ಉಳಿದಿಲ್ಲದಿದ್ದಾಗ ಮಾತ್ರ, ಆ ವರೆಗೆ ಹುಟ್ಟಿದ ಬಡ್ಡಿಯನ್ನು ಖಟ್ಟಾದ ಬಾಕಿಯೆಂದು ಬಿಟ್ಟುಬಿಡಬಹುದು.

೪೭—ಮಿಸ್ಸೆಲೇನಿಯಸ್-ವಸೂಲಾಗಲಾರದ ಹಂಗಾಮಿ ಸಾಲಗಳನ್ನು ಬಿಟ್ಟುಬಿಟ್ಟದ್ದು ಎಂಬ ಒಂದೇ ಒಂದು ಖರ್ಚಿನ ಸದರಿನ ಕೆಳಗೆ ಯಾವತ್ತು ಸೂಟು ಬಿಟ್ಟ ಹಾಗೂ ಖಟ್ಟಾದ ಬಾಕಿಯೆಂದು ಬಿಟ್ಟುಬಿಟ್ಟ ರಕಮುಗಳನ್ನು ಬರೆಯಬೇಕೆಂಬದೂ, ಅಕೌಂಟಂಟ್ ಜನರಲ್‌ನ ಕಡೆಯಿಂದ ಬರತಕ್ಕ ಆರ್ಥಿಕ ಪರಿಣಾಮದ ವಿಷಯದ ಪತ್ರಕದ ಕಾರಣದ ಸಲುವಾಗಿ ಬಡ್ಡಿಯ ಖಾತೆಗೆ ಶಕ್ಯವಿದ್ದ ಮಟ್ಟಿಗೆ ಜಮಾ ಮಾಡುವದೂ ಇದರ ಸ್ಪಷ್ಟವಾದ ಉದ್ದೇಶವಿರುತ್ತದೆ (೧೧ನೇ ಕಾನೂನಿನ ಟಿಪ್ಪಣಿಯನ್ನು ನೋಡಿರಿ).

## ಲೆಕ್ಕಗಳನ್ನು [೨೯] ಹ್ಯಾಗಿಡಬೇಕು.

೨೧. ಯಾವತ್ತು ಪ್ರಕಾರದ ಸಾಲಗಳ ಸಲುವಾಗಿರುವ ಲೆಕ್ಕಗಳನ್ನು, ಸರಕಾರದವರು ಕಾಲಕಾಲಕ್ಕೆ ಠರಾಯಿಸಬಹುದಾದ ನಮೂನೆಯಲ್ಲಿಡತಕ್ಕದ್ದು.

[೨೯] ಮಂಜೂರಾದ ಲೆಕ್ಕಗಳ ಯೋಜನೆಯು ೨ನೇ ಭಾಗದಲ್ಲಿರುತ್ತದೆ.

## ಸಹಕಾರೀ ಸಂಘಗಳು: ಭೂಮಿಯ ಸುಧಾರಣೆಯ ಸಲುವಾಗಿರುವ ಸಾಲಗಳ ವಿಷಯದ ಕಾನೂನುಗಳು.

### ಸನ್ ೧೮೮೩ನೇ ಇಸವಿಯ ಭೂಮಿಯ ಸುಧಾರಣೆಯನ್ನು ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟಿನ ೧೦ನೇ ಕಲಮಿನನ್ವಯದ ಕಾನೂನುಗಳು.

ಸಾಮಾನ್ಯವಾಗಿ ಯಾವತ್ತು ಕಾನೂನುಗಳು, ಅವುಗಳ ವಿರುದ್ಧವಾಗಿ ಠರಾಯಿಸಿದ್ದ ಹೊರ್ತು, ಲಾಗೂ ಆಗುತ್ತವೆ.

೨. ರೆಜಿಸ್ಟ್ರಾರನು "ಅ" ಹಾಗೂ "ಬ" ವರ್ಗದ ಸಂಘಗಳಿಗೆ ಹಾಗೂ ಅವುಗಳ ಮೆಂಬರರಿಗೆ ಮಾತ್ರ ಸಾಲಗಳನ್ನು ಕೊಡಬಹುದು, ಮತ್ತು ಪ್ರಾಂತಿಕ ಸಹಕಾರೀ ಬ್ಯಾಂಕುಗಳಲ್ಲಿ ಅವನ ಖಾತೆಗೆ ವಾರ್ಷಿಕ ರಕಮುಗಳನ್ನು ಜಮಾ ಮಾಡಲಾಗುತ್ತದೆ. ಸಾಲಗಳನ್ನು ಕೊಡಲಿಕ್ಕೆ ಬ್ಯಾಂಕು ಸಮ್ಮತಿಕೊಡಬೇಕು ಮತ್ತು ಅವುಗಳನ್ನು ವಾಡಿಕೆಯಾಗಿ ಜಿಲ್ಹಾ ಮಧ್ಯವರ್ತೀ ಬ್ಯಾಂಕಿನ ಮುಖಾಂತರ ಹಂಚಲಾಗುತ್ತದೆ. ಬಡ್ಡಿಯ ದರಗಳು ಬ್ಯಾಂಕಿನಿಂದ ಗೊತ್ತುಮಾಡಲ್ಪಡುತ್ತವೆ ಹಾಗೂ ಅವುಗಳನ್ನು ರೆಜಿಸ್ಟ್ರಾರನು ಮಂಜೂರು ಮಾಡುತ್ತಾನೆ. ಯಾವದೊಂದು ಸಂಘಕ್ಕೆ ತನ್ನ ಕಾನೂನುಗಳನ್ವಯ ಈ ಬಗ್ಗೆ ಅಧಿಕಾರ ಕೊಡಲ್ಪಟ್ಟರೆ, ಅದು ತನ್ನ ಮೆಂಬರರ ಯೋಜನೆಗಳನ್ನು ಸ್ವತಃ ತನ್ನ ಸಿಬಂದಿಯಿಂದ ಕಾರ್ಯಕಾರಿಯಾಗಿ ಮಾಡಿಸಬಹುದು.

೩. ರೆಜಿಸ್ಟ್ರಾರನು, ತಗಾಯಿಯ ಸಾಮಾನ್ಯ ಕಾನೂನುಗಳನ್ವಯ ಸಾಲಗಳನ್ನು ಹಿಂತಿರಿಗಿ ಕೊಡುವದನ್ನು ತಹಕೂಬಿಡಬಹುದು. ಬ್ಯಾಂಕು ಮತ್ತು ಸಂಘವು ತಮ್ಮತಮ್ಮ ತಗಾಯಿ ಲೆಕ್ಕಗಳನ್ನು ಪ್ರತ್ಯೇಕವಾಗಿಡಬೇಕು.

೪. ಯಾವದೊಂದು ಸಂಘವು ಅಥವಾ ಯಾವನೊಬ್ಬ ಮೆಂಬರನು, ಸಮಾಯಿಕ* ಅಥವಾ ವೈಯಕ್ತಿಕ ಸುಧಾರಣೆಯ ಸಲುವಾಗಿರುವ ಸಾಲಗಳ ಬಗ್ಗೆ ಅರ್ಜಿ ಮಾಡುವಾಗ, ಶೇತಕೀ ಖಾತೆಯವರ (ಡೆಪ್ಯುಟಿ ಡೈರೆಕ್ಟರವರ) ಆಲೋಚನೆಯ ಹಾಗೂ ಸಮ್ಮತಿಯ ಮೇರೆಗೆ ತಯಾರಿಸಿದ ಪದ್ಧತಿಗನುಸಾರವಾದ ಪ್ಲಾನು ಮುಂತಾದವುಗಳ ಸಹಿತವಾಗಿ ಒಂದು ಒಟ್ಟುಗೂಡಿಸಲಾದ ನಮೂನೆಯನ್ನು (ಹಣದ ಪರಿಸ್ಥಿಯ ಸಂಬಂಧದ ಯಾವತ್ತು ತಪಶೀಲುಗಳಿರುವ) ಅದರ ಮೇಲೆ ಕಲೆಕ್ಟರನ

(ಅವನು ಎಕ್ಸಿಕ್ಯೂಟಿವ್ ಎಂಜಿನಿಯರನ ಆಲೋಚನೆ ಕೇಳಬಹುದು) ಸಹಿ ಮಾಡಿಸಿ ಅಸಿಸ್ಟಂಟ ರೆಜಿಸ್ಟ್ರಾರನ ಕಡೆಗೆ ಕಳುಹಿಸಬೇಕು. ಪ್ರತಿಯೊಬ್ಬ ಮೆಂಬರನು ಸಹಿ ಮಾಡಬೇಕು, ಮತ್ತು ಸುಧಾರಣೆಯನ್ನು ಮಾಡಲಿಕ್ಕೆ ಹಕ್ಕುಳ್ಳ ಮೆಂಬರರ ಲೇಖೀ ಸಮ್ಮತಿಯನ್ನು ಇದರ ಜೊತೆಗಿಡಬೇಕು. ಸದರಿ ನಮೂನೆಯನ್ನು, ಫೆಬ್ರುವರಿ ತಿಂಗಳ ೧ನೇ ತಾರೀಖಿನೊಳಗಾಗಿ ಬ್ಯಾಂಕಿಗೆ ಕಳುಹಿಸಬೇಕು, ಮತ್ತು ಯಾವ ದೊಂದು ಪ್ರಾಂತಿಕ ಬ್ಯಾಂಕು ಇದನ್ನು ಮಾರ್ಚ ತಿಂಗಳ ೧೫ನೇ ತಾರೀಖಿನೊಳ ಗಾಗಿ ಒಟ್ಟುಗೂಡಿಸಬೇಕು. ಆ ಮೇಲೆ ರೆಜಿಸ್ಟ್ರಾರನು ಶರ್ತುಗಳನ್ನು ಗೊತ್ತು ಮಾಡಿ ಕೊನೆಯ ಹುಕುಮುಗಳನ್ನು ಕೊಡುವನು, ಮತ್ತು ಬ್ಯಾಂಕು ಹಾಗೂ ಸಂಘವು ಹಣವನ್ನು ಹಂಚಿಕೊಡುವದು. ಈ ಸಾಲಗಳು ಸಹಕಾರೀ ಸಾಲ ಗಳೆಂದು ತಿಳಿಯಲ್ಪಡುವದರಿಂದ, ಯಾವದೇ ಠರಾಯಿಸಲ್ಪಟ್ಟ ನಮೂನೆಯ ಅವಶ್ಯ ಕತೆಯಿರುವದಿಲ್ಲ. ಸಮಾಯಿಕ ಯೋಜನೆಗಳನ್ನು ಹೆಚ್ಚಿಗೆ ಪಸಂತು ಮಾಡಬೇಕು, ಮತ್ತು ಪ್ರತ್ಯೇಕ ತಗಾಯಿ ಸಾಲಗಳನ್ನು, ಲಾಯಖಿಯಿಲ್ಲದ ಮೆಂಬರರಿಗಲ್ಲದೆ ಬೇರೆ ಯಾರಿಗೂ ಕೊಡಬಾರದು. ಕೆಲಸಗಳು ಅಸಿಸ್ಟಂಟ ರೆಜಿಸ್ಟ್ರಾರನಿಂದ ಹಾಗೂ ಆಡಿ ಟರರಿಂದ ತಪಾಸಿಸಲ್ಪಡಬೇಕು, ಮತ್ತು ಅವುಗಳನ್ನು, ಕಲೆಕ್ಟರನು ಹಾಗೂ ರೆವಿನ್ಯೂ ಮತ್ತು ಪಬ್ಲಿಕ್ ವರ್ಕ್ಸ ಖಾತೆಯವರು ಹಾಗೂ ಶೇತಕೀ ಖಾತೆಯ ಅಮಲದಾರರು ತಪಾಸಿಸಬಹುದು.

೫. ದುರುಪಯೋಗ ಮಾಡಿದ್ದರೆ ಅಥವಾ ಕೆಲಸವು ನಿರುಪಯುಕ್ತವಾದರೆ, ಅದರ ಬಗ್ಗೆ ರೆಜಿಸ್ಟ್ರಾರನ ಕಡೆಗೆ ರಿಪೋರ್ಟ ಮಾಡಬೇಕು. ದುಷ್ಕಾಳದಲ್ಲಿ ಸರಕಾರದವರು ಈ ಕಾನೂನುಗಳ ಅಮಲನ್ನು ತಹಕೂಬಿಡಬಹುದು. ಯಶಸ್ವಿಯಾಗದಿದ್ದ ನೀರಿನ (೧೦೬ನೇ ಪುಟದ ಮೇಲಿನ ೨೦ನೇ ಕಾನೂನಿನ ३ನೇ ಪ್ಯಾರಾ) ಸಲುವಾಗಿ ತೆಗೆದ ಬೋರಿಂಗಕ್ಕೆ ವಾಡಿಕೆಯ ಸವಲತ್ತುಗಳನ್ನು ಕೊಡಲಾಗುವದು. ಹಕ್ಕುಗಳ ಪತ್ರಿಕೆ ಯನ್ವಯ ಧಾರಣ ಮಾಡಿದ ಭೂಮಿಯ ತಪಶೀಲುಗಳು ಸರಿಯಾಗಿರುತ್ತವೆಂದು ತಲಾಟಿಗಳು ದಾಖಲೆ ಕೊಡಬೇಕು.

* ಸನ್ ೧೯೩೫ನೇ ಇಸವಿಯ ಎಪ್ರಿಲ ತಿಂಗಳ ೧೭ನೇ ತಾರೀಖಿನ [ಸನ್ ೧೯೩೫ನೇ ಇಸವಿಯ ಎಪ್ರಿಲ ತಿಂಗಳ ೨೫ನೇ ತಾರೀಖಿನ ಮುಂಬಯಿ ಸರ ಕಾರೀ ಗ್ಯಾಝೇಟಿನ (ಇಂಗ್ರಜಿ) ೧ನೇ ಭಾಗದ ೧೯೭೦ನೇ ಪುಟ] ३೭-ಅ ನಂಬರಿನ ಜಾಹೀರನಾಮೆಯಿಂದ ಸುಧಾರಿಸಲ್ಪಟ್ಟ ಕಾನೂನುಗಳು.

## ಹೊಲ ಮಾಡುವವರ ಸಾಲಗಳ ಆಕ್ಟಿನನ್ವಯದ ಕಾನೂನುಗಳು.

೧. ಭೂಮಿಯ ಸುಧಾರಣೆ ಮಾಡುವ ವಿಷಯದ ಆಕ್ಟಿನ ೧೦ನೇ ಕಲಮಿನನ್ವಯವಿರುವ, ೧ನೇ, ३ನೇ, ४ನೇ, ೫ನೇ, ೬ನೇ, ೭ನೇ, ೮ನೇ, ೧೧ನೇ, ೧೨ನೇ, ೧೭ನೇ, ೧೮ನೇ, ೧೯ನೇ, ೨೦ನೇ ಹಾಗೂ ೨೧ನೇ ಕಾನೂನುಗಳನ್ನು ಇಲ್ಲಿ ಪುನಃ ಓದತಕ್ಕದ್ದು.

## ಕೆಲವು ಅಮಲದಾರರನ್ನು ನೇಮಿಸುವ ವಿಷಯದಲ್ಲಿ ಸರಕಾರದವರಿಗಿರುವ ಅಧಿಕಾರವು.

೨. ಸರಕಾರದವರು, ಸಾಮಾನ್ಯ ಅಥವಾ ವಿಶಿಷ್ಟ ಹುಕುಮು ಮಾಡಿ, ಯಾವನೊಬ್ಬ ಕಲೆಕ್ಟರನ, ಪ್ರಾಂತ ಅಮಲದಾರನ, ಮಾಮಲೇದಾರನ ಅಥವಾ ಮಹಾಲಕರಿಯ ಕರ್ತವ್ಯಗಳನ್ನು ಮಾಡುವದರ ಸಲುವಾಗಿ, ಯಾವನೇ ಮನುಷ್ಯನನ್ನು (ಖಾಸಗಿ ಗೃಹಸ್ಥನನ್ನು ಹಿಡಿದು) ಈ ಕಾನೂನುಗಳ ಉದ್ದೇಶಗಳ ಸಲುವಾಗಿ ನೇಮಿಸಬಹುದು.

## ಯಾವ ಉದ್ದೇಶಗಳ [೩೦] ಸಲುವಾಗಿ [೩೧] ಸಾಲಗಳನ್ನು ಕೊಡಬಹುದು.

೩. ಸಾಗುವಳಿಗೆ ಯೋಗ್ಯವಾಗಿರುವ ಭೂಮಿಯನ್ನು ಧಾರಣ ಮಾಡುವವರಿಗೆ ಈ ಕೆಳಗಿನ ಉದ್ದೇಶಗಳ ಸಲುವಾಗಿ ಸಾಲಗಳನ್ನು ಕೊಡಬಹುದು:—

(ಅ) ಬೀಜವನ್ನು [೩೨] ಸಸಿಗಳನ್ನು, ಮೇವನ್ನು, ಜನಾವರಗಳನ್ನು, ಕ್ಷೇತ್ರಕೀ ದನಗಳನ್ನು ಹಾಗೂ ಬಾವಿಯ ಕಪ್ಪಲಿಗಳನ್ನು (ಬಕೇಟುಗಳನ್ನು), ಹಗ್ಗಗಳನ್ನು ಮತ್ತು ಪಂಪಿಂಗ್ ಬಾರುಗಳನ್ನು ಹಿಡಿದು, ಕ್ಷೇತ್ರಕೀ ಸಾಧನಗಳನ್ನು ಮತ್ತು ಗೊಬ್ಬರವನ್ನು ಕೊಂಡುಕೊಳ್ಳುವದು, ಹಾಗೂ ಜನಾವರಗಳನ್ನು ಅಥವಾ ಕ್ಷೇತ್ರಕೀ ಸಾಧನಗಳನ್ನು ಬಾಡಿಗೆಯಿಂದ ತಕ್ಕೊಳ್ಳುವದು;

(ಬ) ನೆರೆಯಿಂದಾಗಲಿ, ಬರದಿಂದಾಗಲಿ, ಇತರ ಯಾವದೋ ಅನಾಹುತದಿಂದಾಗಲಿ [೩೩] (ಅನ್. ೧೯೩೧-೩೨) ನಾಶವಾದ [೩೪] ಮನೆಗಳನ್ನು ಪುನಃ ಕಟ್ಟಿಸುವದು;

(ಕ) ಭೂಮಿಯ ಸುಧಾರಣೆ ಮಾಡುವದಕ್ಕೋಸ್ಕರ ಸಾಲಗಳನ್ನು ಕೊಡುವ ಕಾಯದೆಯಲ್ಲಿ ನಿರ್ದಿಷ್ಟ ಮಾಡಿರುವ

ಹಾಗೂ ಶೇತಕೀ ಉದ್ದೇಶಗಳಿಗೆ ಸಂಬಂಧಿಸುವ ಇತರ ಯಾವದೇ ಉದ್ದೇಶ [೩೯].

(ಡ) ಮುಂದಿನ ೧೧ನೇ ಪುಟದಲ್ಲಿ ೨ನೇ ಪ್ಯಾರಾವನ್ನು ನೋಡಿರಿ.

ಸಹಕಾರೀ ಸಂಘಗಳ ಸಲುವಾಗಿ (೨೨ನೇ ಪುಟ ನೋಡಿರಿ.)

೪. ಸಾಲವನ್ನು ಹಿಂತಿರಿಗಿ ಕೊಡಬಹುದಾದ ಠರಾಯಿಸಲ್ಪಟ್ಟ ಪರಮಾವಧಿಯ ಅವಧಿಗಳು ೩೦ ಈ ಕೆಳಗಿನಂತಿರುತ್ತವೆ:—

| — | ಸಾಲ ಮಂಜೂರ ಮಾಡುವವನಿಂದ. | ವಿಶಿಷ್ಟವಾಗಿ ಅಧಿಕಾರ ಪಡೆದ ಮಾಮಲೇದಾರನಿಂದ ಅಥವಾ ಪ್ರಾಂತ ಅಮಲದಾರನಿಂದ. |
|---|---|---|
| ಬೀಜ ಹಾಗೂ ಗೊಬ್ಬರ ಮತ್ತು ಜನಾವರಗಳನ್ನು ಬಾಡಿಗೆಯಿಂದ ತಕ್ಕೊಳ್ಳೋಣ. | ೧ | ೨ |
| ತಿನ್ನುವ ಖರ್ಚಿನ, ಕಳೆ ತೆಗಿಸುವ, ಮೇವಿನ, ಪ್ರಯೋಗಾತ್ಮಕ ತೆಗ್ಗುಗಳ, ತೊಗಲಿನ ಕಪ್ಪಲಿಗಳ, ಮಣ್ಣನ್ನು ತೆಗೆದು ಹಾಕುವ ಹಾಗೂ ಈ ಪ್ರಕಾರದ ಇತರ ಉದ್ದೇಶಗಳ ಸಲುವಾಗಿ. | ೨ | ೪ |
| ಜನಾವರಗಳ ಸಲುವಾಗಿ ಅಥವಾ ಮನೆ ಕಟ್ಟುವದರ ಸಲುವಾಗಿ, ಅಥವಾ ಬಹಳ ದಿವಸಗಳ ವರೆಗೆ ಬಾಳುವ ಪ್ರಕಾರದ ಉಪಕರಣಗಳ ಸಲುವಾಗಿ. | ೪ | ೮ |

[೩೦] ಸಾಲಗಳನ್ನು ಎಷ್ಟು ಅವಧಿಯೊಳಗಾಗಿ ತಿರಿಗಿ ಕೊಡತಕ್ಕದ್ದೆಂಬ ವಿಷಯದ ಸಾಮಾನ್ಯ ತತ್ವಗಳ ಬಗ್ಗೆ, ಪ್ರಾಸ್ತಾವಿಕ ವಿಚಾರಗಳ ೯ನೇ ಪ್ಯಾರಾವನ್ನು ನೋಡಿರಿ, ಮತ್ತು ಮೇಲೆ ನಿರ್ದಿಷ್ಟ ಮಾಡದಿರುವ ಬಾಬತುಗಳಲ್ಲಿ, ಸದರಿ ಕಾನೂನಿನಲ್ಲಿರುವ ಅದಕ್ಕೆ ಬಹಳ ಮಟ್ಟಿಗೆ ಸರಿಹೋಲುವ ನೋಂದುಗಳನ್ನನು ಸರಿಸಿರಿ.

[೩೧] ಹೊಲ ಮಾಡುವವರ ಸಾಲಗಳ ಆಕ್ಟಿನ ತತ್ವಗಳ ಸಲುವಾಗಿ, ಎಫ್. ೨೮೫–೧೧ ಇದನ್ನು ನೋಡಿರಿ.

ಎಫ್. ೧೮೮೧—೧೫–೭–೨೪ .ಇದರಲ್ಲಿ, ಸರಕಾರದವರು, ಈ ಸಾಲಗಳನ್ನು ದುರ್ಭಿಕ್ಷದ ಕಾಲದಲ್ಲಿ ಅಥವಾ ಬೆಂಕಿಯ ಅಥವಾ ಮಹಾಪೂರಿನ ಅನಾಹುತದಂಥ

ಅಸಾಮಾನ್ಯ ಪರಿಸ್ಥಿತಿಗಳಲ್ಲಿ ಮಾತ್ರ ಕೊಡಬೇಕೆಂದು ಠರಾಯಿಸಿರುತ್ತಾರೆ (ಎಫ್. ೧೮೮೧—೨೬—೮—೨೭); ಆದರೆ ವಿಶಿಷ್ಟವಾಗಿ ಹಿಂದುಳಿದಂಥವು, ನಿಯಂತ್ರಿತ ಗೇಣಿ ದಾರಿಕೆಯಿಂದ ತೊಂದರೆಗೀಡಾದಂಥವು ಅಥವಾ ಇತರ ಪರಿಸ್ಥಿತಿಯ ಮೂಲಕ ಸವಲತ್ತುಗಳನ್ನು ಪಡೆಯಲಿಕ್ಕೆ ಯೋಗ್ಯವಾದಂಥವು ಎಂದು ಕಮಿಶನರರು ಬೇರ್ಪಡಿಸುವ ಪ್ರದೇಶಗಳಲ್ಲಿ§ ಈ ನಿರ್ಬಂಧವನ್ನು ಪಾಲಿಸುವದು ಅವಶ್ಯ ವಿರುವದಿಲ್ಲ. ವಿಶಿಷ್ಟ ಕ್ಷೇತ್ರಗಳಲ್ಲಿ ಯಾವತ್ತು ಸಾಲಗಳು ಸಹಕಾರೀ ಸಂಘ ಗಳಿಂದ ಹಂಚಲ್ಪಡಬೇಕೆಂದು ಸರಕಾರದವರು (ದುರ್ಭಿಕ್ಷದ ಕಾಲದಲ್ಲಿ ಈ ಹುಕುಮನ್ನು ಹಿಂತೆಗೆದುಕೊಳ್ಳುವ ಹಕ್ಕನ್ನು ಕಾದಿಟ್ಟುಕೊಂಡು) ಫರ್ಮಾಯಿಸ ಬಹುದು.

ಆದರೆ (ಎಫ್. ೧೮೮೧—೫—೬—೨೫) ಇದರನ್ವಯ ಸರಕಾರದವರು, ಸಂಘಗಳ ಮೆಂಬರರಿಗೆ (ಇವರಿಗೆ ೨೨-೨೫ನೇ ಪುಟಗಳಲ್ಲಿರುವ ಮಜಕೂರು ಲಾಗೂ ಆಗುತ್ತದೆ) ಅಲ್ಲದೆ ಇತರರಿಗೆ ಈ ಪ್ರದೇಶಗಳಲ್ಲಿ ಇನ್ನೂ ಮುಲ್ಕಿ ಅಮಲದಾರರು ಹಂಚಬೇಕೆಂದು ಕಾನೂನು ಮಾಡಿದ್ದಾರೆ.

[೩೨] ಕುಲಾಬಾ ಜಿಲ್ಲೆಯಲ್ಲಿ ಬೀಜವು ಬೆಂಕಿಯ ಮೂಲಕ ನಷ್ಟವಾದಾಗ, ಹಾಗೂ "ಹೀಗೆ ನಷ್ಟ ಒದಗಿದ ಕ್ಷೇತ್ರದಲ್ಲಿ" ಸಾಲವನ್ನು ದೊರಕಿಸಲಿಕ್ಕೆ ಬರುವಂತೆ ಯಾವದೇ ಸಂಘವಿಲ್ಲದಿದ್ದಾಗ, ಕಲೆಕ್ಟರನು ಪ್ರತ್ಯಕ್ಷವಾಗಿ ಸಾಲವನ್ನು ಕೊಡಬಹುದು. (ಎಫ್. ೧೮೮೧—೨೪—೬—೨೬).

§ ಈ ಕೆಳಗಿನ ತಾಲೂಕುಗಳು ಹಾಗೂ ಮಹಾಲುಗಳು ವಿಶಿಷ್ಟವಾಗಿ ನಿರ್ದಿಷ್ಟ ಮಾಡಲ್ಪಟ್ಟ ಪ್ರದೇಶಗಳಿರುತ್ತವೆಂದು ವ್ಯಾಖ್ಯಾಯಿಸಲಾಗಿದೆ (ಎಫ್. ೧೮೮೧—೫—೬—೨೫):—

ಉತ್ತರ ಭಾಗ.—ವಿರಮಗಾಂವ, ಧಂಧೂಕಾ, ಧೋಲಕಾ, ಮೊಡಾಸಾ, ಗೋಘೋ, ಗೋಧ್ರಾ (ಪಾನಮ ನದಿಯ ಪೂರ್ವ), ಝಾಲೋದ, ದೋಹಾದ, ವಾಡಾ, ಮೊಖಾಡಾ; ಮತ್ತು ದಹಾನುದಲ್ಲಿ ಉಂಬರಗಾವವನ್ನು ಹಿಡಿದು, ಬಿ. ಬಿ. ಎಂಡ್ ಸಿ. ಆ್ಯ. ರೇಲ್ವೆಯ ಪೂರ್ವಕ್ಕಿರುವ ಯಾವತ್ತು ಗ್ರಾಮಗಳು.

ಮಧ್ಯ ಭಾಗ.—ಪೇಠ, ಸಂಗೋಲಾ, ಮಾಲ್ಶಿರಾಸ, ಕರ್ಮಾಲಾ, ಅಕೋಲಾ* (೧೨೧ ಗುಡ್ಡಗಾಡ ಗ್ರಾಮಗಳು) ಯಾವಲ* (೨೪ ಗುಡ್ಡಗಾಡ ಗ್ರಾಮಗಳು) ಜಾಮ್ನೇರ* (೨೩ ಗ್ರಾಮಗಳು). ಯಾವಲ, ರಾವೇರ ಹಾಗೂ ಚೋಪಡಾದಲ್ಲಿಯ ಸಾತಪುಡಾದ ಜಂಗಲಿನ ಭಾಗವು; ಯಾವತ್ತು ಪಶ್ಚಿಮ ಖಾನದೇಶ ಜಿಲ್ಲೆ (ಎಫ್. ೧೮೮೧—೧೫—೪—೨೬); ಸಿರೂರ, ಧೋಂಡ, ಜುನ್ನಾರ* (೨೮—ಇ. ಗ್ರಾಮ ಗಳು) ಹವೇಲಿ* (೩೪—ಇ. ಗ್ರಾಮಗಳು), ಮತ್ತು ವೀರವಾಡೆ ಗ್ರಾಮ, ಚೋಪಡಾ (ಎಫ್. ೧೮೮೧—೬—೪—೨೭), ಮಾಣ ತಾಲೂಕು (ಎಫ್. ೧೮೮೧—೧೧—೭—೨೭), ಸಂಗಮ್ನೇರ (೨೨ ಗುಡ್ಡಗಾಡ ಗ್ರಾಮಗಳು—ಆರ್. ೯೮೮೬/೨೮—ತಾರೀಖು ೧೫ನೇ ಡಿಸೆಂಬರ ಸನ್ ೧೯೩೨.)

---

* ಸದರಿ ಠರಾವಿನಲ್ಲಿ ಯಾವತ್ತು ಗ್ರಾಮಗಳನ್ನು ತಪಶೀಲುವಾರಾಗಿ ಕೊಡ ಲಾಗಿದೆ. ಕಚೇರಿಯ ನಕಾಶದಲ್ಲಿ ಗೆರೆಯನ್ನು ಕೂಡಲೇ ಎಳೆಯಬಹುದು.

ದಕ್ಷಿಣ ಭಾಗ.—ಚಂದಗಡ ಮತ್ತು ಖಾನಾಪೂರ* (೩೫ ಪಶ್ಚಿಮದ ಹಾಗೂ ದಕ್ಷಿಣದ ಗ್ರಾಮಗಳು), ಧಾರವಾಡ* (೬೭ ನೈಋತ್ಯದಲ್ಲಿಯ ಗ್ರಾಮಗಳು), ಕಲಘಟಗಿ, ಹಾನಗಲ, ಕೋಡ, ಬಂಕಾಪೂರ, ನವಲಗುಂದ, ನರಗುಂದ, ಪರಸಗಡ (೧೫ ಆಗ್ನೇಯದ ಹಾಗೂ ಪೂರ್ವದ ಗ್ರಾಮಗಳು—ಆರ್. ೫೮೯/೨೮—ತಾರೀಖು ೨೨ನೇ ಡಿಸೆಂಬರ ಸನ್ ೧೯೩೦) ಯಾವತ್ತು ಕಾನಡಾ ಜಿಲ್ಲೆ (ಆರ್. ೮೨೦೧/೨೮—ತಾರೀಖು ೧೯ನೇ ಜನವರಿ ಸನ್ ೧೯೩೨) ಹಾಗೂ ಮುಂಡರಗಿ ಪೇಠಾ ಆರ್. ೬೪೨೭/೨೮—ತಾರೀಖು ೬ನೇ ಫೆಬ್ರುವರಿ ಸನ್ ೧೯೩೩).

ಧಾರವಾಡ ಜಿಲ್ಲೆಯೊಳಗಿನ ಬಾಕಿ ಉಳಿದ ಗ್ರಾಮಗಳು, ಟ್ರಾಕ್ಟರಿನಿಂದ ನೇಗಿಲ ಹೊಡಿಸುವ ಯೋಜನೆಯ ಕಾರಣದ ಸಲುವಾಗಿ ಮಾತ್ರ (ಆರ್. ೬೮೭೭/೨೮—ತಾರೀಖು ೨೫ನೇ ಮಾರ್ಚ ಸನ್ ೧೯೩೧) ವಿಶಿಷ್ಟ ಪ್ರದೇಶಗಳೆಂದು ತಿಳಿಯಲ್ಪಟ್ಟಿವೆ.

ಕೊಳೆರೋಗದ ಪ್ರತಿಬಂಧದ ಸಲುವಾಗಿ ಅಡಿಕೆ ಮರಗಳ ಮೇಲೆ ಔಷಧಿಯನ್ನು ಸಿಂಪಡಿಸುವ ಕಾರಣದ ಸಲುವಾಗಿ ಮಾತ್ರ ಕಾನಡಾ ಜಿಲ್ಲೆಯೊಳಗಿನ ಶಿರಶಿ, ಸಿದ್ದಾಪೂರ ಹಾಗೂ ಯಲ್ಲಾಪೂರ ತಾಲೂಕುಗಳು ವಿಶಿಷ್ಟ ಪ್ರದೇಶಗಳಾಗಿರುತ್ತವೆ. (ಎಫ್. ೧೮೮೧—೩೦-೧೧-೨೬).

ಸಿಂಧದಲ್ಲಿ, ಸೆಹವಾನ, ಜೋಹಿ, ಕಾಕರ, ಉಬಾವರೋ, ಕಂದಿಯಾರೋ, ಕೊಹಿಸ್ತಾನ ಹಾಗೂ ಥರ.

ಸಿಂಧದಲ್ಲಿಯ ಬೋಜಾವಿರುವ ಆಸ್ತಿಗಳ ವ್ಯಾನೇಜರನಿಗೆ, ಸಾಮಾನ್ಯ ಪ್ರದೇಶಗಳಲ್ಲಿರುವ ತನ್ನ ವ್ಯವಸ್ಥೆಯ ಕೆಳಗಿನ ಆಸ್ತಿಗಳಿಗೆ ಸಹ, ೫೦೦ ರೂಪಾಯಿಗಿಂತ ಹೆಚ್ಚಿನ ಸಾಲಗಳ ವಿಷಯದ ವಿನಂತಿಗಳನ್ನು ಸಿಂಧದ ಕಮಿಶನರನ ಮಂಜೂರಿಯ ಸಲುವಾಗಿ ಸಾದರ ಮಾಡತಕ್ಕದ್ದೆಂಬ ಶರ್ತಿಗೆ ಒಳಪಟ್ಟು ಸಾಲಗಳನ್ನು ಕೊಡುವ ಅಧಿಕಾರವಿರುತ್ತದೆ (ಆರ್. ೧೦೧೩೪/೨೮—ತಾರೀಖು ೬ನೇ ಮಾರ್ಚ ಸನ್ ೧೯೩೩).

[೩೩] ನೀರಾ ಕಾಲಿವೆಯ ದಂಡೆಯಲ್ಲಿ ಕಬ್ಬನ್ನು ಬೆಳೆಸುವದರ ಸಲುವಾಗಿರುವ ಸಾಲಗಳ ಬಗ್ಗೆ ಈ ಕೆಳಗಿನ ಠರಾವುಗಳನ್ನು ನೋಡಿರಿ:—

ಆರ್. ೧೬೭೭,<br>
೨೩೬೩,<br>
೬೧೧೨, } ಸನ್ ೧೯೦೮ನೇ ಇಸವಿ.<br>
೬೬೬೭,<br>
ಆರ್. ೧೦೫೯—೧೦.

ಆದರೆ ಕೊನೆಗೆ, ೧೨ ಹಾಗೂ ೧೩ನೇ ಪುಟಗಳ ಮೇಲಿರುವ ತತ್ವಗಳಿಗನುಸಾರವಾಗಿ ಈ ವ್ಯವಹಾರವನ್ನು ಬ್ಯಾಂಕುಗಳ ಕಡೆಗೆ ಒಪ್ಪಿಸಿಕೊಡಲಾಯಿತು (ಆರ್. ೭೦೭೦—೧೧).

[೩೪] ಹೆಚ್ಚಿಗೆ ಆರೋಗ್ಯಕರವಾದ ಮನೆಗಳನ್ನು ಕಟ್ಟುವದರ ಸಲುವಾಗಿರುವ (ಕೌನ್ಸಿಲಿನಲ್ಲಿ ಚರ್ಚೆಯಾದ ನಂತರ ನಾಕಾರಿಸಲಾದ) ಸಾಲಗಳ ಬಗ್ಗೆ ಜಿ. ೬೮೮೩—

* ಸದರಿ ಠರಾವಿನಲ್ಲಿ ಯಾವತ್ತು ಗ್ರಾಮಗಳನ್ನು ತಪಶೀಲುವಾರಾಗಿ ಕೊಡಲಾಗಿದೆ. ಕಚೇರಿಯ ನಕಾಶದಲ್ಲಿ ಗೆರೆಯನ್ನು ಕೂಡಲೇ ಎಳೆಯುಬಹುದು.

೧೪ ಹಾಗೂ ೯೧೩೭—೧೫ ಇವುಗಳನ್ನು ನೋಡಿರಿ. "ಹಿಂದಿನ ಸಾಲಗಳನ್ನು ತೀರಿಸುವದರ ಸಲುವಾಗಿರುವ" ಸಾಲಗಳ ಬಗ್ಗೆ (ಕೊಡಬಾರದಂಥವು): ಆರ್. ೧೩೯—೯೨ ಇದನ್ನು ನೋಡಿರಿ.

[೩೫] ಹಿಂದುಸ್ಥಾನ ಸರಕಾರದವರು, ಸಮಾಯಿಕ ಬಾಂಡುಗಳ ಮೇಲಿಂದ ಭೂಮಿಯಿಲ್ಲದ ರಬಾರಿ ಜನರ ಬಗ್ಗೆ (ಮೇಯಿಸುವವರಿಗೆ) ಮಂಜೂರ ಮಾಡಿದ ಸಾಲಗಳ ಸಲುವಾಗಿ: ಎಫ್. ೩೦೩೯—೧೧, ಎಫ್. ೧೪೬೭—೧೬ ಹಾಗೂ ಎಫ್. ೨೦೬೩—೧೬ ಇವುಗಳನ್ನು ನೋಡಿರಿ. (೫೬ನೇ ಪುಟದ ಮೇಲಿನ ೨-ಅ ಪ್ಯಾರಾವನ್ನೂ ನೋಡಿರಿ). ಎಫ್. ೧೯೨—೧೯, ಎಫ್. ೨೦೭೦—೧೯, ಎಫ್. ೩೦೧೪—೧೯.

[೩೬] ಹಿಂದುಸ್ಥಾನ ಸರಕಾರದವರು, ಮಹಾಪೂರಿನಿಂದ ಅನಾಥರಾಗಿ ಮಾಡಲ್ಪಟ್ಟ ನೇಕಾರರಿಗಾಗಿ ಮಂಜೂರ ಮಾಡಿದ ಸಾಲಗಳ ಸಲುವಾಗಿ: ಆರ್. ೯೭೫—೧೭ ಇದನ್ನು ನೋಡಿರಿ.

## (ಸನ್ ೧೮೮೪ನೇ ಇಸವಿಯ) ಹೊಲ ಮಾಡುವವರ ಸಾಲಗಳ ವಿಷಯದ ಆಕ್ಟಿನ ೪ನೇ ಕಲಮಿನನ್ವಯ ಸಹಕಾರೀ ಸಂಘಗಳಿಗೆ ಶೇತಕೀ ಸಾಲಗಳನ್ನು ಕೊಡುವದರ ಸಲುವಾಗಿ ಸಂಕ್ಷಿಪ್ತ ಕಾನೂನುಗಳು.

(ಸನ್ ೧೯೨೨ನೇ ಇಸವಿಯ ಜುಲೈ ತಿಂಗಳ ೪ನೇ ತಾರೀಖಿನ ಮುಂಬಯಿ ಸರಕಾರೀ ಗ್ಯಾಝೇಟಿನ (ಇಂಗ್ರಜಿ) ೧೪೨೦-೧೪೨೫ ಪುಟಗಳನ್ನು ನೋಡಿರಿ.)

೧. ಕೊನೆಯ ಆಡಿಟಿನ ಕಾಲಕ್ಕೆ ಅ ಅಥವಾ ಬ ವರ್ಗದಲ್ಲಿ ಸೇರಿಸಲಾದ, ನಿಯಮಿತ ಜವಾಬದಾರಿಯ ಹಾಗೂ ಸನ್ ೧೯೧೨ನೇ ಇಸವಿಯ ೨ನೇ ಆಕ್ಟಿನನ್ವಯ ನೋಂದಿಸಲ್ಪಟ್ಟ ಸಂಘಗಳಿಗೆ ಮಾತ್ರ ಸಾಲಗಳನ್ನು ಕೊಡಲಾಗುತ್ತದೆ.

೨. ನಿರ್ದಿಷ್ಟ ಮಾಡಿದ ಪರಾಕಾಷ್ಠ ರಕಮಿನ ವರೆಗೆ ಮೆಂಬರರು ಮ್ಯಾನೇಜಿಂಗ ಕಮಿಟಿಯ ಸಮ್ಮತಿಯನ್ನು ಪಡೆಯಬೇಕು.

೩. ಯಾವನೊಬ್ಬ ಮೆಂಬರನು, ತನ್ನ ಸಂಘಕ್ಕೆ ತನ್ನಿಂದ ಸಲ್ಲತಕ್ಕ ಸದ್ಯದ ಸಾಲವನ್ನೂ ತಾನು ಕೊಡುವ ಸ್ವತಂತ್ರವಾದ ತಾರಣವನ್ನೂ ವಾಡಿಕೆಯ ನಮೂನೆಯಲ್ಲಿ ನಿರ್ದಿಷ್ಟ ಮಾಡಿ ಟ್ರೆಝರಿ ಅಮಲದಾರನಿಗೆ ಅರ್ಜಿ ಮಾಡಬಹುದು.

೪. ಅವನು ತನ್ನ ಸಂಘಕ್ಕೆ ತನ್ನ ಜಾಮೀನದಾರನಾಗಲಿಕ್ಕೆ ಹೇಳಿ ಸಾಲವನ್ನು ಪಡೆಯಬಹುದು.

೫. ಸಂಘವು ಸಾಲಗಳ ವ್ಯವಹಾರದ ಪರಿಸ್ಥಿತಿಯ ಯಾವತ್ತು ತಪಶೀಲುಗಳನ್ನು ತೋರಿಸುವ ಸಾಲಗಳ ಒಟ್ಟುಗೂಡಿಸಿದ ಯಾದಿಗಳನ್ನು ಕಾಲಕಾಲಕ್ಕೆ ಠರಾಯಿಸಿದ ಒಂದು ನಮೂನೆಯಲ್ಲಿ, ಆಡಿಟರನ ಮುಖಾಂತರವಾಗಿ (ಇವನು ಅವು ಸರಿಯಾಗಿರುತ್ತವೆಂದು ದಾಖಲೆ ಕೊಡುವನು) ಟ್ರೆಝರೀ ಅಮಲದಾರನ ಕಡೆಗೆ ಕಳುಹಿಸಬೇಕು.

೬. ಯಾವದೊಂದು ಸಂಘವು, ಒಬ್ಬ ಮೆಂಬರನ ಸಲುವಾಗಿ ೨೦೦ ರೂಪಾಯಿಗಿಂತ ಹೆಚ್ಚಿನ ರಕಮಿನ ಬಗ್ಗೆ, ಅಥವಾ ಎರಡು ವರ್ಷಗಳಿಗಿಂತ ಹೆಚ್ಚಿನ ಅವಧಿಯ

ಬಗ್ಗೆ, ಅಥವಾ ೨೦ ಮೆಂಬರರ ಪೈಕಿ ಪ್ರತಿಯೊಬ್ಬ ಮೆಂಬರನ ಸಲುವಾಗಿ ೨೦೦ ರೂಪಾಯಿಗಿಂತ ಹೆಚ್ಚಿನ ರಕಮಿನ ಬಗ್ಗೆ ಜಾಮೀನಾಗಬಾರದು. ಈ ಬಗ್ಗೆ ಅದು ಒಂದು ಮಂಜೂರಾದ ದಲಾಲಿಯನ್ನು ಆಕಾರಿಸಬಹುದು. ಸಾಲವನ್ನು ಒಬ್ಬ ಜಾಮೀನದಾರನೊಂದಿಗೆ ಒತ್ತೆಯ ಮೇಲೆ ಅಥವಾ ಜಾತ ಜಾಮೀನಿನ ಮೇಲೆ ಸಂಘಕ್ಕೆ ಕೊಡಲಾಗುವದು.

೭. ಕಲೆಕ್ಟರನು, ರಿಜಿಸ್ಟ್ರಾರನ ಸಮ್ಮತಿಯನ್ನು ಮುಂದಾಗಿ ಪಡೆದು, ಸಂಘದ ಲೇಖೀ ವಿನಂತಿಯ ಮೇರೆಗೆ ಅಡಿಗೆ ಗೆರೆಹೊಡೆದ ಶರ್ತುಗಳನ್ನು ಸಡಿಲು ಮಾಡಬಹುದು.

೮. ಟ್ರೆಝರಿ ಅಮಲದಾರನು, ತನ್ನ ಹತ್ತರ ಸಾಕಷ್ಟು ನೇಮಿಸಿಕೊಟ್ಟ ಹಣವಿದ್ದರೆ, ಸಾಲಗಳನ್ನು ಮಂಜೂರ ಮಾಡಬೇಕು, ಮತ್ತು ಸಂಘದ ಮ್ಯಾನೇಜಿಂಗ ಕಮಿಟಿಯವರ ಠರಾವಿನನ್ವಯ ಅಧಿಕಾರ ಪಡೆದ ಸಂಘದ ಪ್ರತಿನಿಧಿಗೆ ಹಣವನ್ನು ಕೊಡಬೇಕು ಮತ್ತು ಇವನು ಠರಾಯಿಸಲ್ಪಟ್ಟ ನಮೂನೆಗಳಲ್ಲಿ ಬಾಂಡುಗಳನ್ನು ತಕ್ಕೊಂಡು ಹತ್ತು ದಿವಸಗಳೊಳಗಾಗಿ ಟ್ರೆಝರಿ ಅಮಲದಾರನ ಕಡೆಗೆ ಅವುಗಳನ್ನು ಕಳುಹಿಸಬೇಕು ಹಾಗೂ ಹಣವನ್ನು ಹಂಚಿಕೊಡಬೇಕು. ತಾಲೂಕಿನ ಅಮಲದಾರನು ತ. ನ. ೪ ಇದನ್ನು ಪ್ರತಿವರ್ಷ, ಯಾವತ್ತು ಮೆಂಬರರ ಸಲುವಾಗಿ, ಸಂಘಕ್ಕೆ ಕಳುಹಿಸಿಕೊಡಬೇಕು ಮತ್ತು ಸದರಿ ಸಂಘವು ಬಾಕಿಯನ್ನು ವಸೂಲ ಮಾಡಲಿಕ್ಕೂ ಕಳುಹಿಸಿಕೊಡಲಿಕ್ಕೂ ಜವಾಬದಾರವಿರತಕ್ಕದ್ದು. ಅದು ಸಂಪೂರ್ಣ ರಕಮನ್ನು ಅಥವಾ ಅದರ ಯಾವದೇ ಭಾಗವನ್ನು ವಸೂಲ ಮಾಡಲಿಕ್ಕೆ ಅಸಮರ್ಥವಾದರೆ, ಟ್ರೆಝರೀ ಅಮಲದಾರನು ೨ನೇ ಕಲಮಿನನ್ವಯ ಉಪಾಯುಗಳನ್ನು ಕೈಕೊಳ್ಳಬೇಕು, ಮತ್ತು ಇಷ್ಟಾಗಿಯೂ ಯಾವದೇ ರಕಮು ಬಾರದೆ ಉಳಿದರೆ, ಅವನು ಪ್ರಾಂತ ಅಮಲದಾರನ ಮುಖಾಂತರವಾಗಿ ರಿಜಿಸ್ಟ್ರಾರನ ಕಡೆಗೆ, ಸನ್ ೧೯೦೪ನೇ ಇಸವಿಯ ೩ನೇ ಆಕ್ಟಿನ ೪೪ನೇ ಕಲಮಿನನ್ವಯ ಕೆಲಸ ನಡಿಸುವದರ ಸಲುವಾಗಿ, ರಿಪೋರ್ಟು ಮಾಡಬೇಕು. ದುರ್ಭಿಕ್ಷದ ವರ್ಷಗಳಲ್ಲಿ ಮಾತ್ರ ಸಾಲಗಳು ಸಾಮಾನ್ಯವಾಗಿ ಕೊಡಲ್ಪಡುವವು.

## ಭೂಮಿಯ ಸುಧಾರಣೆ ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟಿನ ೧೧ನೇ ಕಲಮಿನ ವಿಶೇಷ ಠರಾವಿನ (೧)ನೇ ರಕಮಿನನ್ವಯದ ಕಾನೂನು.

ಸಾಲದ ಸಹಾಯದಿಂದ ಬೀಳುಭೂಮಿಯನ್ನು ಪುನಃ ಸಾಗು ಮಾಡಿಕೊಂಡರೆ, ಹೀಗೆ ಸಾಗು ಮಾಡಿದ್ದರಿಂದ ಸದರಿ ಭೂಮಿಯ ಬೆಲೆಯು ಹೆಚ್ಚಾಗಿದ್ದ ಸಂಗತಿಯನ್ನು, ಸದರಿ ಭೂಮಿಯ ಮೇಲಿನ ಭೂಮಿಯ ಮಹಸೂಲಿನ ಆಕಾರಣೆಯ ಪುನರ್ವಿಚಾರ ಮಾಡುವಾಗ ಲಕ್ಷ್ಯದಲ್ಲಿ ತಕ್ಕೊಳ್ಳಬಹುದು:—

(ಅ) ಗವರ್ನರ ಇನ್ ಕೌನ್ಸಿಲರವರಿಂದ ಮಾಡಲ್ಪಟ್ಟ ಹಾಗೂ ಸನ್ ೧೯೨೧ನೇ ಇಸವಿಯ ಜನವರಿ ತಿಂಗಳ ೨೭ನೇ ತಾರೀ

ಖಿನ ಜಾಹೀರನಾಮೆ ನಂಬರು ಬ-೨೦೫ ಇದರಲ್ಲಿ ಪ್ರಸಿದ್ಧಿಸಲ್ಪಟ್ಟ, ಸನ್ ೧೯೨೧ನೇ ಇಸವಿಯ ಭೂಮಿಯ ಮಹಸೂಲಿನ ಕಾನೂನುಗಳು.—(ಅ) ಈ ಮೇಲಿನ ಕಾನೂನುಗಳ ಪೈಕಿ ೩೯ನೇ ಅಥವಾ ೪೦ನೇ ಕಾನೂನಿನನ್ವಯ ಕೊಡಲ್ಪಟ್ಟ ಭೂಮಿಯ ಬಾಬತಿನಲ್ಲಿ, ಸದರಿ ಭೂಮಿಯನ್ನು ಕೊಡುವಾಗ ಯಾವದೇ ಭೂಮಿಯನ್ನು ಮಹಸೂಲಿಲ್ಲದೆ ಅಥವಾ ಕಡಿಮೆ ಮಾಡಿದ ಆಕಾರಣಿಯ ಮೇರೆಗೆ ಭೋಗವಟೆ ಮಾಡುವದರ ಸಲುವಾಗಿ ಕಲೆಕ್ಟರನಿಂದ ಗೊತ್ತುಮಾಡಲ್ಪಟ್ಟ ಅವಧಿಯು ಮುಗಿದ ನಂತರ ;

(ಬ) ಇತರ ಯಾವದೇ ಪ್ರಸಂಗದಲ್ಲಿ, ಮೇಲೆ ಹೇಳಿದಂತೆ ಸದರಿ ಭೂಮಿಯ ಭೋಗವಟೆ ಮಾಡುವದರ ಸಲುವಾಗಿ, ಅದನ್ನು ಕೊಡುವಾಗ ಹೇಳಲಾದ ಅಥವಾ ಯಾವದೇ ಕಾನೂನಿನಲ್ಲಿದ್ದ, ಅಥವಾ ಅದರ ಸಂಬಂಧದ ಅಥವಾ ಅದಕ್ಕೆ ಲಾಗೂ ಆಗುವ ಹುಕುಮಿನಲ್ಲಿದ್ದ ಅಥವಾ ಶರ್ತಿನಲ್ಲಿದ್ದ ಅವಧಿಯು ಮುಗಿದ ನಂತರ.

(ಗವರ್ನರ ಜನರಲರವರ ಮಂಜೂರಿಯಿಂದ ಸನ್ ೧೯೩೯ನೇ ಇಸವಿಯ ಮುಂಬಯಿ ಸರಕಾರೀ ಗ್ಯಾಝೇಟಿನಲ್ಲಿ (ಇಂಗ್ರಜಿ) ೮೦೦ನೇ ಪುಟದ ಮೇಲಿನ ೬೬೭೬ನೇ ನಂಬರಿನ ಜಾಹೀರನಾಮೆಯಲ್ಲಿ ಪ್ರಸಿದ್ಧಿಸಲ್ಪಟ್ಟಿದ್ದು).

## ದುಷ್ಕಾಳ.

ದುರ್ಭಿಕ್ಷದ ಕಾಲದಲ್ಲಿ ಅಥವಾ ದುಷ್ಕಾಳದಲ್ಲಿ ತಗಾಯಿ ಸಾಲಗಳನ್ನು ಕೊಡುವಾಗ ಜಿಲ್ಹಾ ಅಮಲದಾರರ ಮಾರ್ಗದರ್ಶಕತೆಗಾಗಿ ಈ ಕೆಳಗಿನ ಸಾಮಾನ್ಯ ಸೂಚನೆಗಳು ಸರಕಾರದವರಿಂದ ಮಂಜೂರ ಮಾಡಲ್ಪಟ್ಟಿವೆ

೧. ದುರ್ಭಿಕ್ಷದಿಂದಲೂ ದುಷ್ಕಾಳದಿಂದಲೂ ಬಾಧೆ ಪಡುವ ಜಿಲ್ಲೆಗಳ ಬವಣೆಯನ್ನು ಪರಿಹಾರ ಮಾಡುವ ಸಾಧನವೆಂದು ಉದಾರ

ತನದಿಂದ ತಗಾಯಿ ಸಾಲಗಳನ್ನು ಕೊಡುವ ಧೋರಣವು ಕೆಲವು ಪ್ರಸಂಗಗಳಲ್ಲಿ, ಸಾಲ ತೆಗೆದುಕೊಳ್ಳುವವರ ಹಿತವನ್ನು ನಿಜವಾಗಿ ಸಾಧಿಸುವಂತೆ ಪರಿಣಮಿಸುವದಿಲ್ಲೆಂತಲೂ, ಸುಧಾರಿಸಲ್ಪಟ್ಟ ರಾಜ್ಯ ಘಟನೆಯನ್ವಯ ಸರಕಾರದವರ ಮೇಲೆ ಹೊರಿಸಲ್ಪಟ್ಟ ಆರ್ಥಿಕ ಜವಾಬದಾರಿಗಳ ಕಾರಣದ ಮೂಲಕ, ಈ ವಿಷಯದ ಸಂಬಂಧದಿಂದ ಈ ವರೆಗೆ ಪ್ರಚಾರದಲ್ಲಿದ್ದ ವಿಚಾರಗಳನ್ನು ಕೆಲಮಟ್ಟಿಗಾದರೂ ಪುನಃ ಪರೀಕ್ಷಿಸಿ ನೋಡುವದು ಈಗ ಅವಶ್ಯವಿರುತ್ತದೆಂತಲೂ ಇತ್ತೀಚೆಗಿನ ಕೆಲವು ವರ್ಷಗಳಲ್ಲಿ ತಲೆದೋರಿದ ದುರ್ಭಿಕ್ಷಗಳಲ್ಲಿ ಮತ್ತು ದುಷ್ಕಾಳ ಗಳಲ್ಲಿ ದೊರೆತ ಅನುಭವದಿಂದ ಕಂಡುಬಂದಿದೆ. ದುರ್ಭಿಕ್ಷದಿಂದ ಅಥವಾ ದುಷ್ಕಾಳದಿಂದ ಉಂಟಾದ ದುಃಸ್ಥಿತಿಯ ಪ್ರಾರಂಭದ ಕಾಲ ದಲ್ಲಿಯೇ ತಗಾಯಿ ಸಾಲಗಳನ್ನು ಉದಾರತನದಿಂದ ಹಂಚುವದು, ನಮಗೆ ಕೊಡಲಿಕ್ಕೆ ಬರುವ ಪರಿಹಾರಗಳ ಪೈಕಿ ಎಲ್ಲಕ್ಕೂ ಹೆಚ್ಚಿಗೆ ಪರಿಣಾಮಕಾರಕವಾದ ಹಾಗೂ ಎಲ್ಲಕ್ಕೂ ಕಡಿಮೆ ಖರ್ಚಿನ ಸ್ವರೂಪ ದ್ದಿರುತ್ತದೆಂತಲೂ, ತಗಾಯಿ ಸಾಲಗಳನ್ನು ನಿಯಂತ್ರಿತ ಮಾಡುವದ ರಿಂದ ಹಾಗೂ ಹೆಚ್ಚು ದೊಡ್ಡ ಪ್ರಮಾಣದಿಂದ ಪುಕ್ಕಟೆ ಪರಿಹಾರ ಕೊಡುವದರಿಂದ ಅಥವಾ ಜನರಿಗೆ ನಿರಾತಂಕವಾಗಿ ಸಾಲಗಳು ದೊರೆಯುತ್ತಿದ್ದ ಪಕ್ಷಕ್ಕೆ, ಅನಾವಶ್ಯಕವಾಗಬಹುದಾದ ಬರಗಾಲದ ಕೆಲಸಗಳನ್ನು ಪ್ರಾರಂಭಿಸುವದರಿಂದ ಉಂಟಾಗಬಹುದಾದ ನಷ್ಟ ಕ್ಕಿಂತ, ತಗಾಯಿ ಸಾಲಗಳ ಪೈಕಿ ಹಿಂತಿರಿಗಿ ಕೊಡದೆ ಬಾಕಿ ಉಳಿದ ಸಾಲಗಳಿಂದಾಗುವ ನಷ್ಟವು ಬಹಳ ಕಡಿಮೆಯಿರುತ್ತದೆಂತಲೂ ಸಾಮಾನ್ಯವಾಗಿ ಊಹಿಸಲಾಗಿದೆ. ಇದೇ ಮೇರೆಗೆ, ದುರ್ಭಿಕ್ಷದಿಂದ ಬಾಧೆಪಟ್ಟ ಕ್ಷೇತ್ರಗಳಲ್ಲಿ ದೊಡ್ಡ ಪ್ರಮಾಣದಿಂದ ಮೇವನ್ನು ಆಮದು ಮಾಡಿ ಅದನ್ನು ದನಕರಗಳ ಮಾಲಿಕರು ಕೊಳ್ಳಲಿಕ್ಕೆ ಸಮರ್ಥರಾಗು ವಂತೆ ಅವರಿಗೆ ತಗಾಯಿ ಸಾಲಗಳನ್ನು ನಿರಾತಂಕವಾಗಿ ಕೊಟ್ಟು, ದುರ್ಭಿಕ್ಷದ ಅಥವಾ ದುಷ್ಕಾಳದ ಕಾಲದಲ್ಲಿ ದನಕರಗಳು ಜೀವದಿಂದು ಳಿಯುವಂತೆ ಮಾಡುವದು, ದನಕರಗಳನ್ನು ಸಂರಕ್ಷಿಸುವದರ ಸಲು ವಾಗಿ ಈ ವರೆಗೆ ಅನುಸರಿಸಲ್ಪಟ್ಟ ಧೋರಣವಾಗಿರುತ್ತದೆ. ಉದಾಹ

ತನದಿಂದ ಹಾಗೂ ಸಕಾಲದಲ್ಲಿ ತಗಾಯಿ ಸಾಲಗಳನ್ನು ಕೊಟ್ಟು ಸರಕಾರದವರು ಜನರಿಗೆ ಧೈರ್ಯ ಕೊಡುತ್ತಾರೆಂತಲೂ, ಹಣವನ್ನು ಖರ್ಚು ಮಾಡುವದರಿಂದ ಹಾಗೂ ಬಾವಿಗಳನ್ನು ಅಗಿಯುವ ಹಾಗೂ ಸುಧಾರಿಸುವ ಖಾಸಗಿ ಕೆಲಸಗಳನ್ನು ಮಾಡಿಸಲಿಕ್ಕೆ ಅವಕಾಶ ಕೊಡುವದರಿಂದ ಉದ್ಯೋಗ ಬೇಕಾದ ಜನರಿಗೆ—ಹೀಗೆ ಮಾಡದಿದ್ದರೆ ಇವರಿಗೆ ಉದ್ಯೋಗವು ದೊರೆಯಲಿಕ್ಕಿಲ್ಲ—ಉದ್ಯೋಗವನ್ನು ಒದಗಿಸಿ ಕೊಟ್ಟಂತಾಗುವದೆಂತಲೂ ಗೃಹಿಸಲಾಗಿದೆ.

೨. ತಗಾಯಿಯು ಒಂದು ನಮೂನೆಯ ಸಹಾಯವಾಗಿರುತ್ತದೆಂದು ತಿಳಿದು ಅದರ ಸಂಬಂಧದಿಂದ ಈ ವರೆಗೆ ಅನುಸರಿಸಲ್ಪಟ್ಟ ಧೋರಣದ ಮೂಲ ತತ್ವಗಳು ತಪ್ಪಾಗಿರುತ್ತವೆಂದು ಖಂಡಿತವಾಗಿ ಹೇಳಲಿಕ್ಕಾಗಲಿ, ಉದಾರತನದಿಂದ ತಗಾಯಿ ಸಾಲ ಕೊಡುವ ಧೋರಣವನ್ನು ದುರ್ಭಿಕ್ಷದ ಹಾಗೂ ದುಷ್ಕಾಳದ ಬವಣೆಯನ್ನು ತಡೆಯುವದರ ಸಲುವಾಗಿ ಒಂದು ಉಪಯುಕ್ತವಾದ ಸಾಧನವಾಗಿ ಸ್ವೀಕರಿಸಬಹುದು ಹಾಗೂ ಸ್ವೀಕರಿಸತಕ್ಕದ್ದೆಂಬದನ್ನು ಅಲ್ಲಗಳೆಯಲಿಕ್ಕಾಗಲಿ ಸರಕಾರದವರು ಈಗಲೂ ಸಿದ್ಧರಿರುವದಿಲ್ಲ.

ಆದರೆ ದುಷ್ಕಾಳದ ಸಹಾಯದ ಸಾಧನವೆಂದು ತಗಾಯಿಯನ್ನು ಉಪಯೋಗಿಸುವಾಗ ಜಿಲ್ಹಾ ಅಮಲದಾರನು, ತಾನು ನೌಕರಿ ಮಾಡುವ ಜಿಲ್ಹೆಯ ಸಾಮಾನ್ಯ ಆರ್ಥಿಕ ಪರಿಸ್ಥಿತಿಯನ್ನು ಕಾಳಜಿಪೂರ್ವಕವಾಗಿ ಪರಿಶೀಲಿಸಬೇಕು. ಯಾವ ಜಿಲ್ಹೆಗಳಲ್ಲಿಯ ಒಕ್ಕಲಗರು ಸಾಮಾನ್ಯವಾಗಿ ಶ್ರೀಮಂತರಾಗಿದ್ದು ಒಳ್ಳೇ ಪತ್ತುಳ್ಳವರಿರುವರೋ ಮತ್ತು ಯಾವ ಜಿಲ್ಹೆಗಳು ಭೌಗೋಲಿಕ ಸ್ಥಿತಿಯಿಂದ ಒಂದೇ ಸವನಾಗಿ ದುಷ್ಕಾಳಪೀಡಿತವಾಗಲಾರವೋ ಅಂಥ ಜಿಲ್ಹೆಗಳಲ್ಲಿ ಉದಾರತನದ ತಗಾಯಿ ಧೋರಣವು ದುಃಖನಿವಾರಣೆಯ ಅತ್ಯುತ್ತಮವಾದ ಉಪಾಯವಾಗಿರುತ್ತದೆ. ಆದರೆ, ಕಡಿಮೆ ಪತ್ತುಳ್ಳ ಜನರಿರುವಂಥ ಹಾಗೂ ಮೇಲಿಂದ ಮೇಲೆ ಮಳೆಯಾಗದಂಥ ಜಿಲ್ಹೆಗಳಲ್ಲಿ, ತಗಾಯಿ ಧೋರಣವನ್ನು ಹೆಚ್ಚಿಗೆ ಜಾಗ್ರತೆಯಿಂದ ಅನುಸ

ರಿಸಬೇಕು, ಮತ್ತು ಒಕ್ಕಲಿಗರು ತಮ್ಮ ಆಸ್ತಿಯ ಪ್ರಮಾಣಕ್ಕಿಂತ ಹೆಚ್ಚಾಗಿಯೂ, ಫಾಜವಿ ಅವಧಿಯೊಳಗೆ ಹಿಂತಿರಿಗಿ ಕೊಡಲಿಕ್ಕೆ ಬರುವ ತಮ್ಮ ಸಾಮರ್ಥ್ಯಕ್ಕಿಂತ ಹೆಚ್ಚಾಗಿಯೂ ಸಾಲಗಳನ್ನು ಪಡೆಯದಂತೆ ಎಲ್ಲಕ್ಕೂ ಹೆಚ್ಚಿಗೆ ಕಾಳಜಿಯನ್ನು ವಹಿಸತಕ್ಕದ್ದು. ನೀರಾವರಿಯ ಸಲುವಾಗಿಯಾಗಲಿ, ಸುತ್ತಮುತ್ತಲಿನ ಕ್ಷೇತ್ರದ ಬಾವಿಗಳ ನೀರಿನ ಪಾತಳಿಯನ್ನು ಏರಿಸುವಂತೆ ಮಾಡುವದರ ಸಲುವಾಗಿಯಾಗಲಿ ಹಳ್ಳದ ನೀರನ್ನು ಸಂಗ್ರಹಿಸಿಡುವದಕ್ಕೆ ಒಡ್ಡು ಹಾಕುವ ಕೆಲಸಗಳ ಬಗ್ಗೆ ಅಥವಾ ಗುಡ್ಡದ ಬಾಜುವಿನ ಇಳಿಜಾರಾದ ಪ್ರದೇಶದಲ್ಲಿ ಅನೇಕ ಸಣ್ಣ ಸಣ್ಣ ಒಡ್ಡುಗಳನ್ನು ಹಾಕುವ ಕೆಲಸಗಳ ಬಗ್ಗೆ ಅಥವಾ ಇಡೀ ಸಮಾಜಕ್ಕೆ ನಿಜವಾಗಿ ಉಪಯುಕ್ತವಾಗಬಹುದಾದ ಇತರ ಯಾವದೇ ಉದ್ದೇಶದ ಬಗ್ಗೆ ಶಕ್ಯವಿದ್ದಲ್ಲೆಲ್ಲ ಇತರ ಯಾವದೇ ನಮೂನೆಯ ಸಾಲಕ್ಕಿಂತ ಸಂಯುಕ್ತ ಬಾಂಡುಗಳ ಪದ್ಧತಿಯ ಮೇರೆಗೆ ಸಾಲ ಕೊಡುವದು ಎಷ್ಟೋ ಲೇಸು. ಹೊಸ ಬಾವಿಗಳನ್ನು ಅಗಿಯುವದರ ಸಲುವಾಗಿ ಅಥವಾ ಸದ್ಯಕ್ಕಿದ್ದ ಬಾವಿಗಳನ್ನು ಹೆಚ್ಚಿಗೆ ಆಳವಾಗಿ ಮಾಡುವದರ ಸಲುವಾಗಿ ಅಥವಾ ಅವುಗಳನ್ನು ಸ್ವಚ್ಛ ಮಾಡುವದರ ಸಲುವಾಗಿ ವ್ಯಕ್ತಿಗಳಿಗೆ ಸಾಲ ಕೊಟ್ಟರೆ, ಸದರಿ ಸಾಲ ತೆಗೆದುಕೊಂಡವನಿಗೂ ಅವನು ಕೆಲಸಕ್ಕಿಟ್ಟುಕೊಳ್ಳಬಹುದಾದ ಕೂಲಿಯವರಿಗೂ ಫಾಯದೆಯಾಗುವದು. ಆದರೆ ಇಂಥ ಪ್ರಸಂಗದಲ್ಲಿ ಸಾಕಷ್ಟು ನೀರಿನ ಪುರವಠೆಯು ದೊರೆಯದಿರುವ ಸಂಭವವು ಯಾವಾಗಲೂ ಇರುತ್ತದೆ, ಮತ್ತು ಸದರಿ ಸಾಲ ಪಡೆದ ಮನುಷ್ಯನು, ಸದರಿ ಕೆಲಸವು ನಿರುಪಯುಕ್ತವಾದ ಪಕ್ಷಕ್ಕೆ ಅವನಿಗೆ ಉಂಟಾಗುವ ನಷ್ಟವನ್ನು ಸಹಿಸುವಷ್ಟರ ಮಟ್ಟಿಗೆ ಅವನು ಸಾಕಷ್ಟು ಪತ್ತುಳ್ಳವನಿದ್ದ ಹೊರ್ತು, ಕೆಲಸಗಳ ಸಲುವಾಗಿರುವ ಸಾಲದಿಂದ ಅವನಿಗೆ ದೊರೆಯುವ ಲಾಭವು ಸಂಶಯಾಸ್ಪದವಿರುತ್ತದೆ. ಒಳ್ಳೇ ನೀರಿನ ಪುರವಠೆಯ ಬಾವಿಗಳುಳ್ಳ ಬಾಗಾಯತ ಭೂಮಿಗಳನ್ನು ಧಾರಣ ಮಾಡುವವರಿಗೆ ಬೇಕಾಗುವ ಬಾವಿಯ ಸಾಧನಸಾಮಗ್ರಿಯ ಹಾಗೂ ದನಕರಗಳ ಮೇವಿನ ಸಲುವಾಗಿರುವ ಸಾಲಗಳು ದುರ್ಭಿಕ್ಷದ ಕಾಲದಲ್ಲಿ ಯಾವಾಗಲೂ

ಉಪಯೋಗಕ್ಕೆ ಬೀಳುತ್ತವೆ, ಮತ್ತು ಅವುಗಳನ್ನು ನಿರಾತಂಕವಾಗಿ ಕೊಡಬೇಕು. ಬಾಗಾಯತವಲ್ಲದ ಭೂಮಿಗಳನ್ನು ಧಾರಣ ಮಾಡುವವರಿಗೆ ಮೇವಿನ ಸಲುವಾಗಿ ಕೊಟ್ಟ ಸಾಲಗಳಿಂದ ಲಾಭವು ಆಗುವದೋ ಇಲ್ಲವೋ ಎಂಬದನ್ನು ಹೇಳುವದು ಕಠಿಣವಿರುತ್ತದೆ, ಯಾಕೆಂದರೆ, ಸದರಿ ಸಾಲ ತೆಗೆದುಕೊಳ್ಳುವ ಮನುಷ್ಯನು ಸುಖವಸ್ತುವಾಗಿದ್ದು, ಅವನ ದನಕರಗಳು ಸಂರಕ್ಷಿಸಲ್ಪಡಲಿಕ್ಕೆ ಯೋಗ್ಯವಾಗಿದ್ದರೆ ಮಾತ್ರ ಹೀಗೆ ಸಾಲಗಳನ್ನು ಕೊಡಬಹುದು ಅಥವಾ ಮೇವನ್ನು ಕೊಳ್ಳುವದರ ಸಲುವಾಗಿ ಸಾಲಗಳನ್ನು ಕೊಟ್ಟು ಮೇವಿನ ಪುರವಠೆಯು ಮಾಡಲ್ಪಡದಿದ್ದರೆ, ಯಾವ ದನಗಳ ತಳಿಗಳು ನಾಮಶೇಷವಾಗುವ ಅಥವಾ ಸಂಖ್ಯೆಯಲ್ಲಿ ಬಹಳ ಮಟ್ಟಿಗೆ ಕಡಿಮೆಯಾಗುವ ಭಯವಿರುವದೋ ಅಂಥ ತಳಿಗಳನ್ನು ಜೀವಂತವಾಗಿರಿಸುವದು ಅವಶ್ಯವಿದ್ದ ಪ್ರದೇಶಗಳಲ್ಲಿ ಮಾತ್ರ ಹೀಗೆ ಸಾಲಗಳನ್ನು ಕೊಡಬಹುದು. ಮೇವನ್ನು ಕೊಳ್ಳುವದರ ಸಲುವಾಗಿ ಸಾಲಗಳನ್ನು ಕಾಳಜಿಪೂರ್ವಕವಾಗಿಯೂ ವಿಚಾರಪೂರ್ವಕವಾಗಿಯೂ ಕೊಟ್ಟ ಹೊರ್ತು, ಸಾಲ ತೆಗೆದುಕೊಂಡವನು ದುಷ್ಕಾಳದಲ್ಲಿ ದನಕರಗಳನ್ನು ಸಂರಕ್ಷಿಸುವದರ ಸಲುವಾಗಿ ಅವುಗಳ ಮೇವನ್ನು ಕೊಳ್ಳುವದರ ದೆಸೆಯಿಂದ ಅವುಗಳ ಬೆಲೆಗಿಂತ ಹೆಚ್ಚಿಗೆ ಸಾಲವನ್ನು ಮಾಡಿದ್ದಾನೆಂತಲೂ, ದುರ್ಭಿಕ್ಷವು ತಲೆದೋರಿದಾಕ್ಷಣ ತನ್ನ ದನಕರಗಳನ್ನು ಬಂದ ಬೆಲೆಗೆ ಮಾರಿ, ಮಳೆಗಾಲವು ಪ್ರಾರಂಭವಾದ ಕೂಡಲೆ ತನ್ನ ಭೂಮಿಯನ್ನು ಸಾಗು ಮಾಡುವ ಬಗ್ಗೆ ಅತ್ಯಂತ ಜರೂರಿರುವ ಎತ್ತುಗಳನ್ನು ಕೊಂಡಿದ್ದರೆ, ಅವನಿಗೆ ಲಾಭವಾಗುತ್ತಿತ್ತೆಂತಲೂ ಅನೇಕ ಸಾರೆ ಕಂಡುಬರುವದು. ಮೇವನ್ನು ಕೊಳ್ಳುವದರ ಸಲುವಾಗಿ ತಗಾಯಿ ಸಾಲಗಳನ್ನು ಅತಿ ಉದಾರತನದಿಂದ ಕೊಟ್ಟರೆ, ಸದರಿ ಜಿಲ್ಲೆಯೊಳಗಿನ ಹಾಗೂ ಇಡೀ ಪ್ರಾಂತದೊಳಗಿನ ತಗಾಯಿ ಬಾಕಿಗಳನ್ನು ಮಿತಿಮೀರಿ ಹೆಚ್ಚಿಸಿದಂತಾಗುವದು. ಆದಷ್ಟು ಮಟ್ಟಿಗೆ, ಸರಕಾರೀ ಹುಲ್ಲನ್ನು ನಗದಿ ಹಣ ಕೊಟ್ಟು ಕೊಂಡುಕೊಳ್ಳುವವರಿಗೆ ಪ್ರೋತ್ಸಾಹನ ಕೊಡುವದೂ, ಬಾಗಾಯತ ಭೂಮಿ ಧಾರಣ ಮಾಡುವವರಿಗೆ ಅಥವಾ ಜೀವಂತಪಿ

ರಿಸುವದಕ್ಕೆ ಯೋಗ್ಯವಾದ ದನಕರಗಳಿರುವ ನಿಜವಾದ ಸುಖವಸ್ತು ಜನರಿಗೆ ಮಾತ್ರ ಮೇವಿನ ಸಲುವಾಗಿ ತಗಾಯಿ ಸಾಲ ಕೊಡುವದನ್ನು ನಿಯಂತ್ರಿಸುವದೂ ಇಷ್ಟವಿರುತ್ತದೆ. ದುರ್ಭಿಕ್ಷದ ಕಾಲದ ಲಗತು ನಂತರದ ಸಾಗುವಳಿಯ ಹಂಗಾಮಿನಲ್ಲಿ ಎತ್ತುಗಳನ್ನು ಕೊಂಡುಕೊಳ್ಳುವದರ ಸಲುವಾಗಿ ಸಾಲಗಳನ್ನು ಕೊಡುವದು ಅವಶ್ಯವೂ ಇಷ್ಟವೂ ಇರುತ್ತದೆ. ಬೀಜಗಳನ್ನು ಕೊಂಡುಕೊಳ್ಳುವದರ ಸಲುವಾಗಿರುವ ಸಣ್ಣಪುಟ್ಟ ರಕಮಿನ ಸಾಲಗಳು ಎಷ್ಟರ ಮಟ್ಟಿಗೆ ಲಾಭದಾಯಕವಾಗಿರುತ್ತವೆಂಬದನ್ನು ನಿಶ್ಚಿತವಾಗಿ ಹೇಳಲಿಕ್ಕಾಗದು. ದುಷ್ಕಾಳದಿಂದ ಬಹಳವಾಗಿ ಬಳಲುವ ಪ್ರದೇಶಗಳಲ್ಲಿ, ಬೀಜಗಳ ಸಲುವಾಗಿ ತಗಾಯಿ ಸಾಲಗಳು ಮುಕ್ತಹಸ್ತದಿಂದ ಕೊಡಲ್ಪಡದಿದ್ದರೂ ಕೂಡ, ಅತಿ ಪ್ರಖರ ಸ್ವರೂಪದ ದುಷ್ಕಾಳದ ಅವಧಿಯು ಕಳೆದ ತರುವಾಯವೇ ಭೂಮಿಗಳನ್ನು ಬಿತ್ತಲಾಗುತ್ತದೆಂದು ಅನುಭವದಿಂದ ಕಂಡುಬಂದಿದೆ. ಬೀಜಗಳನ್ನು ಕೊಂಡುಕೊಳ್ಳುವ ಸ್ಪಷ್ಟವಾದ ಉದ್ದೇಶದಿಂದ ತಕ್ಕೊಳ್ಳಲಾದ ಸಾಲಗಳನ್ನು ಸಾಮಾನ್ಯವಾಗಿ ಹೊಟ್ಟೆಯ ಖರ್ಚಿಗಾಗಿಯೇ ಉಪಯೋಗಿಸಲಾಗುತ್ತದೆ. ನಿರ್ದಿಷ್ಟವಾಗಿ ಹೊಟ್ಟೆಯ ಖರ್ಚಿಗಾಗಿರುವ ಸಾಲಗಳನ್ನು ಯಾವತ್ತು ಜಿಲ್ಹೆಗಳಲ್ಲಿ ಬಹಳ ಕಡಿಮೆ ಪ್ರಸಂಗಗಳಲ್ಲಿ ಮಂಜೂರ ಮಾಡಬೇಕು ಮತ್ತು, ಅದನ್ನು ಪಟ್ಟಿಗೆ, ಯಾವ ಬಾಗಾಯತ ಭೂಮಿಗಳನ್ನು ಧಾರಣ ಮಾಡುವವರಿಗೆ ಬಿತ್ತಿಗೆ ಮಾಡಿ ತಮ್ಮ ಬೆಳೆಯ ಸುಗ್ಗಿಯನ್ನು ಮಾಡುವ ವರೆಗಿನ ಮಧ್ಯಂತರದ ಅವಧಿಯಲ್ಲಿ ಹೊಟ್ಟೆಯ ಖರ್ಚನ್ನು ನಡಿಸುವದು ಕಠಿಣವೆನಿಸುವದೋ ಅವರಿಗೆ ಮಾತ್ರ ಇಂಥ ಸಾಲಗಳನ್ನು ಕೊಡಬೇಕು. ಹೊಟ್ಟೆಯ ಖರ್ಚಿನ ಸಲುವಾಗಿ ತಗಾಯಿ ಸಾಲಗಳನ್ನು ಕೊಡುವದು ಇಷ್ಟವಿರುವ ಇತರ ಪ್ರಸಂಗಗಳು ಬಹಳೇ ಕಡಿಮೆ ಇರುತ್ತವೆ.

೩. ಹಳ್ಳಗಳಿಗೆ ಒಡ್ಡು ಹಾಕುವದು, ಗುಡ್ಡದ ಬಾಜುವಿನ ಇಳಿಜಾರಾದ ಸ್ಥಳದಲ್ಲಿ ಸಣ್ಣ ಸಣ್ಣ ಒಡ್ಡುಗಳನ್ನು ಕಟ್ಟುವದು, ಮುಂತಾದ

ದೊಡ್ಡ ಕೆಲಸಗಳ ಸಲುವಾಗಿ, ಅಥವಾ ಆವೇ ಸ್ವರೂಪದ್ದ ಯಾವ ಕೆಲಸಗಳ ಬಗ್ಗೆ ಸ್ಥಳಗಳನ್ನು ಕಾಳಜಿಪೂರ್ವಕವಾಗಿ ಆರಿಸಬೇಕಾಗುವದೋ, ಪ್ಲಾನುಗಳನ್ನು ತಯಾರ ಮಾಡಬೇಕಾಗುವದೋ ಹಾಗೂ ಆ ಕೆಲಸಗಳನ್ನು ಪೂರೈಸುವಾಗ ತಜ್ಞರ ಮೇಲ್ವಿಚಾರಣೆಯು ಅವಶ್ಯವಿರುವದೋ ಅಂಥ ಕೆಲಸಗಳ ಸಲುವಾಗಿ ತಗಾಯಿ ಸಾಲಗಳನ್ನು ಸಂಯುಕ್ತ ಜಾಂಡಿನ ಪದ್ಧತಿಯ ಮೇರೆಗೆ ಅಥವಾ ವ್ಯಕ್ತಿಗಳಿಗೆ ಕೊಡುವಾಗ, ಸಾಲಗಳನ್ನು ಮಂಜೂರ ಮಾಡುವ ಅಮಲದಾರನು, ಸದರಿ ಸಾಲ ಪಡೆಯುವವರಿಗೆ ಯಾವದೇ ಸಾಲದ ರಕಮು ಕೊಡಲ್ಪಡುವ ಮುಂಚೆ, ಸದರಿ ಕೆಲಸದ ಸ್ಥಳವನ್ನು ಹಾಗೂ ಪ್ಲಾನುಗಳನ್ನು ಎಗ್ಝಿಕ್ಯುಟಿವ್ ಎಂಜಿನಿಯರನಿಂದ ಮಂಜೂರ ಮಾಡಿಸಿಕೊಳ್ಳಲಿಕ್ಕೂ, ಸದರಿ ಕೆಲಸಗಳನ್ನು ಆಯಾ ಸ್ಥಳದ ಪಬ್ಲಿಕ್ ವರ್ಕ್ಸ ಡಿಪಾರ್ಟಮೆಂಟಿನ ಅಮಲದಾರರಿಂದ ತಪಾಸಿಸಿಕೊಳ್ಳಲಿಕ್ಕೂ ಸಾಲ ಪಡೆದವರು ಸಮ್ಮತಿಸುವಂತೆ ಅವರಿಗೆ ಒತ್ತಾಯ ಮಾಡತಕ್ಕದ್ದು. ಸಾಲ ಪಡೆದವರಿಗೆ ಅಥವಾ ಸಮಾಜಕ್ಕೆ ಸದರಿ ಕೆಲಸದಿಂದ ನಿಜವಾಗಿ ಲಾಭವಾಗುವಂತಿದ್ದು, ಸದರಿ ಕೆಲಸದ ಮೂಲಕ, ಸದರಿ ಸ್ಥಳದಲ್ಲಿ ಕೆಲಸವಿಲ್ಲದ ಜನರಿಗೆ ಕೂಲಿ ದೊರೆಯುವಂತಿದ್ದರೆ, ಇಂಥ ಪ್ರಸಂಗಗಳಲ್ಲಿ ದೇಖರೇಖಿ ಮುಂತಾದ್ದರ ಸಲುವಾಗಿ ಪಬ್ಲಿಕ್ ವರ್ಕ್ಸ ಡಿಪಾರ್ಟಮೆಂಟಿನವರು ಆಕಾರಿಸುವ ಸಾಮಾನ್ಯ ಫೀಗಳನ್ನು ಮಾಫು ಮಾಡಲಾಗುವದು.

೪. ದುರ್ಭಿಕ್ಷದ ಕಾಲದಲ್ಲಿ ಅಥವಾ ದುಷ್ಕಾಳದಲ್ಲಿ ತಗಾಯಿ ರಕಮನ್ನು ಹಂಚುವ ಕೆಲಸವನ್ನು ಬೇಗನೆ ಮಾಡುವದಕ್ಕಾಗಿ, ಮಾಮಲೇದಾರರಿಗೆ ಹಾಗೂ ರಿಲೀಫ ಹೆಡ್ ಕಾರಕೂನರಿಗೆ ತಗಾಯಿ ಆಕ್ಟಿನನ್ವಯ ಹೆಚ್ಚಿನ ಅಧಿಕಾರಗಳನ್ನು ಕೊಡುವದು ವಾಡಿಕೆಯಾಗಿದೆ. ಜನರಿಗೆ ಜರೂರಿರುವ ಹಾಗೂ ಸಾಲ ತೆಗೆದುಕೊಂಡವರಿಗೆ ಅಥವಾ ಅವರು ಕೆಲಸಕ್ಕಿಟ್ಟುಕೊಂಡವರಿಗೆ ಲಾಭದಾಯಕವಾಗಬಹುದಾದ ತಗಾಯಿ ಸಾಲಗಳನ್ನು ಶಕ್ಯವಿದ್ದ ಮಟ್ಟಿಗೆ ವಿಳಂಬ ಮಾಡದೆ ಕೊಡುವದು ಅವಶ್ಯವಿದ್ದಾಗ್ಯೂ, ಯಾವ

ಅಮಲ್ದಾರರಿಗೆ ಹೆಚ್ಚಿನ ಅಧಿಕಾರಗಳನ್ನು ಕೊಟ್ಟರೆ ಅವರು ಅವುಗಳನ್ನು ಜಾಣತನದಿಂದ ನಡೆಸುವರೆಂದು ನಂಬಬಹುದೋ ಅಂಥ ಮಾಮಲೇದಾರರಿಗೆ ಹಾಗೂ ಹೆಡ್ ಕಾರಕೂನರಿಗೆ ಮಾತ್ರ ಇಂಥ ಹೆಚ್ಚಿನ ಅಧಿಕಾರಗಳನ್ನು ಕೊಡುವದಕ್ಕಾಗಿ ಆರಿಸುವ ಬಗ್ಗೆ ಕಾಳಜಿ ತೆಗೆದುಕೊಳ್ಳತಕ್ಕದ್ದು. ಸಬ್-ಡಿವಿಜನಲ್ ಆಫೀಸರನ ದರ್ಜೆಗಿಂತ ಕಡಿಮೆ ದರ್ಜೆಯ ಯಾವನೇ ಅಮಲದಾರನಿಗೆ ಯಾವದೇ ಪ್ರಸಂಗದಲ್ಲಿ ಹೊಟ್ಟೆಯ ಖರ್ಚಿನ ಸಲುವಾಗಿ ತಗಾಯಿ ಸಾಲವನ್ನು ಕೊಡಲಿಕ್ಕೆ ಪರವಾನಗಿ ಕೊಡಬಾರದು, ಮತ್ತು ಹೊಲ ಮಾಡುವವರ ಸಾಲಗಳ ಆಕ್ಟಿನನ್ವಯ ಹೆಚ್ಚಿನ ಅಧಿಕಾರಗಳನ್ನು ಎಷ್ಟು ನಿರಾತಂಕವಾಗಿ ಕೊಡಲಾಗುತ್ತದೋ ಅಷ್ಟು ನಿರಾತಂಕ ವಾಗಿ, ಭೂಮಿಯ ಸುಧಾರಣೆ ಮಾಡುವಗೋಸ್ಕರ ಸಾಲಗಳನ್ನು ಕೊಡುವ ವಿಷಯದ ಆಕ್ಟಿನನ್ವಯ ಹೆಚ್ಚಿನ ಅಧಿಕಾರಗಳನ್ನು ಸಾಮಾನ್ಯವಾಗಿ ಕೊಡತಕ್ಕದ್ದಲ್ಲ. ಸಾಲಗಳನ್ನು ಕೊಡುವ ಬಗ್ಗೆ ಹೆಚ್ಚಿನ ಅಧಿಕಾರಗಳನ್ನು ಪಡೆದ ಯಾವತ್ತು ಅಮಲದಾರರ ಕೆಲ ಸದ ಮೇಲೆ ಕಲೆಕ್ಟರನೂ ಸಬ್-ಡಿವಿಜನಲ್ ಆಫೀಸರನೂ ಕಾಳಜಿ ಪೂರ್ವಕವಾದ ಲಕ್ಷ್ಯವನ್ನಿಡಬೇಕು, ಮತ್ತು ಅಳತೆಗೆಟ್ಟು ಅಥವಾ ಯೋಗ್ಯ ವಿಚಾರವಿಲ್ಲದೆ ಸಾಲಗಳನ್ನು ಈ ಅಮಲದಾರರು ಕೊಡು ವಲ್ಲಿ ತೋರಿಸುವ ಯಾವದೇ ಪ್ರವೃತ್ತಿಗೆ ಕೂಡಲೆ ತಡೆಹಾಕ ತಕ್ಕದ್ದು.

೫. ಈ ಕಾಲಗಳಲ್ಲಿ ಭೂಮಿಯ ಸುಧಾರಣೆಯ ಬಗ್ಗೆ ಕೊಡುವ ಸಾಲಗಳ ಸಲುವಾಗಿ ಕೆಲಸಗಳನ್ನು ಆರಿಸುವಾಗ, ಉತ್ಪನ್ನವು ದೊರೆಯುವಂಥ ಕೆಲಸದ ಮೇಲೆ ಖರ್ಚು ಮಾಡಲಾಗುವ ಸಾಲಗಳಿಗೆ ಅಗ್ರತೆಯನ್ನು ಕೊಡಬೇಕು, ಮತ್ತು ಕೂಲಿಗಳನ್ನು, ಸರಕಾರದವರ ವಾಡಿಕೆಯ ದುಷ್ಕಾಳದ ದರದಂತೆ ಕೊಡತಕ್ಕದ್ದೆಂದು ಕರಾರು ಮಾಡತಕ್ಕದ್ದು. ಅರ್ಜಿದಾರನಿಗೆ ತನ್ನ ಸ್ವಂತದ ಹಣದಿಂದ ಕೆಲಸ ವನ್ನು ಮಾಡಿಸಲಿಕ್ಕೆ ಬರುತ್ತಿದ್ದರೆ, ಅಂಥ ಕೆಲಸದ ಸಲುವಾಗಿ ಸಾಲ

ವನ್ನು ಕೊಡತಕ್ಕದ್ದಲ್ಲ, ಆದರೆ ಅವನಿಗೆ ಕೊಡಲಿಕ್ಕೆ ಸಾಧ್ಯವಿಲ್ಲದಿದ್ದ ರಕಮುಗಳ ಸಲುವಾಗಿ ಸಾಲಗಳನ್ನು ಕೊಡಬಹುದು.

೬. ತಾರಣದ (೭ನೇ ಕಾನೂನು) ಬಾಬತಿನಲ್ಲಿ, ವಿಶೇಷವಾಗಿ ಅರ್ಜದಾರನ ವೈಯಕ್ತಿಕ ದರ್ಜೆಯು ಒಳ್ಳೇದಿದ್ದರೆ, ಸರ್ವೇ ಮಾಡ ದಿದ್ದ ಇನಾಮು ಗ್ರಾಮಗಳಲ್ಲಿಯ ಗೇಣಿಯ ಹಕ್ಕುಗಳನ್ನು ಸ್ವೀಕರಿಸ ಬಹುದು. ಸರಕಾರೀ ಗ್ರಾಮಗಳ ಗೇಣಿದಾರರ ಬೇಡಿಕೆಗಳನ್ನು ಎಷ್ಟು ನಿರಾತಂಕವಾಗಿ ಪೂರೈಸಬಹುದೋ ಅಷ್ಟೇ ನಿರಾತಂಕವಾಗಿ ಇನಾಮದಾರರ ಗೇಣಿದಾರರ ಬೇಡಿಕೆಗಳನ್ನು ಸಂಯುಕ್ತ ಬಾಂಡು ಗಳ ಮೂಲಕ ಪೂರೈಸಬಹುದು, ಮತ್ತು ಸ್ವಂತದ ಭೂಮಿಯಿಲ್ಲದ ಹೊಲ ಮಾಡುವವರಿಗೆ ಸಂಯುಕ್ತ ಬಾಂಡುಗಳ ಮೇಲೆ ಸಾಲಗಳನ್ನು ಕೊಡಬಹುದು (ಆರ್. ೧೧೯೦೦-೧೧).

೭. ಸಾಮಾನ್ಯ ಕಾಲದಲ್ಲಿ ದುಷ್ಕಾಳ ಪ್ರತಿಬಂಧಕೋಪಾಯ ಗಳು.—ಯಾವ ಪ್ರದೇಶಗಳಲ್ಲಿ ನೀರಿನ ಪುರವಠೆಯು ಅನಿಶ್ಚಿತ ವಿರುವದೋ ಅಲ್ಲಿ ನೀರಾವರಿಯ ಕೆಲಸಗಳ ಸಲುವಾಗಿ ಕಲೆಕ್ಟರನು ೨೦೦ ರೂಪಾಯಿಗಳ ವರೆಗೆ ಹಾಗೂ ಕಮಿಶನರನು ೫೦೦ ರೂಪಾ ಯಿಗಳ ವರೆಗೆ ಸಾಲ ಕೊಡಬಹುದು. ಸಾಲದ ಹಣವನ್ನು ಅವಿ ಚಾರದಿಂದ ಹಾಳು ಮಾಡುವದನ್ನು ಪ್ರತಿಬಂಧಿಸುವ ಬಗ್ಗೆ ಹಾಗೂ ಸಾಲ ಪಡೆದವರು ಕೆಲಸಗಳನ್ನು ಮಾಡಿಸುವಲ್ಲಿ ಒಳ್ಳೇ ಆಸಕ್ತಿಯನ್ನು ತೋರಿಸಿ ತಮ್ಮ ಕೈಲಾದ ಮಟ್ಟಿಗೆ ಅತ್ಯುತ್ತಮವಾಗಿ ಕೆಲಸಗಳನ್ನು ಮಾಡುತ್ತಾರೆಂದು ಖಾತ್ರಿ ಮಾಡಿಕೊಳ್ಳುವ ಬಗ್ಗೆ, ಸಾಲ ತಕ್ಕೊಳ್ಳು ವವನು ಕನಿಷ್ಟ ಪಕ್ಷಕ್ಕೆ ಸಾಲದ ಅರ್ಧ ರಕಮನ್ನಾದರೂ ತನ್ನ ಸ್ವಂತ ಉತ್ಪನ್ನದೊಳಗಿಂದಾಗಲಿ, ವಾಡಿಕೆಯ ಬಡ್ಡಿಯಿಂದೊಡ ಗೂಡಿದ ತಗಾಯಿಯಿಂದಾಗಲಿ ದೊರಕಿಸಿದ್ದರೆ ಮಾತ್ರ, ಈ ಗ್ರಾಂಟುಗಳನ್ನು ಕೊಡಬಹುದೆಂಬದನ್ನು ಒತ್ತಿ ಹೇಳಬೇಕು. ಇದ ಲ್ಲದೆ ಇಂಥ ಯಾವತ್ತು ಕೆಲಸಗಳನ್ನು ಎಗ್ಜಿಕ್ಯುಟಿವ್ ಎಂಜಿನಿಯರ ನಿಂದ ಮಂಜೂರು ಮಾಡಿಸಿರಬೇಕು (ಆರ್. ೨೨೮೧-೦೯) : ಮತ್ತು

ಪ್ರಾಂತ ಅಮಲದಾರನು ಸದರಿ ಕೆಲಸಗಳ ತಪಾಸಣೆಯನ್ನು ಮಾಡಿಸಬೇಕು.

೮. ಯಾವದೊಂದು ಕೆಲಸವು ನಿರುಪಯುಕ್ತವಾಗುವದರಿಂದುಂಟಾಗುವ ನಷ್ಟದ ಭಾರವನ್ನು ಯಾರು ವಹಿಸಬೇಕೆಂಬ ವಿಷಯದ ಕಾನೂನನ್ನು ಸರಕಾರದವರು ಬದಲಾಯಿಸಿ, ಯಶಸ್ವಿಯಾಗದಿದ್ದ ನೀರಿನ ಸಲುವಾಗಿ ಮಾಡಲಾದ ಬೋರಿಂಗುಗಳ ಯಾವತ್ತು ಖರ್ಚಿನ ಸಲುವಾಗಿ ಫುಕ್ಕಟೆಯಾದ ಗ್ರಾಂಟುಗಳನ್ನು ಕೊಡಬೇಕೆಂಬ ಸಂಗತಿಯನ್ನು ಸರಕಾರದವರು ಮಾನ್ಯ ಮಾಡಿದ್ದಾರೆ (ಆರ್. ೮೪೯೨-೦೮). ಬೋರಿಂಗು ಯಶಸ್ವಿಯಾದರೆ, ಅರ್ಜದಾರನು ತನ್ನ ಸ್ವಂತ ಹಣದಿಂದ ಅಥವಾ ಸಾಮಾನ್ಯ ತಗಾಯಿಯಿಂದ ಅದರ ಸಂಪೂರ್ಣ ಖರ್ಚನ್ನು ಕೊಡುತ್ತಾನೆ. ಮೇಲಿನ ೭ನೇ ಕಾನೂನಿನಲ್ಲಿದ್ದ ತತ್ವವೇ ಇಲ್ಲಿಯಾದರೂ ಇರುತ್ತದೆ, ಆದರೆ, ಭಾಗ್ಯಶಾಲಿಯಾದ ಮನುಷ್ಯನು ತಾನಾಗಿ ರಕಮಿನ ಕೆಲಭಾಗವನ್ನು ಕೊಡುತ್ತಾನೆ ಮತ್ತು ಫುಕ್ಕಟೆ ಗ್ರಾಂಟುಗಳನ್ನು ದುರ್ದೈವೀ ಮನುಷ್ಯನಿಗೆ ಮಾತ್ರ ಕೊಡಲಾಗುತ್ತದೆ. ಶಕ್ಯವಿದ್ದ ಮಟ್ಟಿಗೆ ಯಶಸ್ಸನ್ನು ದೊರಕಿಸುವದರಲ್ಲಿ ಯಾವತ್ತು ಜನರು ಸಮಾನವಾಗಿ ಆಸಕ್ತಿಯನ್ನು ವಹಿಸುತ್ತಾರೆ.

೯. ಈ ಪುಸ್ತಕದ ೨೭ರಿಂದ ೩೧ರ ವರೆಗಿನ ಪುಟಗಳಲ್ಲಿ ಛಾಪಿಸಿದ, ಭೂಮಿಯ ಸುಧಾರಣೆಯ ವಿಷಯದ ಸಾಲಗಳ ಬಗ್ಗೆ ಠರಾಯಿಸಿದ ಅರ್ಜಿಯ ನಮೂನೆಯ ೯ನೇ, ೧೪ನೇ ಹಾಗೂ ೧೫ (೩) (ಕ) ಮತ್ತು (ಡ) ಹಾಗೂ (೪)ನೇ ಬಾಬತುಗಳನ್ನು ದುಷ್ಕಾಳದಲ್ಲಿ ಬಿಟ್ಟುಬಿಡಬಹುದು (ಎಫ್. ೪೭೧೨-೧೮).

# ೨ನೇ ಭಾಗ.

## ತಗಾಯಿ ಲೆಕ್ಕಗಳು.

### ಅಂದಾಜುಗಳು ಹಾಗೂ ಒಟ್ಟು ಕೊಟ್ಟ ರಕಮುಗಳು.

ತಗಾಯಿಯ ಸಲುವಾಗಿ ಹಣವು ಈಗ ಪ್ರಾಂತಿಕ ಸರಕಾರದವರಿಂದಲೇ ಕೊಡಲ್ಪಡುತ್ತದೆ ಮತ್ತು ತಗಾಯಿಯು ಪೂರ್ಣವಾಗಿ ಪ್ರಾಂತಿಕ ಸರಕಾರದವರ ಅಧಿಕಾರದ ವಿಷಯವಾಗಿರುತ್ತದೆ (ಎಫ್. ೧೮೮೧—೧೫-೭-೨೪). ತಗಾಯಿ ವ್ಯವಹಾರಗಳ ಆರ್ಥಿಕ ಪರಿಣಾಮಗಳನ್ನು ಕುರಿತು ತಜವೀಜು ಮಾಡುವ ವಿಧಾನವನ್ನು ೧೨ನೇ ಕಾನೂನಿನ ೩೩ನೇ ಟಿಪ್ಪಣಿಯಲ್ಲಿ ಪೂರ್ಣವಾಗಿ ಕೊಡಲಾಗಿದೆ.

೨. ವಾರ್ಷಿಕ ಪ್ರಾಂತಿಕ ಬಜೇಟಿನಲ್ಲಿಯ ಗ್ರಾಂಟು, ಖರ್ಚು ಹಾಗೂ ವಸೂಲಿಗಳ ನಡುವಿನ ಅಂತರದ ರಕಮಿನ ಗ್ರಾಂಟಿರುತ್ತದೆ: ಆದರೆ, ವಸೂಲಾಗುವ ರಕಮುಗಳು ವಸೂಲಾದರೂ ಅಥವಾ ವಸೂಲಾಗದಿದ್ದರೂ, ಪ್ರತಿಯೊಂದು ಜಿಲ್ಲೆಯಲ್ಲಿ ಖರ್ಚು ಮಾಡುವದರ ಸಲುವಾಗಿ ನೇಮಿಸಿಕೊಟ್ಟ ರಕಮನ್ನು ಮೀರತಕ್ಕದ್ದಲ್ಲ. ವಸ್ತುತಃ, ಹಣವು ವಸೂಲಾಗದಿದ್ದರೆ, ಖರ್ಚನ್ನು ಕಡಿಮೆ ಮಾಡುವದು ಲೇಸು. ಪ್ರತಿಯೊಬ್ಬ ಕಲೆಕ್ಟರನು ತನ್ನ ವಸೂಲಿಗಳ ಸಂಬಂಧದ ಹಾಗೂ ಲಗತು ಮುಂದಿನ ನಗದಿ ವರ್ಷದ ಸಲುವಾಗಿರುವ ಹೊಸ ಸಾಲಗಳ ಸಂಬಂಧದ ತನ್ನ ಅಂದಾಜುಗಳನ್ನು, ಕಮಿಶನರನ ಮುಖಾಂತರ, ಅಕೌಂಟಂಟ ಜನರಲನ ಕಡೆಗೆ ಅಕ್ಟೋಬರ ತಿಂಗಳಲ್ಲಿ ಸಾದರ ಮಾಡಬೇಕು (ಎಫ್. ೨೩೦೩-೮೯). ಲೆಕ್ಕಗಳನ್ನಿಡುವ ಪದ್ಧತಿಯ ಮೇರೆಗೆ ಎರಡೂ ಆಕ್ಟುಗಳ ಲೆಕ್ಕಗಳನ್ನು ಇನ್ನು ಮುಂದೆ ಪ್ರತ್ಯೇಕವಾಗಿ ಇಡಲಾಗದಿದ್ದುದರಿಂದ, ಇವೆರಡೂ ಆಕ್ಟುಗಳ ಬಗ್ಗೆ ಒಂದೇ ಅಂದಾಜಿನಲ್ಲಿ ತಜವೀಜು ಮಾಡಲಾಗಿದೆ. ಪ್ರತಿಯೊಂದು ಆಕ್ಟಿನನ್ವಯ ಎಷ್ಟು ರಕಮನ್ನು ಸಾಲವಾಗಿ ಕೊಡಲಾಗಿದೆ ಎಂಬವನ್ನು ಯಾವನಾದರೂ ತಿಳಿಯಲಿಚ್ಛಿಸಿದರೆ, ತ. ನ. ೧ರಿಂದ ಆಯಾ ವರ್ಷದ ಒಟ್ಟು ರಕಮುಗಳನ್ನು ದೊರಕಿಸಿ ಇದನ್ನು

ತಿಳಕೊಳ್ಳಬಹುದು. ಬಜೆಟು ಮಂಜೂರಾದ ಬಳಿಕ ಸರಕಾರದವರು, ಎಪ್ರಿಲ ತಿಂಗಳ ಆರಂಭಕ್ಕೆ, ತಮ್ಮೊಡನೆ ಎಷ್ಟು ರಕಮು ಇರುತ್ತದೆಂಬದನ್ನು ಕಮಿಶನರರಿಗೆ ತಿಳಿಸುವರು, ಮತ್ತು ಕಮಿಶನರರು ಈ ಸಂಗತಿಯನ್ನು ಕಲೆಕ್ಟರರಿಗೆ ತಿಳಿಸುವರು (ಎಫ್. ೧೦೬೫-೦೨).. ಎಪ್ರಿಲ ತಿಂಗಳ ಮೊದಲಿನ ಕೆಲವು ವಾರಗಳಲ್ಲಿ ಕಲೆಕ್ಟರನು ಹಾಗೂ ಅವನ ಕೈಕೆಳಗಿನವರು, ನೇಮಿಸಿಕೊಡಲಾದ ರಕಮು ತಮಗೆ ಖಂಡಿತವಾಗಿ ದೊರೆಯುವದೆಂದು ಗೃಹಿಸಬಾರದು. ಗ್ರ್ಯಾಂಟು ಕೊಡಲಾಗಿದೆ ಎಂದು ತಿಳಿಸುವ ವರೆಗೆ, ಯಾವದೇ ಹಣವನ್ನು ಹಂಚಿಕೊಡಬಾರದು (ಎಫ್. ೪೮೦–೯–೮–೨೩).

೩. ನೇಮಿಸಿಕೊಡಲಾದ ರಕಮು ಗೊತ್ತಾದ ನಂತರ ಕಲೆಕ್ಟರನು ಅದನ್ನು ತಾಲೂಕುಗಳ ಹಾಗೂ ಪೇಠಾಗಳ ನಡುವೆ (ಪ್ರತಿಯೊಂದು ಪೇಠಾ ಮಹಾಲನ್ನು ತಾಲೂಕೆಂದು ತಿಳಿದು) ಹಂಚತಕ್ಕದ್ದು ಮತ್ತು ಸಾಕಷ್ಟು ಹಣವನ್ನು ಕಾದಿಡತಕ್ಕದ್ದು. ಯಾವ ತಾಲೂಕಿನಲ್ಲಿ ಹೆಚ್ಚು ಜರೂರಿಯ ಮಾಗಣಿಯಿರುವದೋ ಅಂಥ ಯಾವದೇ ತಾಲೂಕಿನ ಗ್ರ್ಯಾಂಟಿನ ರಕಮನ್ನು ಬೆಳೆಸುವದರ ಸಲುವಾಗಿ ಈ ಕಾದಿಟ್ಟ ರಕಮನ್ನು ಉಪಯೋಗಿಸಲಾಗುವದು: ಆದರೆ ಇತರ ಯಾವದೇ ತಾಲೂಕಿನಲ್ಲಿ ಬಹಳೇ ಕಡಿಮೆ ರಕಮು ಖರ್ಚು ಮಾಡಲ್ಪಡುತ್ತಿದ್ದರೆ, ಕಲೆಕ್ಟರನು ಅದರ ಗ್ರ್ಯಾಂಟಿನ ಪೈಕಿ ಕೆಲವನ್ನು ಹಿಂತಿರಿಗಿ ತಕ್ಕೊಂಡು ಅದನ್ನು ಕಾದಿಟ್ಟ ರಕಮಿಗೆ ಕೂಡಿಸಬಹುದು. ಡಿಸೆಂಬರ ತಿಂಗಳು ಮುಗಿಯುವದರೊಳಗಾಗಿ ಈ ಕಾದಿಟ್ಟ ರಕಮನ್ನು ಪೂರ್ಣವಾಗಿ ನೇಮಿಸಿಕೊಡತಕ್ಕದ್ದು. ಹೀಗೆ ಮಾಡದಿದ್ದರೆ, ಜಿಲ್ಹಾ ಗ್ರ್ಯಾಂಟುಗಳ ಪೈಕಿ ಕೆಲವನ್ನು ಹಿಂತಿರಿಗಿ ಕೊಡಲಿಕ್ಕೆ ಕಮಿಶನರನಿಗೆ ತಿಳಿಸುವದು ಸುರಕ್ಷಿತತೆಯ ದೃಷ್ಟಿಯಿಂದ ಒಳ್ಳೇದು. ಕಮಿಶನರನಿಗೆ, ಗ್ರ್ಯಾಂಟುಗಳನ್ನು ಪುನಃ ಹಂಚಿಹಾಕುವ ಅಧಿಕಾರವಿರುತ್ತದೆ ಮತ್ತು ಅವನು ಬಹುಶಃ ಹಣವನ್ನು ಕಾದಿಡುವ ಸಂಭವವಿದೆ. (ಆರ್. ೯೧೧೩–೯೦). ಯಾವದೊಂದು ಜಿಲ್ಹೆಯು ತನಗೆ ಒಪ್ಪಿಸಿಕೊಡಲಾದ ಗ್ರ್ಯಾಂಟಿನ ರಕಮನ್ನು, ಅದರಿಂದ ಎರಡನೇ ಯಾವದೇ ಜಿಲೆಯು ಹೆಚ್ಚಿನ ರಕ

ವನ್ನು ಖರ್ಚು ಮಾಡಲಿಕ್ಕೆ ಸಮರ್ಥರಾದರೆ ಮಾತ್ರ, ಹಿಂತಿರಿಗಿ ಕೊಡುವದು ಉಪಯುಕ್ತವಾಗಬಹುದು. ಆದದರಿಂದ ಬಹಳ ತಡ ಮಾಡಿ ಗ್ರ್ಯಾಂಟನ್ನು ಹಿಂತಿರಿಗಿ ಕೊಡುವದರಿಂದ ಯಾವದೇ ಉಪಯೋಗವಾಗುವದಿಲ್ಲ (ಎಫ್. ೪೧೫೬-೬೦, ೩೭೭೦-೭೩). ವರ್ಷದಲ್ಲೆಲ್ಲ ಕಲೆಕ್ಟರನು ಈ ಸಂಗತಿಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳತಕ್ಕದ್ದು, ಮತ್ತು ತಾಲೂಕುಗಳಲ್ಲಾಗುವ ಖರ್ಚಿನ ಮೇಲೆಯೂ, ತನ್ನ ಕಡೆಗಿದ್ದ ಕಾದಿಟ್ಟ ರಕಮಿನ ಮೇಲೆಯೂ ಲಕ್ಷ್ಯಕೊಡತಕ್ಕದ್ದು (ತ. ಸ. ೧೭ರ ಮೇಲಿನ ಶರಾಗಳ ೬ನೇ ಪ್ಯಾರಾವನ್ನು ನೋಡಿರಿ). ನವೆಂಬರ-ಡಿಸೆಂಬರ ತಿಂಗಳಲ್ಲಿ ಆಯಾ ಪ್ರಾಂತ ಅಮಲದಾರನಿಗೂ ಮಾಮಲೇದಾರನಿಗೂ ತಮ್ಮ ತಮ್ಮ ಹಾಗಣಿಯ ಸಿಂಹಾವಲೋಕನವನ್ನು ಮಾಡಲಿಕ್ಕೂ, ಫೆಬ್ರುವರಿ ಕೊನೆಯ ವರೆಗೆ ಅವರು ತಮ್ಮ ಖರ್ಚನ್ನು ಸಾಗಿಸಲು ಸಮರ್ಥರಾಗುವಂತೆ ಅವರಿಗೆ ಎಷ್ಟು ಹೆಚ್ಚಿಗೆ ಅಥವಾ ಕಡಿಮೆ ರಕಮು ಬೇಕಾಗುವದೆಂಬದನ್ನು ಅಂದಾಜ ಮಾಡಲಿಕ್ಕೂ ಅವರಿಗೆ ಫರಮಾಯಿಸತಕ್ಕದ್ದು. ಹೆಚ್ಚಿನ ಗ್ರ್ಯಾಂಟು ಬೇಕಾಗಿದ್ದರೆ, ಅದರ ಸಲುವಾಗಿ ಅರ್ಜಿ ಮಾಡಬೇಕು: ಆದರೆ, ಹಾಗಣಿಯು ಒಳ್ಳೇ ಜರೂರಿನದಿಲ್ಲದಿದ್ದರೆ, ಗ್ರ್ಯಾಂಟಿನ ರಕಮನ್ನು ಏನೂ ವಿಳಂಬ ಮಾಡದೆ ಹಿಂತಿರಿಗಿ ಕೊಡಬೇಕು. ಹೆಚ್ಚಿನ ಹಣದ ಜರೂರಿಯಿರುವ ಇತರ ಜಿಲ್ಲೆಗಳಿರಬಹುದು; ಅದ್ದರಿಂದ ಯಾವದೊಂದು ಗ್ರ್ಯಾಂಟು ಉಪಯೋಗಿಸಲ್ಪಡುವದೋ ಇಲ್ಲವೋ ಎಂಬ ಬಗ್ಗೆ ಯಾವದೇ ಅನಿಶ್ಚಿತತೆಯು ಕಂಡುಬಂದರೆ, ಅದನ್ನು ಕೂಡಲೇ ಹಿಂತಿರಿಗಿ ಕೊಡತಕ್ಕದ್ದು. ಕಡಿಮೆ ಮಾಡಿದ ಗ್ರ್ಯಾಂಟಿನ ರಕಮು ತೀರಿದಾಗ್ಯೂ, ಮಂಜೂರಾದ ಉಳಿದ ಅರ್ಜಿಗಳ ಹಣ ಕೊಡುವದನ್ನು ಎಪ್ರಿಲ ತಿಂಗಳ ವರೆಗೆ ಮುಂದೆ ಹಾಕುವದು ಶಕ್ಯವಿರುತ್ತದೆಂಬದು ಸ್ಪಷ್ಟವದೆ. ಫೆಬ್ರುವರಿ ತಿಂಗಳ ೨೮ನೇ ತಾರೀಖಿನ ದಿವಸ ಕೊನೆಯ ರಿಪೋರ್ಟನ್ನು ಮಾಡತಕ್ಕದ್ದು, ಯಾಕಂದರೆ, ಆ ಕಾಲಕ್ಕೆ ಕೂಡ ಕೆಲಮಟ್ಟಿನ ಹೆಚ್ಚಿನ ಗ್ರ್ಯಾಂಟನ್ನು ಬೇರೊಂದು ಜಿಲ್ಲೆಯಲ್ಲಿ ಉಪಯೋಗಿಸುವದು ಶಕ್ಯವಿರುತ್ತದೆ. ಅನೇಕ ಜಿಲ್ಲೆಗಳು ತಮ್ಮ ತಮ್ಮ ಗ್ರ್ಯಾಂಟುಗಳನ್ನು

ಹಿಂತಿರಿಗಿ ಕೊಟ್ಟರೆ, ಕಮೀಶನರನು ತನ್ನ ಭಾಗದ ಗ್ರಾಂಟಿನ ಹೆಚ್ಚಿನ ರಕಮನ್ನು ಆ ಮೇಲೆ ಸರಕಾರದವರಿಗೆ ಹಿಂತಿರಿಗಿ ಕೊಡಬಹುದು (ಎಫ್. ೧೩೨೦-೩೪) ಅಥವಾ ಶಕ್ಯವಿದ್ದರೆ, ಕಲೆಕ್ಟರನಿಗೆ, ಹೆಚ್ಚಿಗೆ ಖರ್ಚು ಮಾಡುವದಕ್ಕೆ ಹೇಳಬಹುದು. ಚೌಕಶಿ ಮಾಡದೆ ಹಾಗೂ ಅವಿಚಾರದಿಂದ ಸಾಲಗಳನ್ನು ಕೊಡದೆ, ಚೌಕಶಿ ಮಾಡಲಾದ ಹಾಗೂ ಮಂಜೂರ ಮಾಡಲಾದ ಯಾವತ್ತು ಸಾಲಗಳ ರಕಮನ್ನು ಅವರು ಕೊಟ್ಟು ಬಿಡಬೇಕು ಎಂದು ಇದರ ಅರ್ಥವಾಗುತ್ತದೆ.

೪. ಮಾಮಲೇದಾರನಿಗೂ, ಪ್ರಾಂತ ಅಮಲದಾರನಿಗೂ, ಕಲೆಕ್ಟರನಿಗೂ, ಸಾಲಗಳನ್ನು ಕೊಡುವ ಅಧಿಕಾರವಿರುತ್ತದೆ, ಮತ್ತು ಕೊಟ್ಟ ಸಾಲಗಳ ರಕಮು, ಸಂಬಂಧಪಡುವ ತಾಲೂಕಿನ ಸಲುವಾಗಿರುವ ಗ್ರಾಂಟಿನೊಳಗಿಂದಲೇ ಕೊಡಲ್ಪಡಬೇಕು. ಸಾಲಗಳ ಯಾವತ್ತು ರಕಮನ್ನು ತಾಲೂಕಿನ ಟ್ರೆಝುರಿಯಿಂದಲೇ ಕೊಡಲಾಗುವದೆಂಬದು ಸ್ಪಷ್ಟವದೆ. ಮಾಮಲೇದಾರನು ಶಿಲುಕು ಉಳಿದ ರಕಮಿನ ಬಗ್ಗೆ ರಿಪೋರ್ಟು ಮಾಡಿದಾಗ (ತ. ನ. ೧ರ ಮೇಲಿನ ಶರಾಗಳ ಪೈಕಿ ೩ನೇ ಪ್ಯಾರಾ ನೋಡಿರಿ), ಪ್ರತಿತಿಂಗಳ ಕೊನೆಗೆ ಎಷ್ಟು ರಕಮು ಖರ್ಚಾಯಿತೆಂಬದನ್ನು ಪ್ರಾಂತ ಅಮಲದಾರನು ನೋಡತಕ್ಕದ್ದು. ಶಿಲುಕಿನ ರಕಮು ಕಡಿಮೆಯಾಗುತ್ತಿದ್ದರೆ, ಮತ್ತು ಮಾಮಲೇದಾರನೂ ಪ್ರಾಂತ ಅಮಲದಾರನೂ ಒಂದೇ ದಿವಸ ಕೂಡಲೇ ಕೊಡಲ್ಪಡುವದಕ್ಕಾಗಿ ಸಾಲಗಳನ್ನು ಕೊಡುವದರಿಂದ ಗ್ರಾಂಟಿನ ರಕಮಿಗಿಂತ ಹೆಚ್ಚಿನ ಹಣವು ಕೊಡಲ್ಪಡುವ ಸಂಭವವಿದ್ದರೆ, ಯಾವ ಸಾಲಗಳನ್ನು ಮೊದಲಿಗೆ ಕೊಡಬೇಕೆಂಬ ಬಗ್ಗೆ ಮಾಮಲೇದಾರನು ಪ್ರಾಂತ ಅಮಲದಾರನೊಂದಿಗೂ ಕಲೆಕ್ಟರನೊಂದಿಗೂ (ಅವನಾದರೂ ಸಾಲಗಳನ್ನು ಕೊಡುತ್ತಿದ್ದರೆ) ವ್ಯವಸ್ಥೆ ಮಾಡಿಕೊಳ್ಳಬೇಕು ಮತ್ತು ಒಂದೇ ಕಾಲಕ್ಕೆ ಕೊಡುವವನ್ನು ತಪ್ಪಿಸಬೇಕು. ವಾಡಿಕೆಯಾಗಿ, ದೊಡ್ಡ ಸುಧಾರಣೆಗಳ ಸಲುವಾಗಿರುವ ದೊಡ್ಡ ರಕಮಿನ ಸಾಲಗಳನ್ನು, ಆ ಕೆಲಸವನ್ನು ಪ್ರಾರಂಭಿಸುವದಕ್ಕೆ ಸಾಕಷ್ಟು ರಕಮಿನ ಒಂದು ಕಂತನ್ನು ಕೊಟ್ಟರೆ, ಸ್ವಲ್ಪ ಕಾಲದವರೆಗೆ ತಡೆದಿಡಬಹುದು; ಆದರೆ ಬೀಜ, ದನ

## ತಗಾಯಿ ನಮೂನೆ

ತಾಲೂಕು ಬಲಸಾರ.

| ಗ್ರಾಮ. | ತ. ನ. ೩ ಇದ ರಲ್ಲಿಯ ಖಾತೆ ನಂಬರು. | ಹಣ ತಕ್ಕೊಳ್ಳು ವವನು. | ಭೂಮಿಯ ಸುಧಾರಣೆಯ ವಿಷಯದ ಆಕ್ಟ. | |
|---|---|---|---|---|
| | | | ಉದ್ದೇಶ. | ರಕಮು. |
| ೧ | ೨ | ೩ | ೪ | |
| ೭ನೇ ಎಪ್ರಿಲ ಸನ್ ೧೯೧೩ನೇ ಇಸವಿ. | | | | ರೂ. |
| ನಹಿಗಾವ .... | ೧೫ | ವೆಗಡು ಧೊಂಡೂ.... | .... | .... |
| ಪಿಂಪ್ರಿ .... | ೪೬ | ಆತ್ಮಾರಾಮ ಬಾಳಾಜಿ. | ಕಳೆ ತೆಗೆದುಹಾಕುವದು. | ೯೦ |
| ನಹಿಗಾವ .... | ೧೬ | ಶಿವಾ ಬಾಳು .... | ಬಾವಿ .... | ೮೦ |
| ಮಾಗೋಡ .... | ೬ | ಬಾಳಕೃಷ್ಣ ಗೋಪಿರಾಮ. | ರಕಮನ್ನು ಹಿಂತಿರಿಗಿ ಕೊಟ್ಟದ್ದು. | ಲೆಕ್ಕ ತಪ್ಪಿ. |
| ೧೨ನೇ ಎಪ್ರಿಲ ಸನ್ ೧೯೧೩ನೇ ಇಸವಿ. | | | | |
| ನಹಿಗಾವ .... | ೧೭ | ಗಣಪತ ಪರಶುರಾಮ. | ಬಾವಿ .... | ೨೫೦ |

೧.

ಸನ್ ೧೯೧೩-೧೯೧೪ನೇ ಇಸವಿಯ ಸಲುವಾಗಿ.—

ಗ್ರಾಂಟು .... ೧,೮೦೦ ಕಲೆಕ್ಟರನ ಎಸ್. ಆರ್., ೮-೪-೧೩.

ಹೆಚ್ಚಿಗೆ ಕೂಡಿಸಿದ್ದು ೫೦ ಕಲೆಕ್ಟರನ ಹುಕುಮು, ಎಸ್. ಆರ್., ತಾರೀಖು ೨೩-೪-೧೩.

೧,೮೫೦

| ಹೊಲ ಮಾಡುವವರ ಸಾಲಗಳ ವಿಷಯದ ಆಕೃಟ. | | ಡೇ-ಬುಕ್ಕಿಗೆ ಒಯ್ಯಲಾದ ದಿನದ ಒಟ್ಟು. | ಹಣ ಹಂಚುವ ಅಮಲದಾರನ ಹೆಸರಿನ ಅದ್ಯಕ್ಷರಗಳು. | ಗೌಡನ ಅಥವಾ ಕುಲಕರ್ಣಿಯ ಅಥವಾ ಇತರ ಗುರ್ತುಹಿಡಿಯುವ ಮನುಷ್ಯನ ಸಹಿ. | ಹಣ ತಕ್ಕೊಳ್ಳುವವನ ಸಹಿ. |
|---|---|---|---|---|---|
| ಉದ್ದೇಶ. | ರಕಮು. | | | | |
| ೫ | | ೬ | ೭ | ೮ | ೯ |
| | ರೂ. | | | | |
| ಎತ್ತುಗಳು. | ೧೦೦ | .... | ಎಲ್.ಎಮ್. | ಮಹಿಪತ ವಾಯಿಕರ. ಸ. ಇ. | ವೆಗಡೂ ಇವನ ಹೆಬ್ಬೊಟ್ಟಿನ ಮುದ್ರೆ. |
| .... | .... | .... | ಎಲ್.ಎಮ್. | ಗ್ರಾಮದಲ್ಲಿ ಬಾಂಡಿನ ತಕ್ಕೊಳ್ಳಲಾಯಿತು. | ಮೇರಿಗೆ |
| .... | .... | .... | ಎಲ್.ಎಮ್. | ರಾಮಚಂದ್ರ ರಘುನಾಥ ಕುಲಕರ್ಣಿ. | ಶಿವಾ ಬಾಳೂ ಇವನ ಹೆಬ್ಬೊಟ್ಟಿನ ಮುದ್ರೆ. |
| ಮಾಡಹೆಚ್ಚಿಗೆ ಮಾಡಿ | ದಾಗ ವಸೂಲ ಪ್ಟು. | ೧ | ಎಲ್.ಎಮ್. | ಸ್ವತಃ ಗೊತ್ತಿದ್ದವ. | ಬಾಳಕೃಷ್ಣ ಗೋಪೀರಾಮ. |
| .... | .... | ೨೭೧<br>೨೭೦ | ವಿ. ಜಿ. | ಸಾಮಾನ್ಯ ಬಾಂಡಿನ ತಕ್ಕೊಳ್ಳಲಾ | ಪರಿಶಿಷ್ಟದಲ್ಲಿ ಯಿತು. |

## ತ. ನ. ೧ ಇದರ ಮೇಲಿನ ಶರಾಗಳು.

೧. ಈ ನಮೂನೆಯನ್ನು ಎಪ್ರಿಲ ೧ನೇ ತಾರೀಖಿನಿಂದ ಮಾರ್ಚ ೩೧ನೇ ತಾರೀಖಿನ ವರೆಗೆ ಇಡಲಾಗುತ್ತದೆ.

೨. ಈ ನಮೂನೆಯ ತಲೆಯ ಮೇಲೆ ಬಜೆಟಿನ ಗ್ರಾಂಟನ್ನು ಬರೆಯಬೇಕು, ಮತ್ತು ಮೊದಲನೇ ಸಾರೆ ತಿಳಿಸಿದ ನಂತರ ಸದರಿ ರಕಮಿನಲ್ಲಿ ಕೂಡಿಸಿದ ಯಾವತ್ತು ಹೆಚ್ಚಿನ ರಕಮುಗಳನ್ನು ಹಾಗೂ ಅದರೊಳಗಿಂದ ಹಿಂತಿರಿಗಿ ಪಡೆದ ಯಾವತ್ತು ರಕಮುಗಳನ್ನು, ಹಾಗೂ ಯಾವದೊಂದು ವಿಶಿಷ್ಟ ಸಾಲದ ಸಲುವಾಗಿ ಅಥವಾ ಪ್ರಾಂತ ಅಮಲದಾರನಿಂದ ಹಂಚಲ್ಪಡುವವರ ಸಲುವಾಗಿ ತಾಲೂಕಾ ಗ್ರ್ಯಾಂಟಿನ ಯಾವದೇ ಭಾಗವನ್ನು ಕಾದಿಡುವ ವಿಷಯದ ಯಾವದೇ ಹುಕುಮನ್ನು ಇಲ್ಲಿ ಬರೆಯಬೇಕು.

೩. ಸಾಲವನ್ನು ಮಂಜೂರ ಮಾಡಿದ ಕೂಡಲೇ ಅದನ್ನು ಹಂಚಬೇಕಾಗಿರುವದರಿಂದ, ಅದನ್ನು ಈ ನಮೂನೆಯಲ್ಲಿ ಖರ್ಚ ಹಾಕಲಾಗುತ್ತದೆ. ತ. ನ. ೩ರಲ್ಲಿ ಸದರಿ ಖಾತೆಗೆ ನಂಬರನ್ನು ಕೊಟ್ಟ ಕೂಡಲೇ, (೨)ನೇ ಆನಸವನ್ನು ತುಂಬಬೇಕು. ಸಾಲಗಳ ಎಷ್ಟೆಷ್ಟು ಭಾಗವು ಪ್ರತಿಯೊಂದು ಆಕ್ಟಿನ ಕೆಳಗೆ ಬರುತ್ತದೆಂಬವನ್ನು ತೋರಿಸುವ ಖಾತೆಯು ಇದೊಂದೇ ಇರುವದರಿಂದ, ಸದರಿ ಆಕ್ಟುಗಳನ್ನು ಬೇರೆ ಬೇರೆ ಮಾಡಲಾಗಿದೆ (ಎಫ್. ೫೪೬—೨).

"ಇತರ ಯಾವದೇ 'ಪಾವತಿ ಬುಕ್ಕಿನಲ್ಲಿ' ಅಥವಾ ವೌಚರದಲ್ಲಿ ಹಣ ತಕ್ಕೊಳ್ಳುವವನ ಸಹಿಯು ಬೇಕಾಗಿರುವದಿಲ್ಲ. ಅಕೌಂಟಂಟ್ ಜನರಲ್ಲನ ಕಡೆಗೆ ಯಾವದೇ 'ವೌಚರಗಳನ್ನು' ಕಳುಹಿಸಲಾಗುವದಿಲ್ಲ, ಆದರೆ ನಿಜವಾದ ಮನುಷ್ಯರಿಗೆ ಹಣವನ್ನು ಕೊಡಲಾಗಿದೆ ಎಂಬ ಹಾಗೂ ಅವರ ಪಾವತಿಗಳನ್ನು ತ. ನ. ೧ ಇದರಲ್ಲಿ ತಕ್ಕೊಂಡಿರುತ್ತದೆಂಬ ಕಲೆಕ್ಟರನ ದಾಖಲೆಯನ್ನು ಮಾತ್ರ ಕಳುಹಿಸಲಾಗುತ್ತದೆ. [೮ನೇ ಅಕ್ಟೋಬರ ಸನ್ ೧೮೧೭ನೇ ಇಸವಿಯ ಅಕೌಂಟಂಟ್ ಜನರಲ್ಲನ ಟಿ. ಎಮ್. ೪೮—೩೭೨]".

೪. ಸಾಲಗಳನ್ನು ಹಂಚುವ ಬಗ್ಗೆ ಮೂರು ವಿಧಾನಗಳಿರುತ್ತವೆ: (೧) ಅವುಗಳನ್ನು ತಾಲೂಕ ಕಚೇರಿಯಲ್ಲಿ ಪರಭಾರೆಯಾಗಿ ಕೊಟ್ಟು ಅವುಗಳನ್ನು ಈ ನಮೂನೆಯಲ್ಲಿ (ಸಂಬಂಧಪಟ್ಟ ಖಾತೆಗೆ ಜಮಾ ರಕಮೆಂದು ವರ್ಗಾಯಿಸಿ ಕೊಟ್ಟ ಸಾಲಗಳನ್ನು ಹಿಡಿದು, ೧೦ನೇ ಕಾನೂನನ್ನು ನೋಡಿರಿ) ಖರ್ಚ ಹಾಕಲಾಗುತ್ತವೆ; (೨) ಹಣ ತಕ್ಕೊಳ್ಳುವವನ ಇಚ್ಛೆಯ ಮೇರೆಗೆ, ಅವುಗಳನ್ನು ಮನಿಆರ್ಡರಿನ ಮೂಲಕ, ಕೊಡಲಿರುವ ರಕಮಿನೊಳಗಿಂದ ಕಮಿಶನವನ್ನು ವಜಾ ಮಾಡಿ, ಕೊಡಬಹುದು (ಎಫ್. ೩೫೫—೧೧, ೯೯೮—೨). ಬೀಜ ಮುಂತಾದವುಗಳ ಸಲುವಾಗಿರುವ ಸಣ್ಣ ಸಾಲದ ರಕಮನ್ನು ಪಡೆಯುವ ಬಗ್ಗೆ ಸಾಲ ತಕ್ಕೊಳ್ಳುವವನು ಅನೇಕ ದಿವಸಗಳ ವರೆಗೆ ತನ್ನ ಕೆಲಸ ಬಿಟ್ಟು ೩೦ ಅಥವಾ ೪೦ ಮೈಲುಗಳಷ್ಟು ದೂರ ನಡೆದು ಹೋಗಬೇಕಾಗುತ್ತದೆಂಬ ಸಂಗತಿಯು, ಸಾಲಗಳ ಲೋಕಪ್ರಿಯತೆಗೆ ಅಡ್ಡಿಯಾಗುತ್ತದೆ ಹಾಗೂ ಆ ಸಾಲಗಳ ಮಹತ್ವವನ್ನು ಕಡಿಮೆ ಮಾಡುತ್ತದೆ; (೩) ಕಲೆಕ್ಟರನಿಂದ ಠರಾಯಿಸಲ್ಪಟ್ಟ ಮರ್ಯಾದೆಗೆ ಒಳಪಟ್ಟ ಯಾವದೊಂದು ಸಾಲದ ರಕಮನ್ನು ಹಂಚಿಕೊಡುವ ಅಧಿಕಾರಿಯು ತಕ್ಕೊಂಡು ಅದನ್ನು ಗ್ರಾಮಗಳಿಗೆ ಒಯ್ಯಬಹುದು (ಆರ್. ೫೫೮—೦೧, ೪೯೧—೦೧, ಎಫ್. ೧೨೬—೦೫). ತಕ್ಕೊಳ್ಳಲಾದ ಬಾಂಡು

ಗಳಿಗನುಸಾರವಾಗಿ ಅಲ್ಲಿ ಅವನ್ನು ಹಂಚಿಕೊಡಬಹುದು, ಮತ್ತು ಮುಖ್ಯ ಠಾಣೆಗೆ ಹಿಂತಿರುಗಿ ಬಂದ ಕೂಡಲೆ, ಹಂಚಿಕೊಡಲಾದ ಪ್ರತಿಯೊಂದು ಬಾಬನ್ನು ಈ ನಮೂನೆಯಲ್ಲಿ ಸದರಿ ಬಾಂಡುಗಳಿಂದ ದಾಖಲು ಮಾಡಬೇಕು. ಹಂಚಿಕೊಡುವ ಅಮಲದಾರನು ಬಾಂಡುಗಳ ಫೈಲನ್ನು, ಹಂಚಿಕೊಟ್ಟ ರಕಮುಗಳನ್ನು ತೋರಿಸುವ ಪಟ್ಟಿಯನ್ನು ಕಾಳಜಿಪೂರ್ವಕವಾಗಿ ಇಡತಕ್ಕದ್ದು. ಯಾವದೊಂದು ಸಂಯುಕ್ತ ಅಥವಾ ಸವಾಯಿಕ ಬಾಬತಿನ ಯಾವತ್ತು ರಕಮು ಪೂರ್ಣವಾಗಿ ಕೊಡಲ್ಪಡದಿದ್ದರೆ, ಅವನು ಕಡಿಮೆ ಬಿದ್ದ ರಕಮನ್ನು ತನ್ನೊಡನೆ ಇಟ್ಟುಕೊಂಡು ಆ ತಿಂಗಳು ಮುಗಿಯುವವರೆಗಾಗಿ ಅವನ್ನು ಕೊಡಬೇಕು. ಹಂಚಿಕೊಡದೆ ಉಳಿದ ಸಾಲದ ಯಾವದೇ ರಕಮನ್ನು ಕೂಡಲೇ ಟ್ರೆಝರಿಯಲ್ಲಿ ತುಂಬತಕ್ಕದ್ದು. ಯಾವದೇ ಪ್ರಸಂಗದಲ್ಲಿ, ಸಾಲದ ಲೆಕ್ಕವನ್ನು ಆಯಾ ತಿಂಗಳ ಕೊನೆಯ ದಿವಸಕ್ಕಿಂತ ಹೆಚ್ಚಿಗೆ ತಡವಾಗಿ ಸರಿಗೊಳಿಸದೆ ಇಡತಕ್ಕದ್ದಲ್ಲ.* ಆದರೆ ಬಹಳೇ ಕೆಲಸವಿದ್ದು ಅನೇಕ ಸಾಲಗಳ ರಕಮುಗಳನ್ನು ಕೊಡುವದಿದ್ದರೆ, ಹಂಚಿಕೊಡುವ ಅಮಲದಾರನು ಮಾರ್ಚ ತಿಂಗಳ ಕೊನೆಯ ದಿವಸವೇ ತನ್ನ ಮುಖ್ಯ ಠಾಣೆಗೆ ಹಿಂತಿರುಗಿ ಬಂದು, ತನ್ನ ಸಾಲದ ಲೆಕ್ಕವನ್ನು ಸರಿಗೊಳಿಸಬೇಕು ಮತ್ತು ಮಾರನೆಯ ದಿವಸ ಮುಂಜಾನೆ ಹೊಸತಾಗಿ ಸಾಲದ ರಕಮನ್ನು ತಕ್ಕೊಂಡು ತನ್ನ ಫಿರತಿಯನ್ನು ಪುನಃ ಪ್ರಾರಂಭಿಸಬೇಕು. ಸಾಲದ ರಕಮನ್ನು ಮೊದಲನೇ ಸಾರೆ ತಕ್ಕೊಂಡಾಗ್ಗೆ, ಅದನ್ನು ತಗಾಯಿ ಸಾಲದ ಲೆಕ್ಕಕ್ಕೆ ಖರ್ಚ ಹಾಕದೆ "ವಿಶಿಷ್ಟ ಕೆಲಸಗಳ ಬಗ್ಗೆ ಮುಂದಾಗಿ ಕೊಟ್ಟ ಕಿರಕೋಳ ರಕಮುಗಳು" ಎಂಬ ಲೆಕ್ಕಕ್ಕೆ ಖರ್ಚ ಹಾಕತಕ್ಕದ್ದು; ಅವುಗಳನ್ನು ಹಂಚಿಕೊಟ್ಟ ಬಳಿಕ, ಕೊಡಲಾದ ಹಾಗೂ ತ. ನ. ೧ರಲ್ಲಿ ದಾಖಲು ಮಾಡಲಾದ ರಕಮುಗಳನ್ನು, ಮುಂದಾಗಿ ಕೊಟ್ಟ ರಕಮುಗಳ ಅದೇ ಸದರಿನಲ್ಲಿ ಇದರ ವಿರುದ್ಧವಾಗಿ ಜಮಾ ಹಿಡಿದು, ಯಾವದೊಂದು ಖಾತೆಗೆ ಜಮಾ ರಕಮೆಂದು ವರ್ಗಾಯಿಸಿ ಕೊಡಲಾಗುತ್ತದೆ. (ಹಂಚದೆ ಉಳಿದ ರಕಮನ್ನು ನಗದಾಗಿ ತಿರುಗಿ ಕೊಡಲಾಗುತ್ತದೆ) ಮತ್ತು ಇದರ ಮೂಲಕ, "ತಕರಾರಿನ ಬುಕ್ಕಿನೊಳಗಿನ ಮುಂಗಡ ರಕಮು" ಇದನ್ನು ತೆಗೆದುಹಾಕಲಾಗುತ್ತದೆ.

೫. ಯಾವ ದಿವಸ ಸಾಲಗಳನ್ನು ಕೊಡಲಾಗುತ್ತದೋ ಅಂಥ ಪ್ರತಿಯೊಂದು ದಿವಸದ ಪ್ರಾರಂಭಕ್ಕೆ ನಮೂನೆಯ ಮೇಲೆ ಹಣ ಕೊಟ್ಟ ತಾರೀಖನ್ನು ಸ್ಪಷ್ಟವಾಗಿ ಬರೆಯಲಾಗುತ್ತದೆ. ಸಾಲಗಳು ಕೊಡಲ್ಪಡದಿದ್ದ ದಿವಸಗಳಲ್ಲಿ ರೆಜಿಸ್ಟರು ತೆರೆದಿಡಲ್ಪಡಲಿಕ್ಕಿಲ್ಲ. ಯಾವದೊಂದು ಸಾಲದ ಲೆಕ್ಕವನ್ನು ಸರಿಗೊಳಿಸಿದಾಗ, ಸದರಿ ಸಾಲದ ರಕಮನ್ನು ನಿಜವಾಗಿ ಯಾವ ತಾರೀಖಿನ ದಿವಸ ಆಯಾ ಗ್ರಾಮದಲ್ಲಿ ಕೊಡಲಾಗಿತ್ತೆಂಬದನ್ನು ಈ ತಾರೀಖು ಈ ನಮೂನೆಯಲ್ಲಿ ಖರ್ಚ ಹಾಕಿದ ತಾರೀಖಿಗಿಂತ ಹಿಂದಿನದಾಗಿದ್ದರೆ, ೧ನೇ ಕಾಲಮದ ಎದುರಿನಲ್ಲಿ ಬರೆಯಬಹುದು.

* ೬೦ ಮೈಲುಗಳ ಅಂತರದೊಳಗೆ ಟ್ರೆಝರಿಯಿಲ್ಲದಿರುವ ಡಾಂಗುಗಳ ಬಾಬತಿನಲ್ಲಿ, ಪ್ರಾಂತ ಅಮಲದಾರನಂತೆ ತಗಾಯಿ ರಕಮನ್ನು ಹಂಚಿಕೊಡುವ ಆ. ಪ್ರೋ. ಏ. ಇವನಿಗೆ ಲೆಕ್ಕವನ್ನು ಸರಿಗೊಳಿಸುವದಕ್ಕೆ ಹೆಚ್ಚಿಗೆ ವೇಳೆಯನ್ನು ಕೊಟ್ಟಿರುತ್ತದೆ. ಅವನು ಶಿಲುಕು ಉಳಿದ ರಕಮನ್ನು ಅಹವಾದಲ್ಲಿಯ ಪೊಲಿಟಿಕಲ್ ಟ್ರೆಝರಿಯಲ್ಲಿ ಇಡೀ ಹಂಗಾಮಿನಲ್ಲಿ ಇಡುತ್ತಾನೆ.

೬. ಸಪ್ಟೆಂಬರ ತಿಂಗಳ ೨೬ನೇ ತಾರೀಖಿನಿಂದ ೩೦ನೇ ತಾರೀಖಿನ ವರೆಗೆ (ಇವೆರಡೂ ದಿವಸಗಳನ್ನು ಹಿಡಿದು) ಯಾವದೇ ರಕಮನ್ನು ಕೊಡತಕ್ಕದ್ದಲ್ಲ.

೭. ದಿವಸವು ಮುಗಿದ ಬಳಿಕ ಖರ್ಚಿನ ಸದರಿನ ಕೆಳಗಿನ ಬಾಬುಗಳ ಬೇರೀಜು ಮಾಡಬೇಕು ಮತ್ತು ಈ ಬೇರೀಜನ್ನು ಡೇ-ಬುಕ್ಕಿಗೆ ವರ್ಗಾಯಿಸಬೇಕು. ತಗಾಯಿ ಗ್ರಾಂಟಿನ ಖಾತೆಯಲ್ಲಿ ಖರ್ಚು ಹಾಕಿದ ರಕಮು, ಹಿಂತಿರಿಗಿ ಕೊಟ್ಟ ರಕಮು ಗಳನ್ನೂ ಅಸಲನ್ನೂ—ಕೆಲವು ಕಂತುಗಳ ರಕಮನ್ನು ಇನ್ನೂ ಕೊಟ್ಟಿರದಿದ್ದರೆ, ಸಾಲದ ಯಾವತ್ತು ರಕಮನ್ನು ಹಿಡಿಯದೆ—ಹಿಡಿದು ತ. ನ. ೧೮ರಲ್ಲಿ ಖರ್ಚು ಹಾಕಲಾದ ಒಟ್ಟು ರಕಮಾಗಿರುತ್ತದೆ.

೮. ಮೇವು, ಶೇತಕೀ ಕೆಲಸದ ಸಾಧನ ಮುಂತಾದವುಗಳ ಸಲುವಾಗಿರುವ ಸಾಲಗಳನ್ನು (ಆರ್. ೭೦೧೮–೦೭, ೬೬೭–೦೯), ಕೆಲವು ಸಾರೆ ಜಿನಸಿನ ರೂಪದಲ್ಲಿ ಕೊಡಲಾಗುತ್ತದೆ. ನಗದಿ ಸಾಲಗಳ ಸಂಬಂಧದಿಂದ ಮಾಡಲಾಗುವ ಚೌಕಸಿ ಗಳನ್ನೇ ಇಂಥ ಪ್ರಸಂಗಗಳಲ್ಲಿಯೂ ಯಾವದೇ ಹೆಚ್ಚುಕಡಿಮೆಯಿಲ್ಲದೆ ಮಾಡಲಾಗು ವದು, ಮತ್ತು ಹಣಕೊಡುವ ವಿಷಯದ ಹುಕುಮನ್ನು ಅದೇ ರೀತಿಯಿಂದ ಮಾಡ ಲಾಗುತ್ತದೆ; ಆದರೆ ಟ್ರೆಝರಿಯಲ್ಲಿ ನಗದು ಹಣ ಕೊಡುವದರ ಬದಲಾಗಿ, ಸದರಿ ರಕಮನ್ನು, ಮೇವಿನ ಬಗ್ಗೆ ಕೊಟ್ಟ ಸಾಲಗಳ ಸದರಿಗೆ ಅಥವಾ ಯಾವ ಸದರಿನ ಕೆಳಗೆ ಮೇವಿನ ಬೆಲೆ ಕೊಟ್ಟದ್ದನ್ನು ಬರೆದಿರುವದೋ ಅಂಥ ಬೇರೊಂದು ಸದರಿಗೆ ವರ್ಗಾಯಿಸಿ ಜಮಾ ಹಿಡಿದು ಹಂಚಿಕೊಡಲಾಗುತ್ತದೆ. ಗ್ರಾಮಗಳಲ್ಲಿ ಈ ಪ್ರಕಾರ ಹಂಚಿಕೊಟ್ಟ ಮೇವು ಮುಂತಾದ್ದನ್ನು ಸದರಿ ಅಮಲದಾರನು ತನ್ನ ಮುಖ್ಯ ಠಾಣೆಗೆ ತಿರಿಗಿ ಬಂದ ಬಳಿಕ ಆಯಾ ಲೆಕ್ಕದಲ್ಲಿ ಖರ್ಚು ಹಾಕಬೇಕು, ಆದರೆ ಈ ಬಗ್ಗೆ ಯಾವದೇ ಸಾಲವು ಬೇಕಾಗಲಿಕ್ಕಿಲ್ಲ. ಯಾಕೆಂದರೆ, ಸದರಿ ಸಾಲದ ರಕಮನ್ನು ಈ ಮುಂಚೆಯೇ ಮೇವನ್ನು ಕೊಳ್ಳುವದರ ಸಲುವಾಗಿ ಕೊಟ್ಟಿರಬಹುದಾಗಿದೆ. ಮೇವು ಫಾರೆಸ್ಟ ಡಿಪಾರ್ಟಮೆಂಟಿನವರಿಂದ ಪೂರೈಸಲ್ಪಟ್ಟಿದ್ದರೆ, ಅಕೌಂಟಂಟ್ ಜನರ ಲ್ಲರವರ ಸೂಚನೆಗಳ ಮೇರೆಗೆ ಜಮಾ ಹಿಡಿದ ಬಾಬುಗಳನ್ನು ಸರಿಗೊಳಿಸಬೇಕಾಗು ವದು. ಸಾಲಗಳ ರಕಮನ್ನು ಗ್ರಾಮಗಳಲ್ಲಿ ಕೊಟ್ಟಿದ್ದರೆ ಅಥವಾ ಅವುಗಳನ್ನು ಜಿನ ಸಿನ ರೂಪದಲ್ಲಿ ಕೊಟ್ಟಿದ್ದರೆ, (೯)ನೇ ಆಸನದಲ್ಲಿ ಸಾಲ ಪಡೆದವನ ಸಹಿಯನ್ನು ತಕ್ಕೊ ಳ್ಳಲಿಕ್ಕೆ ಬರುವದಿಲ್ಲ: ಆದರೆ ಅದನ್ನು, ಬಾಂಡಿನ (ಬಂದೇ ಇರಾಗಿರಲಿ, ಸಂಯುಕ್ತ ವಾಗಿರಲಿ, ಸಮಾಯಿಕವಾಗಿರಲಿ) ಕೆಳಗೆ ಶರಾ ಬರೆದು ತಕ್ಕೊಳ್ಳತಕ್ಕದ್ದು, ಮತ್ತು (೯)ನೇ ಆಸನದಲ್ಲಿಯು ನೋಂದು "ಬಾಂಡಿನ ಕೆಳಗಡೆಯಲ್ಲಿ ನೋಡಿರಿ" ಎಂದಾಗ ತಕ್ಕದ್ದು.

"ಸಂಯುಕ್ತ ಬಾಂಡುಗಳ ಮೇರೆಗೆ ಬಹಳ ದೊಡ್ಡ ಪ್ರಮಾಣದಲ್ಲಿ (ಉದಾಹರಣಾರ್ಥವಾಗಿ) ಹುಲ್ಲನ್ನು ಕೊಟ್ಟರೆ, ತ. ನ. ೧೮ರಲ್ಲಿ, ಪ್ರತಿಯೊಬ್ಬ ಮನು ಷ್ಯನ ಹೆಸರು ಹಾಗೂ ರಕಮನ್ನು ಬರೆಯುವದರ ಬದಲಾಗಿ, " ನಂಬರಿನ ಸಂಯುಕ್ತ ಬಾಂಡಿನ" ಒಟ್ಟು ಎಂದು ಬರೆಯಲಿಕ್ಕೆ ಯಾವದೇ ಅಡ್ಡಿಯಿಲ್ಲ; ಪ್ರತಿಯೊಂದು ಗ್ರಾಮದ ಸಲುವಾಗಿ, ಕನಿಷ್ಠ ಪಕ್ಷಕ್ಕೆ ಒಂದಾದರೂ ಪ್ರತ್ಯೇಕ ಸಂಯುಕ್ತ ಬಾಂಡಿರಬೇಕು.

೯. ಹು. ಡೆ. ಕ. ನು ಜಿಲ್ಲಾ ಗ್ರಾಂಟಿನ ಮೇಲೆ ಲಕ್ಷ್ಯವಿಡಬೇಕು. ಹಿಂತಿರಿಗಿ ಕೊಟ್ಟ ರಕಮುಗಳನ್ನು ಹಿಡಿದು ತಿಂಗಳ ಒಟ್ಟು ಖರ್ಚನ್ನು, ತ. ನ. ೮ರ ಎರಡನೇ

ನಕಲಿನಲ್ಲಿ ಬರೆದು, ಸದರಿ ತಾರೀಖಿನ ವರೆಗೆ ಕೊಡಲಾದ ಒಟ್ಟು ಗ್ರ್ಯಾಂಟನ್ನು ಮತ್ತು ಖರ್ಚನ್ನು ಹಾಗೂ ಶಿಲುಕನ್ನು ಬೇರೆಬೇರೆಯಾಗಿ ತೋರಿಸಿ, ಪ್ರತಿ ತಿಂಗಳಿಗೆ ಪ್ರಾಂತ ಅಮುಲದಾರನ ಕಡೆಗೂ ಕಲೆಕ್ಟರನ ಕಡೆಗೂ ಕಳುಹಿಸಬೇಕು. ಈ ನಮೂನೆಗಳನ್ನು ಮಾರ್ಚ ತಿಂಗಳ ಕೊನೆಯ ವರೆಗೆ ಪ್ರಾಂತ ಹಾಗೂ ಹುಜೂರ ಕಚೇರಿಗಳಲ್ಲಿ ಫೈಲ ಮಾಡಿಡುವದರಿಂದ, ಅಂದಾಜುಗಳು ಎಂಬ ಹೆಸರಿನ ಪ್ರಕರಣದ ಇನೇ ಪ್ಯಾರಾದಲ್ಲಿ ಉಲ್ಲೇಖಿಸಿದ ಸುಧಾರಿಸಿದ ಅಂದಾಜುಗಳು ಕಾರಣದ ಸಲುವಾಗಿ ವಿಶಿಷ್ಟ ರಿಪೋರ್ಟುಗಳನ್ನು ಮಾಡುವ ಯಾವದೇ ಅವಶ್ಯಕತೆಯು ಉಳಿಯುವದಿಲ್ಲ.

೧೦. ಹಣ ತಕ್ಕೊಳ್ಳುವವರ ಹಾಗೂ ಬಾಂಡುಗಳನ್ನು ಬರೆದುಕೊಡುವವರ ಗುರ್ತನ್ನು ಹಿಡಿಯುವದರ ಅವಶ್ಯಕತೆಯ ಬಗ್ಗೆ ಇರುವ ಶರಾಗಳ ಸಲುವಾಗಿ ಬಾಂಡಿನ ನಮೂನೆ ೧೮ ಮೇಲಿನ ಟಿಪ್ಪಣಿಯನ್ನು ನೋಡಿರಿ.

೧೧. ಯಾವದೇ ನಿರ್ದಿಷ್ಟ ಕಾರಣದಿಂದ, ತಗಾಯಿ ಲೆಕ್ಕದಲ್ಲಿ ಈಗಾಗಲೇ ಅಸಲೆಂದು ಜಮಾ ಹಿಡಿದ ರಕಮನ್ನು ಹಿಂತಿರಿಗಿ ಕೊಡುವದು ಅವಶ್ಯವಾದಾಗ, ಈ ಹಿಂತಿರಿಗಿ ಕೊಟ್ಟ ರಕಮನ್ನು ತ. ನ. ೧೮ರಲ್ಲಿ ಖರ್ಚು ಹಾಕತಕ್ಕದ್ದೆಂಬದು ಸ್ಪಷ್ಟವದೆ. ಆದರೆ ಬರೀ ಬಡ್ಡಿಯ ರಕಮನ್ನು ಹಿಂತಿರಿಗಿ ಕೊಟ್ಟಿದ್ದರೆ, ಅದನ್ನು ಹೀಗೆ ಮಾಡಬಾರದು. ಅದನ್ನು "ಹಿಂತಿರಿಗಿ ಕೊಟ್ಟ ರಕಮುಗಳ" ಲೆಕ್ಕದಲ್ಲಿ ಖರ್ಚು ಹಾಕತಕ್ಕದ್ದು. ಆದ್ದರಿಂದ ಹಿಂತಿರಿಗಿ ಕೊಟ್ಟ ಅಸಲಿನ ರಕಮುಗಳು ಗ್ರ್ಯಾಂಟಿನ ಲೆಕ್ಕದಲ್ಲಿ ಖರ್ಚು ಹಾಕಿದ ರಕಮುಗಳಾಗುವವು, ಮತ್ತು ಈ ರಕಮುಗಳು ತೀರ ಕ್ಷುಲ್ಲಕ ರಕಮುಗಿಂತ ಎಂದಿಗೂ ಹೆಚ್ಚಾಗದಿರುವ ಸಂಭವವಿದ್ದಾಗ್ಯೂ, ಮಾಮಲೇದಾರನು ಗ್ರ್ಯಾಂಟಿನ ಖರ್ಚಿನ ಪತ್ರಕಗಳನ್ನು ಕಳುಹಿಸುವಾಗ ಇದನ್ನು ಮರೆಯತಕ್ಕದ್ದಲ್ಲ.

೧೨. ಕಲೆಕ್ಟರನಿಗೆ ಅವಶ್ಯವಾಗುವ ಯಾವದೇ ರಕಮನ್ನು ಹಿಂತಿರಿಗಿ ಕೊಡಲಿಕ್ಕೆ ಅಧಿಕಾರವಿದೆ (ಎಫ್. ೧೭೪೨–೦೨) ಮತ್ತು ಅವನು ಪ್ರಾಂತ ಅಮುಲದಾರನಿಗೆ ಪೂರ್ಣ ಅಧಿಕಾರವನ್ನು ಒಪ್ಪಿಸಿಕೊಡಬಹುದು. [ಆರ್. ೫೯೪೭(೧೫)–೦೨].

# ತಗಾಯಿ ನಮೂನೆ ೨.

ಬಲಸಾರ ತಾಲೂಕಿನ ನಹಿಗಾಂವ ಗ್ರಾಮಕ್ಕೆ ಕೊಡಲಾದ ಸಾಲಗಳ ಪ್ರತಿ ತಿಂಗಳ ಪತ್ರಕವು, ಎಪ್ರಿಲ ಸನ್ ೧೯೧೩ನೇ ಇಸವಿ.

| ಹಣಕೊಟ್ಟ ತಾರೀಖು. | ಕ್ರ.ನ. ೩ರಲ್ಲಿಯ ಖಾತೆ ನಂಬರು. | ಸಾಲ ತೆಗೆದುಕೊಂಡವನು. | ಉದ್ದೇಶ. | ರಕಮು. | ಜಾತ ಜಾಮೀನದಾರರು ಅಥವಾ ಭೂಮಿಯ ತಾರಣದ ವರ್ಣನೆ. | ಶರಾಗಳು. |
|---|---|---|---|---|---|---|
| ೧ | ೨ | ೩ | ೪ | | ೫ | ೬ |
| | | | | ರೂ. | | |
| ೬-೪-೧೩ | ೧೫ | ದಗಡು ಘೋಂಡು. | ಎತ್ತುಗಳು. | ೧೦೦ | ಖುದ್ದ ಅವನ ಹಾಗೂ ಮುಕುಂದ ರಣಘೋಡನ ಮತ್ತು ಕುವರಜೀ ಭಾಯಿದಾಸನ ಸಂಯುಕ್ತ ಜಾತ ಜಾಮೀನು. | |
| | ೧೬ | ಶಿವಾ ಬಾಪೂ | ಬಾವಿ | ೪೦ | ಬಾಂಡಿನ ನಕಲನ್ನು ಕಳುಹಿಸಲಾಗಿದೆ. | ಬಾಕಿ ಉಳಿದ ೧೨೦, ರೂಪಾಯಿಗಳನ್ನು, ಕೆಲಸವು ಸಾಕಷ್ಟಾದ ನಂತರ ಎರಡು ಹೆಚ್ಚಿನ ಕಂತುಗಳಿಂದ ಕೊಡತಕ್ಕದ್ದು. |

| ಹಣಕೊಟ್ಟ ತಾರೀಖು. | ತ.ನ. ೩ರಲ್ಲಿಯ ಖಾತೆ ನಂಬರು. | ಸಾಲ ತೆಗೆದುಕೊಂಡವನು. | ಉದ್ದೇಶ. | ರಕಮು. | ಜಾತ ಜಾಮೀನದಾರರು ಅಥವಾ ಭೂಮಿಯು ತಾರಣದ ವರ್ಣನೆ. | ಶೆರಾಗಳು. |
|---|---|---|---|---|---|---|
| ೧ | ೨ | ೩ | ೪ | | ೫ | ೬ |
| ೧೨-೪-೧೩. | ೧೭ | ಗಣಪತಿ ಪರಶುರಾಮ. | ಸದರ | ೨೨೦ | ಸ. ನಂಬರು ೧೧೭ ಕದೀಮ ಜಾತ ಇನಾಮು, ಕದೀಮದ ಇನಾಮದಾರನ ಸಮ್ಮತಿಯಿಂದ, ಬಾಂಡಿನ ನಕಲನ್ನು ಕಳುಹಿಸಲಾಗಿದೆ. | ಕೆ. ಜಿ. ಮಾಮಲೇದಾರ. |

## ತ. ನ. ೨ ಇದರ ಮೇಲಿನ ಶೆರಾಗಳು.

೧. ಯಾವದೊಂದು ಸಾಲವನ್ನು ಕೊಟ್ಟ ಕೂಡಲೇ ಅದನ್ನು ಕುಲಕರ್ಣಿಗೆ ಹಾಗೂ ಗೌಡನಿಗೆ (ಅವರು ಬಾಂಡಿಗೆ ಸಾಕ್ಷಿ ಹಾಕಿರಬಹುದಾಗಿದ್ದರೂ) ತಿಳಿಸುವದು ಇಷ್ಟವಿರುತ್ತದೆ, ಮತ್ತು ಅವರು, ಭೂಮಿಯು ಯಾವದೇ ಪ್ರಕಾರದಿಂದ ಒತ್ತೆ ಹಾಕಲ್ಪಟ್ಟದ್ದನ್ನು (ಆರ್. ೪೭-೫೧) ಅಥವಾ ಕಾಯದೆಯಿಂದ ಸದರಿ ಭೂಮಿಯ ಮೇಲಾದ ಬೋಜಾವನ್ನು ಹಕ್ಕುಗಳ ಪತ್ರಕದಲ್ಲಿ ಬರೆದಿಡಬೇಕು. [ಸನ್ ೧೮೮೩ನೇ ಇಸವಿಯ ೧೯ನೇ ಆಕ್ಟಿನ ೭(೧)ಇ ಕಲಮು]. ಭೂಮಿಯ ಸುಧಾರಣೆಯ ಸಲುವಾಗಿರುವ ಸಾಲಗಳ ಸಂಬಂಧದಿಂದ, ಬಾಂಡಿನ ಒಂದು ಪ್ರತಿಯನ್ನು (ಈ ಪ್ರತಿಯ ಮೇಲೆ ಸಾಲ ತೆಗೆದುಕೊಳ್ಳುವವನು ಸಹಿ ಮಾಡುವ ಅವಶ್ಯವಿಲ್ಲ) ಗ್ರಾಮದ ಅಮಲದಾರರಿಗೆ ಕೊಡಲಾಗುತ್ತದೆ, ಮತ್ತು ಇದನ್ನು ಈ ನಮೂನೆಯೊಂದಿಗೆ ಫೈಲು ಮಾಡಿಡಬೇಕು, ಮತ್ತು ಅದನ್ನು ಕಳುಹಿಸಿದಾಗ (೫)ನೇದ್ದನ್ನು ತುಂಬತಕ್ಕದ್ದಲ್ಲ, ಯಾಕೆಂದರೆ ಇದಕ್ಕೆ ಬೇಕಾಗುವ ಮಾಹಿತಿಯು ಬಾಂಡಿನಲ್ಲಿರುತ್ತದೆ.

೨. ಈ ನಮೂನೆಯನ್ನು, ಪ್ರತಿ ತಿಂಗಳ ಕೊನೆಗೆ, ಸಾಲಗಳನ್ನು ಯಾವ ಗ್ರಾಮಗಳಿಗೆ ಕೊಟ್ಟಿರುವದೋ ಅಂಥ ಪ್ರತಿಯೊಂದು ಗ್ರಾಮಕ್ಕೆ ಕಳುಹಿಸತಕ್ಕದ್ದು. ವರ್ಷಾನುವರ್ಷವಾಗಿ ಚಾಲೂ ಇಟ್ಟ ಫೈಲಿನಲ್ಲಿ ಕುಲಕರ್ಣಿಯು ಈ ನಮೂನೆಗಳನ್ನು ಫೈಲು ಮಾಡತಕ್ಕದ್ದು. ಹೀಗೆ ತಿಳಿಸಲಾದ ಬಳಿಕ ಅವನು, ಒತ್ತೆ ಹಾಕ

ಲಾದ ಭೂಮಿಗಳ ಸಂಬಂಧದಿಂದ ಅವಶ್ಯವಿರುವ ಯಾವತ್ತು ನೋಂದುಗಳನ್ನು ಗ್ರಾ. ನ. ೭ನೇದ್ದರ (ಭೂಮಿಗಳ ಅನುಕ್ರಮಣಿಕೆ) ಲನೇ ಆಸನದಲ್ಲಿ ದಾಖಲ ಮಾಡ ತಕ್ಕದ್ದು. ೫ನೇ ಅಥವಾ ೬ನೇ ವರ್ಗದ ವತನ ಭೂಮಿಯನ್ನು ಒತ್ತಿ ಹಾಕಲಿಕ್ಕೆ ಸರಕಾರದವರು ಮಂಜೂರಿ ಕೊಡಲಾಗಿ, ಈ ಬದಲಾವಣೆಯನ್ನು ಮೂರನೇ ಪತ್ರಕದಲ್ಲಿ ದಾಖಲ ಮಾಡಲಾಗುವದು [ಆರ್. ಆರ್. ಮ್ಯಾನುಅಲ್ಲದ (ಇಂಗ್ರೇಜಿ) ೩೪ನೇ ಪ್ಯಾರಾವನ್ನು ನೋಡಿರಿ].

೩. ಕೊಟ್ಟ ಸಾಲಗಳ ಸಂಖ್ಯೆಯನ್ನು ಹಾಗೂ ರಕಮುಗಳನ್ನು ಮತ್ತು ಯಾವವೇ ಕೆಲಸಗಳ ತಪಾಸಣೆಯನ್ನು ಮಾಡಬೇಕಾಗಿದೆಯೋ ಇಲ್ಲವೋ ಎಂಬದನ್ನು ತಿಳಿಯಲಿಚ್ಛಿಸುವ ಯಾವನೇ ಭೆಟ್ಟಿಕೊಡುವ ಅಮಲದಾರನಿಗೆ ಈ ಫೈಲು ಮಾರ್ಗದರ್ಶಕವಾಗುವದು. ಮಾಮಲೇದಾರನ ಕಡೆಯಿಂದ "ಪ್ರಕರಣವನ್ನು" ತರಿಸಿಕೊಳ್ಳದೆ ಅವನು ತಪಾಸಣೆ ಮಾಡಲಾಗದು.

೪. ಗ್ರಾಮದ ಅಮಲದಾರರು ಕೆಲಸಗಳ ತಪಾಸಣೆಯನ್ನು ಮಾಡದಿರಬಹುದು; ಆದಾಗ್ಯೂ ಅವರು ತಮಗೆ ಗೊತ್ತಿದ್ದ ಹಣದ ದುರುಪಯೋಗದ ಯಾವದೇ ಸಂಗತಿಯನ್ನು ಕುರಿತು ರಿಪೋರ್ಟನ್ನು ಮಾಡಬೇಕು (ಎಫ್. ೪೨೦೬—೦೬).

ತಗಾಯಿ

ಗ್ರಾಮ—ನಹಿಗಾಂವ; ಹೆಸರು—

ಸಾಮಾನ್ಯ.

| ತಾರೀಖು. | | ಲೇವಾದೇವಿ. | ಸಾ.ರ.ಕ ಪತ್ರಾ ಪಿ.ಕಾ. ಕ ಹೆಂಡಿ ಪತ್ರಗಳು. | ಖರ್ಚು. | |
|---|---|---|---|---|---|
| ೧ | | ೨ | ೩ | ೪ | |
| | | | | ಅಸಲು. | ಬಡ್ಡಿ. |
| ೨೬–೩–೦೮ | .... | ಮುಂಗಡ ಕೊಟ್ಟದ್ದು .... | .... | ೩೦೦ | .... |
| ೩೦–೯–೦೮ | .... | (ಟಿ).... .... .... | .... | .... | .... |
| ೩೧–೧೨–೦೮ | .... | | | | |
| ೧೬–೩–೦೯ | .... | ನಗದು .... .... | .... | .... | .... |
| ೩೦–೬–೦೯ | .... | | | | |
| ೩೦–೯–೦೯ | ... | ಬಡ್ಡಿ .... .... (೩ ತ್ರೈಮಾಸಿಕಗಳ ಬಗ್ಗೆ ಮಾತ್ರ) | .... | .... | ೧೧.೧೨ |
| ೩೧–೧೨–೦೯ | .... | | | | |
| ೩೧–೩–೧೦ | .... | | | | |
| ೩೦–೬–೧೦ | .... | | | | |
| ೩೦–೯–೧೦ | .... | ಬಡ್ಡಿ .... .... | .... | .... | ೧೫.೧೦ |
| ೩೧–೧೨–೧೦ | .... | | | | |
| ೩೧–೩–೧೧ | .... | | | | |

(ಟಿ) ನಾವು ಇಲ್ಲಿ ೩೦ನೇ ಸಪ್ಟೆಂಬರ ಎಂದು ಬರೆದಿರುತ್ತೇವೆ. ಆದರೆ ನಿಜದಲ್ಲಿ ಮಾಡಿದ್ದು ಇರುತ್ತದೆ.

(ಯು) ಬಡ್ಡಿಯನ್ನು ಮುಂದಕ್ಕೆ ಹಾಕೋಣವು ಈಗ ಬಳಕೆಯಲ್ಲಿ

(ವಿ) ಹೋದ ವರ್ಷದ ತಹಕೂಬ ಇಟ್ಟ ಕಂತನ್ನು ಈಗ ಎಣಿಸಿರುವದಿಲ್ಲ.

## ನಮೂನೆ ೩.

ಶಿವಾ ತುಕಾರಾಮ ಭೋರ್ಜೆ; ಗ್ರಾಮದ ಅನುಕ್ರಮ ನಂ. ೧

| ಜಮಾ. | | ತ್ರೈಮಾಸಿಕ ತಿಲುಕು, ೨೫ನೇ ಜೂನ, ಸಪ್ಟಂಬರ, ಡಿಸೆಂಬರ ಮತ್ತು ೩೧ನೇ ಮಾರ್ಚ. | | ತ್ರೈಮಾಸಿಕ ಬಡ್ಡಿ. | ತಿಲುಕಿನ ವಿವರ. ಷಾಣ್ಮಾಸಿಕ— (ಅ) ತಪಕೂಬ ಇಟ್ಟ. (ಬ) ಅನಧಿಕೃತ. (ಕ) ಇನ್ನೂ ಸಲ್ಲತಕ್ಕದ್ದಲ್ಲದ. | | |
|---|---|---|---|---|---|---|---|
| ೫ | | ೬ | | ೭ | ೮ | | |
| ಅಸಲು. | ಬಡ್ಡಿ. | ಅಸಲು. | ಬಡ್ಡಿ. | ಬಡ್ಡಿಯು ೧-೧-೦೯ ದಿಂದ (ಯು) | | ಅಸಲು | ಬಡ್ಡಿ. |
| .... | .... | ೩೭೦ | .... | | ಚಾಲು (ಕ) | | |
| .... | .... | ೬೦೦<br>೬೦೦ | ....<br>.... | ....<br>.... | (ಕ) | | |
| ೫೦ | .... | ೬೦೦<br>. ೫೦ | ....<br>.... | ....<br>.... | (ಕ) | | |
| .... | .... | ೭೫೦<br>೭೫೦ | ....<br>೧೧.೧೨ | ....<br>೧೧.೧೨ | (ಕ) | | |
| | | ೨೫೦<br>.... | ೧೧.೧೨<br>.... | ....<br>.... | (ಅ)<br>(ಕ) | ೩೯<br>೨೧೧ | ೧೧.೧೨ |
| .... | .... | ೨೫೦<br>೭೫೦ | ೧೧.೧೨<br>೨೭.೬ | ....<br>.... | (ಅ)<br>(ಕ) | ೩೯<br>೨೧೧ | ೧೧.೧೨<br>೧೫.೧೦ |
| | | ೭೮೦<br>೭೮೦ | ೨೭.೬<br>೨೭.೬ | ....<br>.... | (ಕ) | (ವಿ) | |

ವಾಗಿ ಈ ರಕಮು, ಸಪ್ಟಂಬರದ ಲೆಕ್ಕಗಳನ್ನು ಬಂದ ಮಾಡಿದ ತಾರೀಖಿನ ಪೂರ್ವ

ಇರುವದಿಲ್ಲ;

ತಗಾಯಿ

ಸಾಮಾನ್ಯ

| ತಾರೀಖು. | ಲೇವಾದೇವಿ. | ಹು. ಪ. ಕ ವಿಧಾಯಿ ತಾ. ಕ ಹುಕುಂ ವಿ ನಂಬ್ರ ತಾ. | ಖರ್ಚು. | |
|---|---|---|---|---|
| ೧ | ೨ | ೩ | ೪ | |
| | | | ಅಸಲು | ಬಡ್ಡಿ. |
| ೭–೪–೧೧ .... | ನಗದು .... .... | .... | .... | .... |
| ೩೦–೯–೧೧ .... | ಬಡ್ಡಿ .... .... | .... | .... | ೧೪.೧ |
| ೩೧–೧೨–೧೧ .... | | | | |
| ೩೧–೩–೧೨ .... | | | | |
| ೧–೬–೧೨ .... | ನಗದು .... .... | .... | .... | .... |
| ೩೦–೯–೧೨ .... | ಬಡ್ಡಿ .... .... | .... | .... | ೧೪.೩ |
| ೩೧–೧೨–೧೨ .... | | | | |
| ೩೧–೩–೧೩ .... | | | | |
| ೪–೪–೧೩ .... | ನಗದು .... .... | .... | .... | .... |
| ೩೦–೯–೧೩ .... | ಬಡ್ಡಿ .... .... | .... | .... | ೧೩.೧ |
| ೩೧–೧೨–೧೩ .... | | | | |
| ೨೦–೧–೧೪ .... | ನಗದು .... .... | .... | .... | .... |
| ೩೦–೬–೧೪ .... | | | | |
| ೩೦–೯–೧೪ .... | ಬಡ್ಡಿ .... .... | .... | .... | ೧೨.೧. |
| ೩೧–೧೨–೧೪ .... | | | | |
| ೭–೧–೧೫ .... | ನಗದು .... .... | .... | .... | .... |
| ೨೦–೨–೧೫ .... | ನಗದು .... .... | .... | .... | .... |

(ಡಬ್ಲ್ಯು) ರೂ. ೩೭–೧೪–೦ಯ ವರೆಗೆ ಪ್ರಾಂತ ಅಮಲದಾರನು ; ಯೋಚಿಸಿ

ತಗಾಯಿ

ಸಾಮಾನ್ಯ

| ತಾರೀಖು. | ಶೇವಾದೇವಿ. | ಸಾ.ರ.ಸ ವಿಧಾನ ವಿ ಕಾ. ಸ ಹೊರತು ವಿದ್ಯುಕ್ತರಗಳು. | ಖರ್ಚು. | |
|---|---|---|---|---|
| ೧ | ೨ | ೩ | ೪ | |
| | | | ಅಸಲು | ಬಡ್ಡಿ |
| ೩೦-೬-೧೫ .... | | | | |
| ೩೦-೯-೧೫ .... | ಬಡ್ಡಿ .... .... | .... | .... | ೧೧.೭ |
| ೩೧-೧೨-೧೫ .... | | | | |
| ೫-೨-೧೬ .... | ನಗದು .... .... | .... | .... | .... |
| ೩೦-೯-೧೬ .... | ಬಡ್ಡಿ .... .... | .... | .... | ೧೦.೫ |
| ೩೧-೧೨-೧೬ .... | | | | |
| ೧೨-೧-೧೭ .... | ನಗದು .... .... | .... | .... | .... |
| ೩೦-೬-೧೭ .... | | | | |
| ೩೦-೯-೧೭ .... | ಬಡ್ಡಿ .... .... | .... | .... | ೯.೨ |
| ೩೧-೧೨-೧೭ .... | | | | |
| ೩-೫-೧೮ .... | ಒಂದು-ನಾಲ್ಕಾಂಶ ದಂಡ, ಬಾಬು (೫) ನೋಡಿರಿ. | .... | .... | ೭.೮ |
| ೧೦-೫-೧೮ .... | ನಗದು .... .... | .... | .... | .... |
| ೩೦-೯-೧೮ .... | ಬಡ್ಡಿ .... .... | .... | .... | ೮.೩ |

(ಎಕ್ಸ) ಹೆಚ್ಚಿಗೆ ವಸೂಲ ಮಾಡಿದ್ದನ್ನು ಜಮಾ ಮಾಡಿದೆ.

## ನಮೂನೆ ೩—(ಮುಂದೆಸಾಗಿದ್ದು.)
ಲೆಖ್ಖ—(ಮುಂದೆಸಾಗಿದ್ದು.)

| ಜಮಾ.<br>೫ | | ತ್ರೈಮಾಸಿಕ ಶಿಲುಕು. ೩೦ನೇ ಜೂನ, ಸಪ್ಟಂಬರ, ಡಿಸೆಂಬರ ಮತ್ತು ೩೧ನೇ ಮಾರ್ಚ.<br>೬ | | ತ್ರೈಮಾಸಿಕ ಬಡ್ಡಿ.<br>೭ | ಶಿಲುಕಿನ ವಿವರ. ಷಾಣ್ಮಾಸಿಕ—<br>(ಅ) ತಹಕೂಬ ಇಟ್ಟ.<br>(ಬ) ಅನಧಿಕೃತ.<br>(ಕ) ಇನ್ನೂ ಸಲ್ಲತಕ್ಕದ್ದಲ್ಲದ.<br>೮ | | |
|---|---|---|---|---|---|---|---|
| ಅಸಲು | ಬಡ್ಡಿ | ಅಸಲು | ಬಡ್ಡಿ. | | | ಅಸಲು | ಬಡ್ಡಿ |
| ....<br>.... | ....<br>.... | ೧೭೬<br>೧೭೬ | ೧೧.೭ | ೧೧.೭ | (ಕ) | | |
| ೧೪ ೭<br>(ಎಕ್ಸ) | ೧೧.೭ | ೧೭೬<br>೧೬೧.೯ | ೧೧.೭<br>.... | .... | (ಕ)<br>ಮಾಗಣೆ<br>ಹೆಚ್ಚಿಗೆ<br>ಪ್ಪು. | ೦.೨<br>೧೦ ತ<br>ಕೊಟ್ಟ | |
| .... | .... | ೧೬೧.೯<br>೧೬೧.೯ | ೧೦.೫ | ೧೦.೫<br>(ವಾಯಿದ್) | (ಕ) | | |
| ೨೦.೯ | ೧೦.೫ | ೧೬೧.೯<br>೧೪೧ | ೧೦.೫<br>ಇಲ್ಲ | .... | (ಕ) | | |
| .... | .... | ೧೪೧<br>.... | ೯.೩ | ೮.೩ | (ಕ) | | |
| | | ೧೪೧<br>೧೪೧ | ೯.೨<br>೯.೨ | ....<br>.... | (ಬ)<br>(ಕ) | ೨೧<br>೧೨೦ | ೯.೨ |
| ....<br>೨೧<br>.... | ....<br>೧೬.೧೦<br>.... | ....<br>೧೨೦<br>೧೨೦ | ....<br>....<br>೮.೩ | ....<br>....<br>೮.೩ | (ಕ) | | |

(ವಾಯಿದ್) ೯ ಆಣೆಗಳ ಮೇಲೆ ಬಡ್ಡಿ ಆಕರಣೆ ಮಾಡಲಿಲ್ಲ.

## ತಗಾಯಿ

### ಸಾಮಾನ್ಯ

| ತಾರೀಖು. | | ತಪಶೀಲು. | | | ನೋ.ರ.ನ ವಿಧಾನ ವಿ ಕಾ ನಮೂದು ವಿವರಗಳು. | ಖರ್ಚು. | |
|---|---|---|---|---|---|---|---|
| ೧ | | ೨ | | | ೩ | ೪ | |
| | | | | | | ಅಸಲು | ಬಡ್ಡಿ |
| ೩೧–೧೨–೧೮ | ... | | | | | | |
| ೧೩–೧–೧೯ | .... | ನಗದು | .... | .... | .... | .... | .... |
| ೩೦–೬–೧೯ | .... | | | | | | |
| ೩೦–೯–೧೯ | .... | ಬಡ್ಡಿ | .... | .... | .... | .... | ೬.೮ |
| ೩೧–೧೨–೧೯ | .... | | | | | | |
| ೧೨–೧–೨೦ | .... | ನಗದು | .... | .... | .... | .... | .... |
| ೩೦–೬–೨೦ | .... | | | | | | |
| ೩೦–೯–೨೦ | .... | ಬಡ್ಡಿ | .... | .... | .... | .... | ೫.೦ |
| ೩೧–೧೨–೨೦ | .... | | | | | | |
| ೧೪–೧–೨೧ | .... | ನಗದು | .... | .... | .... | .... | .... |
| ೩೦–೬–೨೧ | .... | | | | | | |
| ೩೦–೯–೨೧ | .... | ಬಡ್ಡಿ | .... | .... | .... | .... | ೩.೮ |
| ೩೧–೧೨–೨೧ | .... | | | | | | |
| ೧೩–೧–೨೨ | .... | ನಗದು | .... | .... | .... | .... | .... |
| ೩೦–೬–೨೨ | .... | | | | | | |
| ೩೦–೯–೨೨ | ... | ಬಡ್ಡಿ | .... | .... | .... | .... | ೧.೧೩ |
| ೩೧–೧೨–೨೨ | .... | ಡಿಸೆಂಬರ ಅಖೈರ ವರೆಗೆ ಹೆಚ್ಚಿನ ಬಡ್ಡಿ. | | | .... | ....<br>(೩) | ೧.೧೩<br>+೬ |
| ೯–೧–೨೩ | .... | ನಗದು | .... | .... | .... | .... | .... |

(ಎಸ್) ನೋಟೀಸಿನ ಫೀಯನ್ನು ಭೂಮಿಯ ಮುಕಸೂಲಿಗೆ ಮತ್ತು ದಂಡ

(ಝಡ್) ಸಾಲದ ಕೊನೆಯ ವರೆಗೆ ಹೆಚ್ಚಿನ ಬಡ್ಡಿಯ ಆಕಾರಣಿ ಮಾಡಿದೆ.

ನಮೂನೆ ೩—(ಮುಂದೆಸಾಗಿದ್ದು.)

ಲೆಕ್ಕ—(ಸಂಪೂರ್ಣ.)

| ಜಮಾ. | | ತ್ರೈಮಾಸಿಕ ಶಿಲ್ಕು. ೩೦ನೇ ಜೂನ, ಸಪ್ಟಂಬರ, ಡಿಸೆಂಬರ ಮತ್ತು ೩೧ನೇ ಮಾರ್ಚ. | | ತ್ರೈಮಾಸಿಕ ಬಡ್ಡಿ. | ಶಿಲ್ಕಿನ ವಿವರ. ಷಾಣ್ಮಾಸಿಕ— (ಅ) ತಹಕೂಬ ಇಟ್ಟ. (ಬ) ಅನಧಿಕೃತ. (ಕ) ಇನ್ನೂ ಸಲ್ಲತಕ್ಕದ್ದಲ್ಲದ. | | |
|---|---|---|---|---|---|---|---|
| ೫ | | ೬ | | ೭ | ೮ | | |
| ಅಸಲು | ಬಡ್ಡಿ | ಅಸಲು | ಬಡ್ಡಿ | | | ಅಸಲು | ಬಡ್ಡಿ |
| | | ೧೬೦ | ೮.೩ | | | | |
| ೨೨ | ೮.೩ | ೯೮ | .... | .... | (ಕ) | | |
| | | ೯೮ | | | | | |
| .... | .... | ೯೮ | ೬.೮ | ೬.೮ | (ಕ) | | |
| | | ೯೮ | ೬.೮ | | | | |
| ೨೪ | ೬.೮ | ೭೪ | .... | .... | (ಕ) | | |
| | | ೭೪ | | | | | |
| .... | .... | ೭೪ | ೫.೦ | ೫.೦ | (ಬ) | | |
| | | ೭೪ | ೫.೦ | | | | |
| ೨೫ | ೫.೦ | ೪೯ | .... | .... | (ಕ) | | |
| | | ೪೯ | | | | | |
| .... | .... | .... | ೩.೮ | ೩.೮ | (ಕ) | | |
| | | ೪೯ | ೩.೮ | | | | |
| ೨೭ | ೩.೮ | ೨೨ | .... | .... | (ಕ) | | |
| | | ೨೨ | .... | .... | | | |
| .... | .... | .... | ೧.೧೩ | ೧.೧೩ | (ಕ) | | |
| .... | .... | ೨೨ | ೨.೩ | | | | |
| ೨೨ | ೨.೩ | ಇಲ್ಲ | ಇಲ್ಲ | | | | |

ಹೆಚ್ಚಿನ ಬಡ್ಡಿಯಂತೆ ಜಮಾ ಮಾಡಿದೆ.

# ತಗಾಯಿ ನಮೂನೆ ೩—(ಮುಂದೆಸಾಗಿದ್ದು.)

## ವಾರ್ಷಿಕ ಲೆಕ್ಕ.

| ವರ್ಷ. | ವಾಡಿಕೆಯ ಸಾಮರ್ಥ್ಯ. | ಅಂಶಗಳನ್ನು ಕೂಡಿಸಿದ್ದು. | ಬೇರೀಜು ಅಥವಾ ವಜಾ | | ವರ್ಷದ ನಕ್ಕಿ ವಸೂಗಣಿ. |
|---|---|---|---|---|---|
| | | | ಕಾರಣ. | ರಕಮು. | |
| ೯ | ೧೦ | ೧೧ | ೧೨ | ೧೩ | ೧೪ |
| | ರೂ. | ರೂ. ಆ. | | ರೂ. ಆ. | ರೂ. ಆ. |
| ೧೯೦೮–೦೯ .... | ೫೦ | .... | ........ | .... | ೫೦ ೦ |
| ೧೯೦೯–೧೦ .... | ೫೦ | ೦ ೧೨ | ತ ಹ ಕೊ ಬ ಇಟ್ಟ. | ೫೦ ೧೨ | ಇಲ್ಲ |
| ೧೯೧೦–೧೧ .... | ೫೦ | ೦ ೬ | ........ | .... | ೫೦ ೬ |
| ೧೯೧೧–೧೨ .... | ೨೫ ೩-೭-೧೧ನೇ ತಾರೀಖಿನ ಪ್ರಾಂತ ಅಮಲದಾರನ ಹುಕುಮಿನ ಪ್ರಕಾರ. | ೦ ೧೫ | ........ | .... | ೨೫ ೧೫ |
| ೧೯೧೨–೧೩ .... | ೨೫ | ೦ ೧೪ | ಅನಧಿಕೃತ ಶಿಲುಕಿನ ಸಿಕಾಲಿ ಮಾಡುವದಕ್ಕಾಗಿ ಹೋದ ವರ್ಷದ ಬಾಕಿಗೆ ಕೂಡಿಸಿರಿ. | ೧ ೦ | ೨೬ ೧೪ |
| ೧೯೧೩–೧೪ .... | ೨೫ | ೦ ೧೪ | ........ | .... | ೨೫ ೧೪ |
| ೧೯೧೪–೧೫ .... | ೨೫ | ೦ ೧೫ | ಉತ್ತಮವಾದ ಬೆಳೆ ಇದ್ದದರಿಂದ ಕೂಡಿಸಿದ್ದು. | ೧೫ . ೦ | ೪೦ ೧೫ |
| ೧೯೧೫–೧೬ .... | ೨೫ | ೦ ೬ | ........ | .... | ೨೫ ೬ |

## ತಗಾಯಿ ನಮೂನೆ ೩—(ಮುಂದೆಸಾಗಿದ್ದು.)

### ವಾರ್ಷಿಕ ಲೆಕ್ಕ—(ಸಂಪೂರ್ಣ).

| ವರ್ಷ. | ವಾಡಿಕೆಯ ಸಾಮರ್ಥ್ಯ. | ಅಂಶಗಳನ್ನು ಕೊಡಿಸಿದ್ದು. | ಬೇರೀಜು ಅಥವಾ ವಜಾ. | | ವರ್ಷದ ನಕ್ಕಿ ಮಾಗಣಿ. |
|---|---|---|---|---|---|
| | | | ಕಾರಣ. | ರಕಮು. | |
| ೯ | ೧೦ | ೧೧ | ೧೨ | ೧೩ | ೧೪ |
| | ರೂ. | ರೂ. ಆ. | | ರೂ. ಆ. | ರೂ. ಆ. |
| ೧೯೧೬-೧೭ .... | ೩-೧೦-೧೬ನೇ ತಾರೀಖಿನ ಪ್ರಾಂತ ಅಮಲದಾರನ ಹುಕುಮಿನ ಪ್ರಕಾರ ೩೦ಕ್ಕೆ ಏರಿಸಿದ್ದು. | ೦ ೧೪ | ........ | .... | ೩೦ ೧೪ |
| ೧೯೧೭-೧೮ .... | ೩೦ | ೦ ೨ | ದ್ವಿ ದಂಡವನ್ನು ಕೊಡಿಸಿದೆ. | ೬ ೮ | ೩೬ ೧೦<br>ತ. ನ. ನಂ ೧೦ ಇದನ್ನು ದುರಸ್ತು ಮಾಡಿದೆ ಮತ್ತು ಕಾಲಕರ್ಣಿಗೆ ತಿಳಿಸಿದೆ. |
| ೧೯೧೮-೧೯ .... | ೩೦ | ೦ ೩ | ........ | .... | ೩೦ ೩ |
| ೧೯೧೯-೨೦ .... | ೩೦ | ೦ ೮ | ........ | .... | ೩೦ ೮ |
| ೧೯೨೦-೨೧ .... | ೩೦ | ಇಲ್ಲ | ........ | .... | ೩೦ ೦ |
| ೧೯೨೧-೨೨ .... | ೩೦ | ೦ ೮ | ........ | .... | ೩೦ ೮ |
| ೧೯೨೨-೨೩ .... | ೩೦ | ೦ ೩ | ಖಾತೆ ಬಾದ ಮಾಡಲಿಕ್ಕಾಗಿ ಕಡಿಮೆ ಮಾಡಿದ್ದು. | ೬ ೦ | ೨೪ |

ತಗಾಯಿ

ಗ್ರಾಮ—ನಹಿಗಾಂಗ; ಹೆಸರು—

ಸಾಮಾನ್ಯ

| ತಾರೀಖು. | ಲೇವಾದೇವಿ. | [illegible] | ಖರ್ಚು. | |
|---|---|---|---|---|
| ೧ | ೨ | ೩ | ೪ | |
| | | | ಅಸಲು. | ಬಡ್ಡಿ |
| ೩೦–೧೦–೧೨ .... | ಹಿಂಸಿನ ವ್ಯವಹಾರಗಳನ್ನು ಬಿಟ್ಟದೆ | .... | .... | ೧ ೧೪ |
| ೩೧–೧೨–೧೨ .... | ........ | .... | .... | .... |
| ೧೧–೪–೧೩ .... | ಒಂದು ಆಕಳವನ್ನು ಮಾರಾಟ ಮಾಡಿ ಬಾದ ರಕಮಿನಿಂದ ಖರ್ಚು ಹೋಗಲಾಗಿ ಬಾಕಿ ಉಳಿದ ನಗದು ಹಣ. | .... | .... | .... |
| ೨೮–೫–೧೩ .... | ಈ ಬಾಬಿನಲ್ಲಿ ೨೮ನೇ ಮೇ ಸನ್ ೧೯೧೩ನೇ ತಾರೀಖಿನ ಕಲೆಕ್ಟರನ ಹುಕುಮಿನ ಪ್ರಕಾರ ಖಟ್ಲಾವ ಬಾಕಿ ಎಂದು ಬಿಟ್ಟುಬಿಟ್ಟದ್ದು. | .... | ... | .... |

(ವಾಯ್) (ರೂ. ೧೧–೮–೦) ಖಟ್ಲಾವ ಬಾಕಿಯೆಂದು ಬಿಟ್ಟುಬಿಟ್ಟ ಬಡ್ಡಿಯ ಮೊವಲಿನ ೨ ವರ್ಷಗಳ ವರೆಗೆ ಬಡ್ಡಿ ಇರದಿದ್ದ ಮೂಲಕ, ಬಿಟ್ಟುಬಿಟ್ಟ ಬಡ್ಡಿಯ ವಿನಂತಿ ಮಾಡಿಕೊಳ್ಳಲಾಯಿತು; ಈ ವಿಷಯದ ಮೇಲಿನ ಅವನ ಹುಕುಮಿನಲ್ಲಿ ಥಾದ್ದು ಎಂದು ಮತ್ತು ರೂ. ೩–೧೨–೦ಯನ್ನು ಸಪ್ಟಂಬರದ ಷಾಣ್ಮಾಸಿಕ ಪತ್ರಕದಲ್ಲಿ

(ಝೆಡ್) ಡಿಸೆಂಬರಕ್ಕೆ ಮತ್ತು ಮಾರ್ಚಿಗೆ ಮುಗಿಯುವ ತ್ರೈಮಾಸಿಕಗಳ ಯಾವ ಷಾಣ್ಮಾಸಿಕ ಪತ್ರಕದಲ್ಲಿಯೂ ಅದನ್ನು ಸೇರಿಸಿದ್ದಿಲ್ಲ; ಆದಕಾರಣ ಅದನ್ನು ವಸೂಲಾಗದ ಒಟ್ಟು ರಕಮಿನ ಮೇಲೆ ಸಿಕ್ಕ ಬಡ್ಡಿಯು, ನಿಜವಾಗಿ ನೋಡಿದರೆ, ಈ ಆಗುವದು."

ನಮೂನೆ ೩—(ಮುಂದೆಸಾಗಿದ್ದು.)

ಸಾಯಿ ಕೋಮ ಪಖಾರಾವು; ಗ್ರಾಮದ ಅನುಕ್ರಮ ನಂಬರು ೨೨.

ಲೆಕ್ಕ.

| ಜಮಾ. | | ತ್ರೈಮಾಸಿಕ ಶಿಲುಕು, ೩೦ನೇ ಜೂನ, ಸಪ್ಟಂಬರ, ಡಿಸೆಂಬರ ಮತ್ತು ೩೧ನೇ ಮಾರ್ಚ. | | ತ್ರೈಮಾಸಿಕ ಬಡ್ಡಿ. | ಶಿಲುಕಿನ ವಿವರ. ಷಾಣ್ಮಾಸಿಕ— (ಅ) ತಹಕೂಬ ಇಟ್ಟ. (ಬ) ಅನಧಿಕೃತ. (ಕ) ಇನ್ನೂ ಸಲ್ಲತಕ್ಕದ್ದಲ್ಲದ. | | |
|---|---|---|---|---|---|---|---|
| ೫ | | ೬ | | ೭ | ೮ | | |
| ಅಸಲು. | ಬಡ್ಡಿ. | ಅಸಲು. | ಬಡ್ಡಿ. | ದರ ೬½ | ಅಸಲು. | | ಬಡ್ಡಿ. |
| .... | .... | ೩೦ | ೧೯ ೧೫ | .... | (ಬ) | ೩೦ | ೧೯ ೧೫ |
| .... | .... | ೩೦ | ೧೯ ೧೫ | .... | | | |
| | | ೩೦ | ೧೯ ೧೫ | .... | (ಬ) | ೩೦ | ೧೯ ೧೫ |
| .... | ೮ ೭ | .... | .... | .... | .... | .... | .... |
| ೩೦ | ೧೧ ೮ (ವಾಯಸ್) | .... | .... | .... (ಝೂಡ್) | .... | .... | .... |

ಪೈಕಿ ರೂ. ೩—೧೨—೦ನ್ನು ತಪ್ಪಾಗಿ ಹೆಚ್ಚಾಗಿ ಖರ್ಚಿನಲ್ಲಿ ಹಿಡಿಯಲಾಯಿತು; ಸಾಲಕ್ಕೆ ರಕಮನ್ನು ರೂ. ೭—೧೨—೦ರಂತೆ ದುರಸ್ತ ಮಾಡುವದರ ಸಲುವಾಗಿ ಕಲೆಕ್ಟರನಿಗೆ ಮಂಜೂರ ಮಾಡಲಾಯಿತು; ಮತ್ತು ರೂ. ೭—೧೨—೦ಯನ್ನು ವಸೂಲ ಆಗದಂ ರದ್ದ ಮಾಡಿದ ಮಾಗಣಿ ಎಂದು ತೋರಿಸಲಾಯಿತು.

ಬಾಬತಿನ ಬಡ್ಡಿಯನ್ನು ಕೂಡಿಸುವದು ನಿರುಪಯೋಗಿಯಾಗಿತ್ತು, ಯಾಕಂದರೆ, ಖಟ್ಲಾದ ಬಾಕಿ ಎಂದು ಬಿಟ್ಟುಬಿಡುವ ಆಗತ್ಯವಿಲ್ಲ. "ವಾರ್ಷಿಕ ಹಣದ ಲೆಕ್ಕಗಳಲ್ಲಿ, ಸೂಟು ಬಿಟ್ಟ ರಕಮನ್ನು ಖಟ್ಲಾದ ಬಾಕಿ ಎಂದು ಬಿಟ್ಟುಬಿಟ್ಟ ಕಾರಣದಿಂದ, ಕಡಿಮೆ

# ತಗಾಯಿ ನಮೂನೆ ೭—(ಮುಂದೆಸಾಗಿದ್ದು.)

## ವಾರ್ಷಿಕ ಲೆಕ್ಕ.

| ವರ್ಷ. | ವಾಡಿಕೆಯ ಸಾಮರ್ಥ್ಯ. | ಅಂಶಗಳನ್ನು ಕೂಡಿಸಿದ್ದು. | ಬೇರೀಜು ಅಥವಾ ವಜಾ. | | ವರ್ಷದ ನಕ್ಕಿ ವಾಗಣಿ. |
|---|---|---|---|---|---|
| | | | ಕಾರಣ. | ರಕಮು. | |
| ೯ | ೧೦ | ೧೧ | ೧೨ | ೧೩ | ೧೪ |
| | | | | ರೂ. ಆ. | ರೂ. ಆ. |
| ೧೯೦೨–೦೩ .... | ೫ | .... | .... | .... | ಏನೂ ವಸೂಲ ಮಾಡಲಿಲ್ಲ. |
| ೧೯೧೨–೧೩ .... | ೫ | .... | ಒಂದೇಸವನೆ ತಪ್ಪಿದ್ದಕ್ಕಾಗಿ, ಸಂಪೂರ್ಣ ಸಾಲವು ಸಲ್ಲತಕ್ಕದ್ದು ಇರುತ್ತದೆ. | ೪೪ ೧೫ | ೪೯ ೧೫ |

## ತಗಾಯಿ ನಮೂನೆ ೩—(ಮುಂದೆಸಾಗಿದ್ದು.)

ಗ್ರಾಮ—ನಹಿಗಾಂವ; ಹೆಸರು—ಅನಂತ ಸಖಾರಾಮ ಧರ್ಣೆ:
ಗ್ರಾಮದ ಅನುಕ್ರಮ ನಂಬರು ೩೪.
ಸಾಮಾನ್ಯ ಲೆಕ್ಕ.

| ತಾರೀಖು. | ಲೇವಾದೇವಿ. | ಮಾಮಲೇದಾರನ ಅಥವಾ ಅವಲ ಕಾರಕೂನನ ಸಹಿಯ ಆದ್ಯಕ್ಷರಗಳು. | ಖರ್ಚು. | |
|---|---|---|---|---|
| ೧ | ೨ | ೩ | ೪ | |
| | | | ಅಸಲು. | ಬಡ್ತಿ. |
| ೩೧–೫–೦೯ .... | ಮುಂಗಡ .... .... | ........ | ೫೦ | .... |
| ೩೦–೯–೦೯ .... | | ........ | .... | .... |
| ೧–೧೦–೦೯ .... | ಬಡ್ತಿ .... .... | ........ | .... | ೪ ೧೧ |
| ೧೨–೨–೧೦ .... | ನಗದು .... .... | ........ | .... | .... |
| ೩೦–೯–೧೦ .... | | | .... | ೭ ೧೧ |
| ೧–೧೦–೧೦ .... | ಬಡ್ತಿ .... .... | ........ | .... | ೭ ೧೧ |
| ೧೦–೨–೧೧ .... | ನಗದು .... .... | ........ | .... | .... |
| ೩೦–೯–೧೧ .... | | ........ | .... | ೫ ೧೦ |
| ೧–೧೦–೧೧ .... | ಬಡ್ತಿ ... .... | ........ | .... | ೫ ೧೦ |
| ೧೩–೩–೧೨ .... | ನಗದು .... .... | ........ | .... | .... |
| ೩೦–೯–೧೨ .... | | ........ | .... | ೩ ೭ |
| ೧–೧೦–೧೨ .... | ಬಡ್ತಿ .... .... | ........ | .... | ೩ ೭ |
| ೧೧–೪–೧೩ .... | ನಗದು .... .... | ........ | .... | .... |
| ೨೪–೪–೧೩ .... | ಬಡ್ತಿ .... .... | ........ | .... | ೧ ೭ |
| | ನಗದು .... .... | ........ | .... | .... |

## ತಗಾಯಿ ನಮೂನೆ

ಗ್ರಾಮ—ನಹಿಗಾಂವ; ಹೆಸರು—ಅನಂತ ಸಖಾರಾಮ ಧರ್ಣೆ;

ಸಾಮಾನ್ಯ ಲೆಕ್ಕ

| ತಾರೀಖು. | ಜಮಾ. | | ತ್ರೈಮಾಸಿಕ ಶಿಲುಕು. ೩೦ನೇ ಜೂನ, ಸಪ್ಟಂಬರ, ಡಿಸೆಂಬರ ಮತ್ತು ೩೧ನೇ ಮಾರ್ಚ. | |
|---|---|---|---|---|
| ೧ | ೫ | | ೬ | |
| | ಅಸಲು. | ಬಡ್ಡಿ. | ಅಸಲು. | ಬಡ್ಡಿ. |
| ೩೧-೫-೦೯ .... | .... | .... | ೧೫೦ | .... |
| ೩೦-೯-೦೯ .... | .... | .... | ೧೫೦ | .... |
| ೧-೧೦-೦೯ .... | .... | .... | ೧೫೦ | ೪ ೧೧ |
| ೧೨-೨-೧೦ .... | ೩೬ ೦ | ೪ ೧೧ | ೧೧೪ | ಇಲ್ಲ |
| | | | ೧೧೪ | .... |
| ೩೦-೯-೧೦ .... | .... | .... | ೧೧೪ | .... |
| ೧-೧೦-೧೦ .... | .... | .... | ೧೧೪ | ೭ ೧೧ |
| ೧೦-೨-೧೧ .... | ೩೩ ೦ | ೭ ೧೧ | ೮೧ | .... |
| | | | ೮೧ | .... |
| ೩೦-೯-೧೧ .... | .... | ... | ೮೧ | .... |
| ೧-೧೦-೧೧ .... | .... | .... | ೮೧ | ೫ ೧೦ |
| ೧೩-೩-೧೨ .... | ೩೫ ೦ | ೫ ೧೦ | ೪೬ | ಇಲ್ಲ |
| | | | ೪೬ | .... |
| ೩೦-೯-೧೨ .... | .... | .... | ೪೬ | .... |
| ೧-೧೦-೧೨ .... | .... | .... | ೪೬ | ೩ ೭ |
| | | | ೪೬ | ೩ ೭ |
| | ೧೬ ೯ | ೩ ೭ | ೨೯ ೭ | .... |
| ೧೧-೪-೧೩ .... | .... | .... | .... | .... |
| ೨೪-೬-೧೩ .... | ೨೯ ೭ | ೧ ೭ | ಇಲ್ಲ | .... |

* ೩೧ ರೂಪಾಯಿಗಳು ಚಲನದೊಂದಿಗೆ ಕಳುಹಿಸಲ್ಪಟ್ಟವು; ಆದರೆ ಡಿಸೆಂಬರ ರೂ. ೩೦-೧೪-೦ ಮಾತ್ರ ಸಲ್ಲತಕ್ಕದ್ದಿದ್ದದರಿಂದ, ೨ ಆಣೆಗಳ ಶಿಲುಕು, ಹಿಂತಿರಿಗಿ ಟಿಪ್ಪಣಿ ಮಾಡಿದ ನಂತರ ರಿಪೋರ್ಟು ಮಾಡುವದರ ಸಲುವಾಗಿ, ಕುಲಕರ್ಣಿಯ

೩—(ಮುಂದೆಸಾಗಿದ್ದು.)

ಗ್ರಾಮದ ಅನುಕ್ರಮ ನಂಬರು ೩೪—(ಮುಂದೆಸಾಗಿದ್ದು.)

—(ಮುಂದೆಸಾಗಿದ್ದು.)

| ತ್ರೈಮಾಸಿಕ ಬಡ್ಡಿ. ೭ | ಶಿಲುಕಿನ ವಿವರ. ಷಾಣ್ಮಾಸಿಕ— (ಅ) ತಹಕೂಬ ಇಟ್ಟ. (ಬ) ಅನಧಿಕೃತ. (ಕ) ಇನ್ನೂ ಸಲ್ಲತಕ್ಕದ್ದಲ್ಲದ. ೮ | | |
|---|---|---|---|
| ಒಳ್ಳೆ ವರದಂತೆ. | | ಅಸಲು. | ಬಡ್ಡಿ. |
| ೪ ೧೧ | (ಕ) | ........ | ........ |
| ........ ........ | (ಕ) | ........ | ........ |
| ........ ೭ ೧೧ | (ಕ) | ........ | ........ |
| ........ ........ | (ಕ) | ........ | ........ |
| ........ ೫ ೧೦ | (ಕ) | ........ | ........ |
| ........ ........ | (ಕ) | ........ | ........ |
| ........ ೩ ೭ | (ಕ) | ........ | ........ |
| ........ ೧ ೭ | (ಬ) (ಕ) | ೨೭ ೧೯ | ೩ ೭ ........ |
| ........ ........ ........ | .... .... .... | ........ ........ ........ | * ........ ........ ........ |

ಮತ್ತು ಮಾರ್ಚ ತ್ರೈಮಾಸಿಕಗಳ ಬಡ್ಡಿಯ ಆಕಾರಣೆ ಮಾಡಿದ ನಂತರ ಕೊಡುವದರ ಸಲುವಾಗಿ ಮತ್ತು ತಗಾಯಿ ನಮೂನೆ ನಂ. ೪ ಮತ್ತು ೫ರಲ್ಲಿ ಕಡೆಗೆ ಚಲನದೊಂದಿಗೆ ತಿರುಗಿ ಕಳುಹಿಸಲ್ಪಟ್ಟಿತು.

## ತಗಾಯಿ ನಮೂನೆ ೩—(ಮುಂದೆಸಾಗಿದ್ದು.)

### ವಾರ್ಷಿಕ ಲೆಕ್ಕ.

| ವರ್ಷ. | ವಾಡಿಕೆಯ ಸಾಮರ್ಥ್ಯ. | ಅಂಶಗಳನ್ನು ಕೂಡಿಸಿದ್ದು. | ಬೇರೀಜು ಅಥವಾ ವಜಾ. | | ವರ್ಷದ ನಕ್ಕಿ ಮಾಗಣಿ. |
|---|---|---|---|---|---|
| | | | ಕಾರಣ. | ರಕಮು. | |
| ೯ | ೧೦ | ೧೧ | ೧೨ | ೧೩. | ೧೪. |
| ೧೯೦೯—೧೦ .... | ೪೦ | ೦ ೧೧ | ........ | .... | ೪೦ ೧೧ |
| ೧೯೧೦—೧೧ .... | ೪೦ | ೦ ೧೧ | ........ | .... | ೪೦ ೧೧ |
| ೧೯೧೧—೧೨ .... | ೪೦ | ೦ ೧೦ | ........ | .... | ೪೦ ೧೦ |
| ೧೯೧೨—೧೩ .... | ೪೦ | ೦ ೭ | ಸಾಲವನ್ನು ಬಹುತೇಕ ಮುಟ್ಟಿಸಿರುವದರಿಂದ ನ್ನು ಕಡಿಮೆ ಮಾಡಿರಿ. | ೧೦ ೦ | ೩೦ ೭ |
| | | | ತಪ್ಪು ಮಾಡಿದ್ದರಿಂದ, ಮಾರ್ಚ ಅಖೈರ ವರೆಗೆ ಬಡ್ಡಿ ಸಹಿತ ಎಲ್ಲ ಬಾಕಿಯನ್ನು ವಸೂಲ ಮಾಡಲಿಕ್ಕೆ ಪ್ರಾಂತ ಅಮಲದಾರನ ಈ ವಿಷಯದ ಹುಕುಮಿನನ್ವಯ ಹುಕುಮು ಮಾಡಲಾಗಿದೆ. | †೨೦ ೭ | ೫೦ ೧೪ ತಗಾಯಿ ನಮೂನೆ ನಂ. ೧೦ ಇದನ್ನು ಸರಿಪಡಿಸಿದೆ, ಮತ್ತು ತಗಾಯಿ ನಮೂನೆ ನಂ. ೪ ಇದನ್ನು ತಿದ್ದಲಿಕ್ಕೆ ಕುಲಕರ್ಣಿಗೆ ತಿಳಿಸಿದೆ. |

## ತಗಾಯಿ ನಮೂನೆ ೩—(ಮುಂದೆಸಾಗಿದ್ದು.)

ಗ್ರಾಮ—ನಹಿಗಾಂವ; ಹೆಸರು—ತುಕಾರಾಮ ಗೋವಿಂದ ಶಿಂದೆ.
ಗ್ರಾಮದ ಅನುಕ್ರಮ ನಂಬರು ೫೦.

### ಸಾಮಾನ್ಯ ಲೆಕ್ಕ.

| ತಾರೀಖು. | ಲೇವಾದೇವಿ. | ಮಾಮಲೇದಾರನ ಅಥವಾ ಅವಲಕಾರಕೂನನ ಸಹಿಯು ಆದ್ಯಕ್ಷರಗಳು. | ಖರ್ಚು. | |
|---|---|---|---|---|
| ೧ | ೨ | ೩ | ೪ | |
| | | | ಅಸಲು. | ಬಡ್ಡಿ. |
| ೧-೨-೧೨ .... | ಮುಂಗಡ .... | .... | ೧೮೦ | .... |
| ೩೦-೯-೧೨ .... | | | .... | ೮ ೭ |
| ೧-೧೦-೧೨ .... | ಬಡ್ಡಿ .... | .... | .... | ೮ ೭ |
| ೧೩-೪-೧೩ .... | ಖರ್ಚು ಹೋಗಲಾಗಿ, ಜಮೀನು ಮಾರಾಟ ಮಾಡಿದ್ದರಿಂದ ದೊರೆತ ನಗದು. | .... | .... | .... |
| ೯-೯-೧೩ .... | ಖಟ್ಲಾದ ಬಾಕಿಯೊಂದು ಬಿಟ್ಟುಬಿಟ್ಟದ್ದು. | .... | .... | .... |

## ತಗಾಯಿ ನಮೂನೆ

ಗ್ರಾಮ—ಸಹಿಗಾಂವ; ಹೆಸರು—ತುಕಾರಾಮ ಗೋವಿಂದ ಶಿಂದೆ;

ಸಾಮಾನ್ಯ ಲೆಕ್ಕ

| ತಾರೀಖು. | ಜಮಾ. ೫ | | ತ್ರೈಮಾಸಿಕ ಶಿಲುಕು—೩೦ನೇ ಜೂನ, ಸಪ್ಟಂಬರ, ಡಿಸೆಂಬರ ಮತ್ತು ೩೧ನೇ ಮಾರ್ಚ. ೬ | |
|---|---|---|---|---|
| | ಅಸಲು. | ಬಡ್ಡಿ. | ಅಸಲು. | ಬಡ್ಡಿ. |
| ೧—೨—೧೨ .... | .... | .... | .... | .... |
| | | | ೧೮೦ | .... |
| | | | ೧೮೦ | .... |
| ೩೦—೯—೧೨ .... | .... | .... | ೭೮೦ | ೮ ೬ |
| ೧—೧೦—೧೨ .... | .... | .... | ೧೮೦ | ೮ ೬ |
| | | | ೧೮೦ | ೮ ೬ |
| ೧೩—೪—೧೩ .... | ೯೪ ೪ | ೮ ೬ | ೮೫ ೧೨ | ಇಲ್ಲ |
| ೯—೯—೧೩ .... | ೮೫ ೧೨ | .... | ಇಲ್ಲ | ಇಲ್ಲ |

ಡಿಸೆಂಬರದಿಂದ ಜೂನದ ವರೆಗಿನ ತ್ರೈಮಾಸಿಕಗಳಿಗೆ ಬಡ್ಡಿಯನ್ನು ಕೂಡಿಸಿ ಸೇರಿಸಲಾಗಿದೆ.

ಸದರಿ ನಷ್ಟವು ಮೋಸ ಮಾಡಿದ್ದರಿಂದ ಉಂಟಾಗಿದ್ದರಿಂದ, ಭೂಮಿಯ ಸುಹ ಹೊರಡಿಸಲಾಯಿತು, ಆದರೆ ತುಕಾರಾಮನು ಓಡಿಹೋಗಿರುತ್ತಾನೆ.

೩—(ಮುಂದೆಸಾಗಿದ್ದು.)

ಗ್ರಾಮದ ಅನುಕ್ರಮ ನಂಬರು ೫೦—(ಮುಂದೆಸಾಗಿದ್ದು.)

—(ಮುಂದೆಸಾಗಿದ್ದು.)

| ತ್ರೈಮಾಸಿಕ ಬಡ್ಡಿ. ೭ | ಶಿಲುಕಿನ ವಿವರ. ಷಾಣ್ಮಾಸಿಕ— (ಅ) ತಹಕೂಬ ಇಟ್ಟ. (ಬ) ಅನಧಿಕೃತ. (ಕ) ಇನ್ನೂ ಸಲ್ಲತಕ್ಕದ್ದಲ್ಲದ. ೮ | | |
|---|---|---|---|
| ತಿಳಿ ದರದಂತೆ. | | ಅಸಲು. | ಬಡ್ಡಿ. |
| ........ | | | |
| ........ | (ಕ) | ........ | ........ |
| ........ | | | |
| ೮ ೭ | (ಕ) | ........ | ........ |
| ........ | (ಬ) | ೨೦ | ೮ ೭ |
| ........ | (ಕ) | ೧೫೦ | ........ |
| ........ | .... | ........ | ಖರ್ಚನ್ನು ಭೂಮಿಯ ಮಹಸೂಲಿಗೆ ಜಮಾ ಮಾಡಿದೆ. |
| ........ | .... | ........ | ........ |

ಉಪಯೋಗವಿಲ್ಲ; ಸದರಿ ಬಾಬನ್ನು ವಿಶಿಷ್ಟ ವಸೂಲಾಗದ ಸಾಲದ ಫೈಲಿನಲ್ಲಿ

ಸೊಲಿನ ಕಾಯದೆಯ ಪ್ರಕಾರ ದಸ್ತಗೀರ ಮಾಡುವ ವಾರಂಟು ಕಳೆಕ್ಟರನಿಂದ

## ತಗಾಯಿ ನಮೂನೆ ೩—(ಮುಂದೆಸಾಗಿದ್ದು.)

[ಖಾತೆ ನಂ. ೫೦ ಇದನ್ನು ಕಾದಿಟ್ಟುಕೊಂಡದ್ದು.]

ವಾರ್ಷಿಕ ಲೆಕ್ಕ.

| ವರ್ಷ. | ವಾಡಿಕೆಯ ಸಾಮರ್ಥ್ಯ. | ಅಂಶಗಳನ್ನು ಕೂಡಿಸಿದ್ದು. | ಬೇರೀಜು ಅಥವಾ ವಜಾ. | | ವರ್ಷದ ನಕ್ಕಿ ಮಾಗಣಿ. |
|---|---|---|---|---|---|
| | | | ಕಾರಣ. | ರಕಮು. | |
| ೯ | ೧೦ | ೧೧ | ೧೨ | ೧೩ | ೧೪ |
| | | | | ರೂ. | |
| ೧೯೧೨-೧೩ .... | ೩೦ | ೦ ೭ | .... | .... | ೩೦ ೭ |
| | | | | ೧೫೮ | ೧೫೮ ೭ |
| | | | ಹಣ ಎತ್ತಿ ಹಾಕಿದ್ದಕ್ಕಾಗಿ ಸಂಕ್ಷಿಪ್ತ ರೀತಿಯಿಂದ ಕೆಲಸ ನಡಿಸಿ ವಸೂಲ ಮಾಡಲಿಕ್ಕೆ ಹುಕುಮು ಮಾಡಿದೆ. ಪ್ರಾಂತ ಅಮಲದಾರನ ಹುಕುಮು. | | ತಗಾಯಿ ನಮೂನೆ ೧೦ ಇದನ್ನು ತಿದ್ದಿದೆ, ಮತ್ತು ತಗಾಯಿ ನಮೂನೆ ೪ ಇದನ್ನು ತಿದ್ದಿಕೊಳ್ಳಲಿಕ್ಕೆ ಕುಲಕರ್ಣಿಗೆ ತಿಳಿಸಿದೆ. |

### ತ. ನ. ೩ ಇದರ ಮೇಲಿನ ಶರಾಗಳು.

ಈ ಖತಾವಣಿಯ ನಮೂನೆಯು, ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನ ಸಲುವಾಗಿರುವ ಒಂದು ಹಾಳೆಯಿರುತ್ತದೆ. ಅವುಗಳನ್ನು ಒಟ್ಟುಗೂಡಿಸಿ ಗಟ್ಟಿಯಾಗಿ ಕಟ್ಟಿ, ಪ್ರತಿಯೊಂದು ಗ್ರಾಮದ ಸಲುವಾಗಿ ಬೇರೆಬೇರೆಯಾಗಿಡಲಾಗುತ್ತದೆ. ಮುಲ್ಕೀ ಲೆಕ್ಕಗಳ ಪುಸ್ತಕದ (ಇಂಗ್ರೇಜಿ) ೧೩೮-೯ನೇ ಪುಟಗಳಲ್ಲಿ ಠರಾಯಿಸಿದ ಪ್ರಕಾರ ತಾಲೂಕಿನ ಲೆಕ್ಕಗಳಲ್ಲಿ ಗ್ರಾಮಗಳನ್ನು ಯಾವ ಕ್ರಮದಿಂದ ಬರೆದಿದೆಯೋ

ಅದೇ ಕ್ರಮದಲ್ಲಿ ಯಾವದೇ ಹೆಚ್ಚುಕಡಿಮೆ ಮಾಡದೆ, ಯಾವತ್ತು ಗ್ರಾಮಗಳನ್ನು ಕ್ರಮದಿಂದ ಬರೆಯತಕ್ಕದ್ದು. ಪ್ರತಿಯೊಂದು ಸರ್ವೆ ಗುಂಪಿನಲ್ಲಿ ಭೂಮಿಯ ಮಹಸೂಲಿನ ಕಂತುಗಳನ್ನು ವಾಡಿಕೆಯಾಗಿ ಕೊಡಬೇಕಾದ ತಾರೀಖು ತಾಲೂಕ ಕಚೇರಿಯಲ್ಲಿ ಎಲ್ಲರಿಗೂ ಗೊತ್ತಿರುತ್ತದೆ; ಆದ್ದರಿಂದ ಅದನ್ನು ಪ್ರತಿಯೊಂದು ಲೆಕ್ಕದ ಮೇಲೆ ಪುನಃ ಬರೆಯುವ ಅವಶ್ಯವಿರುವದಿಲ್ಲ. ಪ್ರತಿಯೊಂದು ಹೊಸ ಖತಾವಣಿಗೆ ಒಂದು ಹೊಸ ಅನುಕ್ರಮ ನಂಬರನ್ನು ಕೊಡತಕ್ಕದ್ದು, ಅಂದರೆ, ಯಾವದೊಂದು ಗ್ರಾಮದಲ್ಲಿ ಈಗಾಗಲೇ ಐದು ಖಾತೆ ಲೆಕ್ಕಗಳನ್ನು ಪ್ರಾರಂಭಿಸಿದ್ದರೆ, ಇನ್ನುಮುಂದೆ ಸಾಲ ತೆಗೆದುಕೊಳ್ಳುವವನಿಗೆ ೬ನೇ ನಂಬರನ್ನು ಕೊಡಬೇಕು.

೨. ಸಾಲ ತೆಗೆದುಕೊಂಡವನ ಸಾಲವು ಪೂರ್ಣವಾಗಿ ಹಿಂತಿರುಗಿ ಕೊಡಲ್ಪಡುವ ವರೆಗೆ ಅಥವಾ ಖಟ್ಲಾದ ಬಾಕಿಯೆಂದು ಬಿಟ್ಟುಕೊಡಲ್ಪಡುವ ವರೆಗೆ (ಆದರೆ ಇದರಲ್ಲಿ ಈ ಕೆಳಗೆ ೧೫ನೇ ಪ್ಯಾರಾವನ್ನು ನೋಡಿರಿ) ಈ ನಮೂನೆಯನ್ನುಪಯೋಗಿಸಲಾಗುವದು. ಸಾಲವು ಅನೇಕ ವರ್ಷಗಳ ವರೆಗೆ ಚಾಲೂ ಇದ್ದು, ಸದರಿ ನಮೂನೆಯು ಪೂರ್ಣವಾಗಿ ತುಂಬಿಹೋದರೆ, ಹೊಸ ಹಾಳೆಯ ಮೇಲೆ ಮೊದಲಿನ ನಂಬರನ್ನೇ ಹಾಕಿ ಅದನ್ನು ಅದಕ್ಕೆ ಜೋಡಿಸಬೇಕು. ಸದರಿ ನಮೂನೆಯಲ್ಲಿ, ಯಾವನೊಬ್ಬ ಸಾಲ ತೆಗೆದುಕೊಂಡವನ ಸಾಲದ ಸಂಬಂಧದ ಯಾವತ್ತು ಲೇವಾದೇವಿಗಳ ಸಂಪೂರ್ಣ ರಿಕಾರ್ಡಿರುತ್ತದೆಂದು ಇದರ ಮೇಲಿಂದ ಕಂಡುಬರುವದು. ಮೊದಲನೇ ಸಾಲವು ಒಂದು ಅಥವಾ ಹೆಚ್ಚು ವರ್ಷಗಳ ವರೆಗೆ ಚಾಲೂ ಇರುವಾಗ ಮತ್ತೊಂದು ಹೆಚ್ಚಿನ ಸಾಲವನ್ನು ಅದೇ ಸಾಲ ತೆಗೆದುಕೊಂಡವನಿಗೆ ಕೊಟ್ಟರೆ, ಈ ಹೊಸ ಸಾಲವನ್ನಾದರೂ ಅದೇ ಲೆಕ್ಕದಲ್ಲಿ ಖರ್ಚಿನ ಭಾಗದಲ್ಲಿ ಹೊಸ ಬಾಬೆಂದು ತೋರಿಸಲಾಗುವದು.

೩. ಯಾವದೊಂದು ಗ್ರಾಮದಲ್ಲಿ ೬ಕ್ಕಿಂತ ಹೆಚ್ಚು ಖಾತೆಗಳಿದ್ದು, ಇದರ ಮೂಲಕ, ಯಾವನೊಬ್ಬ ಸಾಲ ತೆಗೆದುಕೊಂಡವನ ಖಾತೆಯನ್ನು ಹುಡುಕಿ ತೆಗೆಯುವಾಗ ವೇಳೆಯು ಹಾಳಾಗುತ್ತಿದ್ದರೆ, ಸದರಿ ಗ್ರಾಮದ ಯಾವತ್ತು ಖತಾವಣಿಯ ನಮೂನೆಗಳ ಗಂಟಿನ ಮುಂಬದಿಗೆ ಒಂದು ಕಾಗದವನ್ನು ಜೋಡಿಸಬಹುದು, ಮತ್ತು ಅದರ ಮೇಲೆ, ಯಾವತ್ತು ಸಾಲ ತೆಗೆದುಕೊಂಡವರ ಹೆಸರುಗಳನ್ನು, ಅವರ ಹೆಸರುಗಳ ಮುಂದೆ ಅವರವರ ಖಾತೆ ನಂಬರುಗಳನ್ನು ಬರೆದು, ಅಕ್ಷರಾನುಕ್ರಮದಿಂದ ಬರೆಯಬೇಕು.

೪. ಬಡ್ಡಿಯ ಲೆಕ್ಕವನ್ನು ಮಾಡುವದು ಸುಲಭವಾಗುವಂತೆ ಮಾಡುವದರ ಸಲುವಾಗಿ, ಪ್ರತಿ ಮೂರು ತಿಂಗಳಿಗೊಮ್ಮೆ ಲೆಕ್ಕದ ಶಿಲುಕನ್ನು ತೆಗೆಯುವ ಬಗ್ಗೆ ಈ ನಮೂನೆಯಲ್ಲಿ ತಜವೀಜಿರುತ್ತದೆ ಆದರೆ, ಆರು ಅಥವಾ ಒಂಭತ್ತು ತಿಂಗಳ ವರೆಗೆ ಈ ಶಿಲುಕು ರಕಮು ಬದಲಾಗದೆ ಹಾಗೆಯೇ ಉಳಿದರೆ, ಮೂದರಿಯ ನೋಂದುಗಳಲ್ಲಿ ತೋರಿಸಿದಂತೆ ಅದನ್ನು ಪುನಃ ಪುನಃ ಬರೆಯುವದು ಅವಶ್ಯವಿರುವದಿಲ್ಲ. ಆದರೆ ಪ್ರತಿ ವರ್ಷಾರ್ಧದ ಕೊನೆಗೆ (೩೦ನೇ ಸಪ್ಟೆಂಬರಕ್ಕೆ ಹಾಗೂ ೩೧ನೇ ಮಾರ್ಚಿಗೆ) (೬)ನೇದ್ದರಲ್ಲಿ ತೋರಿಸಿದಂತೆ ಈ ಶಿಲುಕನ್ನು ಎರಡು ಮೂಲ ಬಾಬುಗಳಾಗಿ ವಿಭಾಗಿಸುವದು ಅವಶ್ಯವಿರುತ್ತದೆ. ಯಾವ ಕಂತುಗಳನ್ನು

ಕೊಡುವ ಅವಧಿಯು ಇನ್ನೂ ಮುಗಿಯಲಿಲ್ಲವೋ ಆ ಕಂತುಗಳನ್ನು ಮಾತ್ರ ಪ್ರತಿಯೊಬ್ಬ ಸಾಲ ತೆಗೆದುಕೊಳ್ಳುವವನು ಕೊಡುವದಿರುತ್ತದೆ ಎಂಬದು ವಾಡಿಕೆಯ ಪರಿಸ್ಥಿತಿಯಾಗಿರುವದು; ಬಾಕಿ ಉಳಿದ ಯಾವತ್ತು ಶಿಲುಕು ಒಂದೇ ಪ್ರಕಾರದ್ದಿದ್ದರೆ (ಕ) ಅದರ ಮೂಲ ಬಾಬುಗಳನ್ನು ಬರೆಯುವ ಆವಶ್ಯವಿರುವದಿಲ್ಲ (ಮಾದರಿಯನ್ನು ನೋಡಿರಿ).

೫. ಈ ನಮೂನೆಯಲ್ಲಿ ಎರಡು ಲೆಕ್ಕಗಳನ್ನು ಇಡಲಾಗಿದೆಂದು ಕಂಡುಬರುವದು: (೧) ಕಾಲಕಾಲಕ್ಕೆ ಸಾಲದ ಬಾಕಿ ಉಳಿದ ರಕಮನ್ನು ತೋರಿಸುವ, ಯಾವತ್ತು ಸಾಲದ ಪ್ರಾರಂಭದಿಂದ ಕೊನೆಯ ವರೆಗಿನ ಸಾಮಾನ್ಯ ಲೆಕ್ಕವು; (೨) ಪ್ರತಿ ವರ್ಷದ ಬಾಕಿಗಳ, ವಸೂಲಿಗಳ ಹಾಗೂ ತಹಕೂಬಿ ಮುಂತಾದವುಗಳ ವಾರ್ಷಿಕ ಲೆಕ್ಕವು. ನಾವು ಮೊದಲಿಗೆ ಸಾಮಾನ್ಯ ಲೆಕ್ಕವನ್ನು ಕುರಿತು ಚರ್ಚಿಸುವೆವು.

೬. ಪ್ರತಿಯೊಂದು ಹೊಸ ಸಾಲವು ಒಂದು ಹೊಸ ಖರ್ಚಿನ ನೋಂದಿರುತ್ತದೆಂಬದು ಸ್ಪಷ್ಟವಿದೆ. ಸಪ್ಟೆಂಬರ ತಿಂಗಳ ಕೊನೆಯ ವರೆಗೆ ಲೆಕ್ಕ ಮಾಡಲ್ಪಟ್ಟ ಅಥವಾ ಯಾವತ್ತು ತಾಲೂಕುಗಳಲ್ಲಿ ೩೦ನೇ ಸಪ್ಟೆಂಬರದ ದಿವಸ ವಾಡಿಕೆಯಾಗಿ ಬಂದ ಮಾಡಲ್ಪಡುವ, ಆದರೆ ನಿಜವಾಗಿ ಸಪ್ಟೆಂಬರ ತಿಂಗಳ ಕೊನೆಯ ಲೆಕ್ಕದಲ್ಲಿ ಸಮಾವಿಷ್ಟ ಮಾಡುವದರ ಸಲುವಾಗಿ ಇತರ ಯಾವದೇ ಕಾಲದ ವರೆಗೆ ಲೆಕ್ಕ ಮಾಡಲ್ಪಟ್ಟ ಬಡ್ಡಿಯ ಪ್ರತಿಯೊಂದು ಹೊಸ ಖರ್ಚಿನ ನೋಂದೂ ಇದೇ ಪ್ರಕಾರ ಇರುತ್ತದೆ. ಹಿಂತಿರಿಗಿ ಕೊಟ್ಟ ಪ್ರತಿಯೊಂದು ರಕಮೂ ಜಮೆಯ ನೋಂದಾಗಿರುವದಲ್ಲದೆ, ಸೂಟು ಬಿಟ್ಟ ಅಥವಾ ಖಟ್ಬಾದ ಬಾಕಿಯೆಂದು ಬಿಟ್ಟು ಕೊಟ್ಟ* ಪ್ರತಿಯೊಂದು ರಕಮೂ ಜಮೆಯ ಬಾಬಾಗಿರುತ್ತದೆ, ಮತ್ತು ಕೆಲವು ಸಾರೆ ಲೆಕ್ಕವನ್ನು ಬಂದ ಮಾಡುವ ಬಗ್ಗೆ ಅವಶ್ಯವಿರುತ್ತದೆ. ತಹಕೂಬಿಟ್ಟ ಯಾವದೇ ರಕಮು ನಮೂನೆಯ ಪೂರ್ವಾರ್ಧಕ್ಕೆ ಯಾವದೇ ರೀತಿಯಿಂದ ಸಂಬಂಧಿಸುವದಿಲ್ಲ. ಕೊಡದೆ ಬಾಕಿ ಉಳಿದ ರಕಮಿನಲ್ಲಿ ಸಮಾವಿಷ್ಟವಾದ ಮೂಲ ಬಾಬುಗಳ ನಡುವಿನ ಭೇದಗಳನ್ನೂ, ಅವುಗಳು ಅಧಿಕೃತವಾಗಿರುವವೋ ಅಥವಾ ಅನಧಿಕೃತವಾಗಿರುವವೋ ಅಥವಾ ಇಲ್ಲವೋ ಎಂಬದನ್ನೂ ತಿಳಿದುಕೊಳ್ಳುವದಕ್ಕೆ ಮಾತ್ರ ಇವು ಸಹಾಯಕವಾಗುತ್ತವೆ. ಯಾವದೇ ಕಾಲದಲ್ಲಿ ಕೊಡದೆ ಬಾಕಿ ಉಳಿದ ಒಟ್ಟು ರಕಮೆಂದರೆ, ಸಾಲದ ಯಾವತ್ತು ಅಸಲಿನ ಹಾಗೂ ಅದರ ಮೇಲಾದ, ಆದರೆ ವಸೂಲು ಮಾಡದಿದ್ದ, ಬಡ್ಡಿಯ ರಕಮು ಆಗಿರುತ್ತದೆ. ಮುಂದೆ ಬರಲಿರುವ ವರ್ಷಗಳಲ್ಲಿ ಅನೇಕ ಕಂತುಗಳಿಂದ ಈ ರಕಮನ್ನು ಸಲ್ಲಿಸತಕ್ಕದ್ದಿರಬಹುದು, ಆದರೆ ಸದರಿ ಕೊಡತಕ್ಕ ರಕಮಿನ ಪೈಕಿ ಕೆಲವು ಭಾಗವು ಚಾಲೂ ವರ್ಷದಲ್ಲಿ ಸಹ ಕೊಡದೆ ಉಳಿದಿರಬಹುದು. ಇವುಗಳ ಪೈಕಿ ಕೆಲವನ್ನು ತಹಕೂಬಿಟ್ಟಿರಬಹುದು ಮತ್ತು ಇತರ ಕೆಲವು ಕಂತುಗಳು ಅನಧಿಕೃತವಾಗಿರಬಹುದು. ಈ ಮೇರೆಗೆ ಕಂತುಗಳು ಯಾವ ಯಾವ ಪ್ರಕಾರದವಿರುತ್ತವೆಂಬದನ್ನು ನಿಶ್ಚಯಿಸುವದರ ಸಲುವಾಗಿ ನಾವು ವಾರ್ಷಿಕ ಲೆಕ್ಕದಲ್ಲಿ ತಹಕೂಬಿಗಳ ಟಿಪ್ಪಣಿಗಳನ್ನಿಡುತ್ತೇವೆ.

---

* ೨೦ನೇ ಕಾನೂನನ್ನು ಹಾಗೂ ಅದರ ಮೇಲಿನ ಟಿಪ್ಪಣಿಗಳನ್ನು ನೋಡಿರಿ.

ಆ ಮೇಲೆ ನಾವು ವಾರ್ಷಿಕ ಲೆಕ್ಕದಲ್ಲಿ ತೋರಿಸಿದ ನಕ್ಕಿ ಮಾಗಣಿಯ ರಕಮಿನೊಳಗಿಂದ, ಈ ತಹಕೂಬಿಗಳನ್ನೂ ಸದರಿ ವರ್ಷದಲ್ಲಿ ಮಾಡಿದ ವಸೂಲಿಗಳನ್ನೂ (ಅ) ವಜಾ ಮಾಡುತ್ತೇವೆ. ವಸೂಲಾಗದ ಹಾಗೂ ತಹಕೂಬಿಡದಿದ್ದ ಯಾವದೇ ರಕಮಿದ್ದರೆ ಅದು ಅನಧಿಕೃತ ಬಾಬಾಗಿರುತ್ತದೆ (ಬ), ಆದರೆ, ವಸೂಲಿಗಳು ಮಾಗಣಿಯ ರಕಮಿಗಿಂತ ಹೆಚ್ಚಾದರೆ, ೭ನೇ ಆಸನದಲ್ಲಿ ಯಾವದೇ ಬಾಕಿ ಉಳಿದ ಶಿಲುಕು ಇದ್ದ ಹೊರ್ತು, ಈ ಹೆಚ್ಚುಳಿದ ರಕಮನ್ನು ಹಿಂತಿರಿಗಿ ಕೊಡತಕ್ಕದ್ದಲ್ಲ ಅಥವಾ ಹೆಚ್ಚಿಗೆ ವಸೂಲ ಮಾಡಿದ್ದೆಂದು ತಿಳಿಯತಕ್ಕದ್ದಲ್ಲ. ಇದಾದ ಬಳಿಕ, ಒಟ್ಟು ಬಾಕಿಯ ರಕಮಿನೊಳಗಿಂದ, ತಹಕೂಬಿಟ್ಟ ಹಾಗೂ ತಹಕೂಬಿಡದಿದ್ದ ಬಾಕಿ ರಕಮುಗಳನ್ನು ವಜಾಮಾಡಿದ ಬಳಿಕ ಉಳಿಯುವ ರಕಮು, ವಸೂಲ ಮಾಡತಕ್ಕ ವೇಳೆಯು ಇನ್ನೂ ಬಂದೊದಗಿದ್ದ ರಕಮಾಗಿರುತ್ತದೆ.

೭. ಸೂಟು ಕೊಡುವ ವಿಷಯದ ಅಥವಾ ತಹಕೂಬಿಡುವ ವಿಷಯದ ಅಥವಾ ವಸೂಲಾಗದ ಖಟ್ಟಾದ ಬಾಕಿಗಳೆಂದು ಬಿಟ್ಟುಕೊಡುವ ವಿಷಯದ ಹುಕುಮುಗಳು ಯಾವದೊಂದು ಪ್ರಕರಣಕ್ಕೆ ವಿಶಿಷ್ಟವಾಗಿ ಸಂಬಂಧಿಸಿರಬಹುದು, ಅಥವಾ ಎರಡು ಅಥವಾ ಹೆಚ್ಚು ಪ್ರಕರಣಗಳಿಗೆ ಲಾಗೂ ಆಗುವ ಸಾಮಾನ್ಯ ಹುಕುಮುಗಳಾಗಿರಬಹುದು. ಈ ಹುಕುಮುಗಳು ವಿಶಿಷ್ಟ ಸ್ವರೂಪದವುಗಳಿದ್ದಾಗ ಅವುಗಳನ್ನು ಸದರಿ ವಿಶಿಷ್ಟ "ಪ್ರಕರಣದೊಂದಿಗೆ" ಫೈಲು ಮಾಡಿಡಲಾಗುವದು (ಹಾಗೂ ಅವುಗಳ ಮೇಲೆ ಶರಾಗಳನ್ನು ಬರೆಯಲಾಗುವದು). ಆದರೆ ಅವು ಸಾಮಾನ್ಯವಾಗಿದ್ದರೆ, ಅವುಗಳನ್ನು ಪ್ರತಿವರ್ಷದ ಸಲುವಾಗಿರುವ ಒಂದು ಪ್ರತ್ಯೇಕ ಫೈಲಿನಲ್ಲಿಟ್ಟು ಅವುಗಳಿಗೆ ಅ, ಬ, ಕ, ಮುಂತಾದ ಅಕ್ಷರಗಳನ್ನು ಕೊಡಬೇಕು. ಆ ಮೇಲೆ ಮುಳ್ಕೀ ಲೆಕ್ಕಗಳಲ್ಲಿ (ಗ್ರಾ. ನ. ೭ಬ) ಮಾಡಲಾಗುವಂತೆ, ಇಂಥ ಪ್ರತಿಯೊಂದು ಹುಕುಮನ್ನು ಸಂಬಂಧಪಡುವ ಪ್ರತಿಯೊಂದು ಪ್ರಕರಣದ ಲೆಕ್ಕದಲ್ಲಿ (ತ. ನ. ೩) ಬರೆಯಬಹುದು.

೮. ವಾರ್ಷಿಕ ಲೆಕ್ಕ.—ಮೊದಲನೇ ಸಾರೆ ಸಾಲವನ್ನು ಕೊಟ್ಟಾಗ, ಅದನ್ನು ಹಿಂತಿರಿಗಿ ಕೊಡುವದರ ಸಲುವಾಗಿರುವ ವಾಡಿಕೆಯ ವಾರ್ಷಿಕ "ಸಾಮರ್ಥ್ಯ"ವನ್ನು ನಿಶ್ಚಯಿಸಲಾಗುವದು ಮತ್ತು ಚೌಕಶಿಯ ನಮೂನೆಯಲ್ಲಿಂದ ಟಿಪ್ಪಣಿ ಮಾಡಿಕೊಳ್ಳಲಾಗುವದು. ಆದರೆ, ಇದಾದ ನಂತರ, ಭೂಮಿಯನ್ನು ಸುಧಾರಿಸಿದ ಬಳಿಕ, ಒಂದು ವೇಳೆ, ಇನ್ನೊಂದು ಸಾಲವನ್ನು ಕೊಟ್ಟಿರಬಹುದು, ಹಾಗೂ ಆ ಬಳಿಕ (ಈ ಸಾಲವನ್ನು ಕೊಡುವದು ಜರೂರಿದ್ದಿಲ್ಲವಾದರೆ) "ಸಾಮರ್ಥ್ಯ"ವು ಬೆಳೆದಿರುತ್ತದೆಂದು ಗೃಹೀತ ಹಿಡಿಯಬಹುದು. ಇಲ್ಲವಾದರೆ, ಮೊದಲಿಗೆ ನಿಶ್ಚಯಿಸಿದ "ಸಾಮರ್ಥ್ಯ"ವು ಬಹಳೇ ಹೆಚ್ಚಾಗಿದ್ದ ಕಾರಣದಿಂದ ಅದನ್ನು ಕಡಿಮೆ ಮಾಡತಕ್ಕದ್ದೆಂದು ಕಂಡುಬರಬಹುದು. ವರ್ಷದಿಂದ ವರ್ಷಕ್ಕೆ ಇದನ್ನು (೧೦)ನೇದ್ದರಲ್ಲಿ ತೋರಿಸಲಾಗುವದು. ಯಾವದೊಂದು ವಿಶಿಷ್ಟ ವರ್ಷದ ಮಾಗಣಿಯಲ್ಲಿ, ಹೆಚ್ಚಿಗೆ ಕೂಡಿಸಿದ ಇಲ್ಲವೆ ಅದರೊಳಗಿಂದ ಕಡಿಮೆ ಮಾಡಿದ ಬಾಬುಗಳೂ ಇರಬಹುದು, ಮತ್ತು (೧೨)ನೇದ್ದರಲ್ಲಿ ಹಾಗೂ (೧೩)ನೇದ್ದರಲ್ಲಿ ನಾವು ಕಾರಣಗಳನ್ನು ಹಾಗೂ ರಕಮನ್ನು ಬರೆಯುತ್ತೇವೆ. ಬೆಳೆಯು ಚನ್ನಾಗಿ ಬಾರದಿದ್ದಾಗ, ಸಾಲಗಳನ್ನು ಸಾಮಾನ್ಯವಾಗಿ ತಹಕೂಬಿಡುವದರಿಂದ ಮಾಗಣಿಯ ರಕಮಿನಲ್ಲಿ ಕಡಿಮೆ ಬೀಳುವದು. ಸಾಲದ ಅಪವ್ಯಯ ಮಾಡಿದರೆ ಹಾಗೂ ಅದನ್ನು ಸಂಕ್ಷಿಪ್ತರೀತಿಯಿಂದ

ಕೆಲಸ ನಡಿಸಿ ವಸೂಲ ಮಾಡಿದರೆ, ಯಾವತ್ತು ಬಾಕಿಯು—ಅಸಲೂ ಬಡ್ಡಿಯೂ—ಸಲ್ಲತಕ್ಕದ್ದಾಗುತ್ತದೆ ಮತ್ತು ಇದರಿಂದ ಮಾಗಣಿಯ ರಕಮಿನಲ್ಲಿ ಒಂದು ಹೆಚ್ಚಿನ ರಕಮನ್ನು ಕೂಡಿಸಿದಂತಾಗುವದು.

೯. ಸಪ್ಟೆಂಬರ ತಿಂಗಳ ಕೊನೆಗೆ ಬಾಕಿ ಉಳಿದ ಶಿಲುಕಿಗೆ ಬಡ್ಡಿಯನ್ನು ಕೂಡಿಸಿದ ಬಳಿಕ, ಇ೩೮ ರೂಪಾಯಿಗಳ ಮೇಲಾಗಿ ಹೆಚ್ಚಿಗೆ ಕೆಲವು ಆಣೆಗಳುಳಿಯಬಹುದು. ಯಾವತ್ತು ಬಾಕಿಗಳನ್ನು ವಸೂಲ ಮಾಡಿದ ಪಕ್ಷಕ್ಕೆ. ವರ್ಷದ ಕೊನೆಯ ಶಿಲುಕು ಇ೩೮ ರೂಪಾಯಿಗಳಲ್ಲಿರುವಂತೆ ಈ ಆಣೆಗಳನ್ನು ಯಾವಾಗಲೂ (೧೧)ನೇದ್ದರಲ್ಲಿ ಅಪೂರ್ಣಾಂಕಗಳೆಂದು ಕೂಡಿಸತಕ್ಕದ್ದು. ವಿಶೇಷವಾಗಿ, ೫ ರೂಪಾಯಿಯ ಅಥವಾ ಅದಕ್ಕಿಂತ ಕಡಿಮೆಯಿರುವ ಸಣ್ಣಪುಟ್ಟ ಶಿಲುಕುಗಳನ್ನು ಮತ್ತೊಂದು ವರ್ಷಕ್ಕೆ ಮುಂದೊಯ್ಯಬಾರದು. ಬಹಳ ದೊಡ್ಡ ಸಂಖ್ಯೆಯ ಸಣ್ಣಪುಟ್ಟ ಚಾಲೂ ಲೆಕ್ಕಗಳನ್ನು ಅನಾವಶ್ಯಕವಾಗಿ ಇಟ್ಟರೆ, ಕೆಲಸವು ಬಹಳ ಬೆಳೆಯುತ್ತದೆ. ೩೧ ರೂಪಾಯಿಗಳ ಶಿಲುಕು ಇದ್ದ ಪ್ರಸಂಗದಲ್ಲಿ, ನಾವು ಈ ವರ್ಷದ ಸಲುವಾಗಿರುವ ನಮ್ಮ ಮಾಗಣಿಯನ್ನು, (ವಾರ್ಷಿಕ ಮಾಗಣಿಯನ್ನು ಕೊಡುವದಕ್ಕೆ ಸಾಲ ತೆಗೆದುಕೊಂಡವನಿಗೆ ಬಹಳೇ ಕಷ್ಟವಾಗುತ್ತಿದೆ ಎಂದು ಕಂಡುಬಂದರೆ) ಮುಂದಿನ ವರ್ಷದಲ್ಲಿ ವಸೂಲಿಯನ್ನು ತಪ್ಪದೆ ಮಾಡತಕ್ಕದ್ದಿರುವದರಿಂದ, ೧೬ ರೂಪಾಯಿಗೆ ಇಳಿಸಬಹುದು. ಯಾವದೊಂದು ಸಾಲವು ಬಹುತರವಾಗಿ ಪೂರ್ಣವಾಗಿ ಹಿಂತಿರಿಗಿ ಕೊಡಲ್ಪಟ್ಟಾಗ, ೨೨ ರೂಪಾಯಿಗಳ ಸಾಮರ್ಥ್ಯವುಳ್ಳ ಮನುಷ್ಯನ ಮೇಲೆ ರೂ. ೨೧-೬-೦ ಒಟ್ಟು. ಬಾಕಿ ಉಳಿದಿದೆಂದು ಕಂಡುಬರಬಹುದು. ಇಂಥ ಪ್ರಸಂಗದಲ್ಲಿ ಇ೩೮ ಲೆಕ್ಕವನ್ನು ಬಂದ ಮಾಡುವದಕ್ಕಾಗಿ ರೂ. ೧-೬-೦ಯಷ್ಟು ಹೆಚ್ಚಿನ ರಕಮನ್ನು ನಾವು ವಸೂಲ ಮಾಡಬೇಕಾಗುವದು. ಮೇಲಾಗಿ, ಸಪ್ಟೆಂಬರದ ಕೊನೆಗೆ ನಾವು ಕಳೆದ ವರ್ಷದ ಬಡ್ಡಿಯ ಲೆಕ್ಕವನ್ನು ಮಾಡುವಾಗ ಹಾಗೂ ಬಾಕಿ ಉಳಿದ ಯಾವತ್ತು ರಕಮನ್ನು ಲಗತು ಮುಂದಿನ ಕಂತಿನ ಕಾಲದಲ್ಲಿ ವಸೂಲು ಮಾಡಲಿಕ್ಕೆ ಬರುವದೆಂದು ನಮಗೆ ಕಂಡುಬಂದಾಗ, ಮೇಲಿನ ಉದಾಹರಣೆಯಲ್ಲಿ ತೋರಿಸಿದಂತೆ ಕಂತಿನ ತಾರೀಖಿನವರೆಗಾಗಬಹುದಾದ ಬಡ್ಡಿಯನ್ನು ನಾವು ಮಾಗಣಿಯ ರಕಮಿಗೆ ಕೂಡಿಸಬೇಕು, ಮತ್ತು ಹೀಗೆ ಮಾಡಿದರೆ, ಸಾಲಗಾರನು ಒಂದೇ ಗಂಟಿನಿಂದ ತನ್ನ ಸಾಲವನ್ನು ತೀರಿಸಲಿಕ್ಕೆ ಸಮರ್ಥನಾಗುವನು.

೧೦. ಬೆಳೆಯು ಬಹಳೇ ಚೆನ್ನಾಗಿ ಬಂದಿದ್ದರೆ, ಅಥವಾ ಅನೇಕ ಸಾರೆ ಒಳ್ಳೇ ಬೆಳೆ ಬಂದ ನಂತರ ಸಾಕಷ್ಟು ಚೆನ್ನಾಗಿ ಬೆಳೆ ಬಂದಿದ್ದರೆ, ಅಥವಾ ಕೆಲವು ಉತ್ಪನ್ನಗಳ ಬೆಲೆಯು ಬಹಳೇ ಹೆಚ್ಚಿಗಿದ್ದು, ಇಂಥ ಉತ್ಪನ್ನವು (ಉದಾ. ಹತ್ತಿ) ಸಾಲಗಾರರ ಹತ್ತರ ಮಾರಾಟದ ಸಲುವಾಗಿದ್ದರೆ, ಆ ವರ್ಷದ ಕಂತುಗಳ ರಕಮಿಗಿಂತ ಹೆಚ್ಚಿನ ಕೆಲವು ರಕಮನ್ನು ವಸೂಲ ಮಾಡತಕ್ಕದ್ದೆಂದು ಕಲೆಕ್ಟರನು ಫರ್ಮಾಯಿಸಬಹುದು. ಈ ಹೆಚ್ಚಿನ ರಕಮನ್ನು (೧೨)ನೇದ್ದರಲ್ಲಿ ಹಾಗೂ (೧೩)ನೇದ್ದರಲ್ಲಿ ತೋರಿಸಲಾಗುವದು.

೧೧. ಅನಧಿಕೃತವಾಗಿರುವ ಬಾಕಿಗಳ ಮೂಲಕ ಅಡಚಣಿಯುಂಟಾಗುತ್ತದೆ. ಮಾಮಲೇದಾರನು ಹಾಗೂ ಕುಲಕರ್ಣಿಯು ಬಾಕಿಗಳನ್ನು ಪೂರ್ಣವಾಗಿಯಾಗಲಿ ಅಂಶತಃವಾಗಿಯಾಗಲಿ ವಸೂಲ ಮಾಡುವದಕ್ಕೆ ಸಮರ್ಥರಾಗದಿದ್ದರೆ, ಮುಂದಿನ

ವರ್ಷದ ಸಲುವಾಗಿರುವ ವಾಡಿಕೆಯ ಮಾಗಣಿಯಲ್ಲಿ, ಹೀಗೆ ಸಲ್ಲತಕ್ಕದ್ದಾಗಿ ಬಾಕಿ ಉಳಿದ ಹಾಗೂ ತಹಕೂಬಿಡಲ್ಪಡದಿದ್ದ ರಕಮನ್ನು ಕೂಡಿಸಲಿಕ್ಕೆ ನಮಗೆ ಹಕ್ಕಿರುತ್ತದೆ; ಆದರೆ ಇದನ್ನು ಯಾವತ್ತು ಪ್ರಸಂಗಗಳಲ್ಲಿ ಮಾಡಲಿಕ್ಕೆ ಬರುವದಿಲ್ಲ. ಇದರ ಮೂಲಕ, ಯಾವದೊಂದು ಬೆಳೆ ಬಾರದಿದ್ದ ವರ್ಷದಲ್ಲಿ ೨೦ ರೂಪಾಯಿಗಳಷ್ಟು "ಸಾಮರ್ಥ್ಯ"ವುಳ್ಳ ಮನುಷ್ಯನ ಕಡೆಯಿಂದ ೪೦ ರೂಪಾಯಿಯ ಅಥವಾ ಅದಕ್ಕಿಂತ ಹೆಚ್ಚಿನ ಮಾಗಣಿಯನ್ನು ಮಾಡುವ ಸಂಭವವಿದೆ. ಅವನು ತನ್ನ ಸಾಲವನ್ನು ಕೊಡುವದಕ್ಕೆ ಒಂದು ಸಾರೆ ತಪ್ಪಿದ್ದರೆ, ಅವನಿಗೆ ಯಾವದೇ ಸವಲತನ್ನು ತೋರಿಸುವ ಜರೂರಿಯಿರಲಿಕ್ಕಿಲ್ಲ; ಆದರೆ ಇದು ಸಾಮಾನ್ಯವಾಗಿ ಸ್ಥಾನಿಕ ಅಧಿಕಾರಿಗಳ ಮರ್ಜಿಯ ಮೇಲೆ ಅವಲಂಬಿಸಿದ ಸಂಗತಿಯಾಗಿರುತ್ತದೆ. ಅವನು ಎರಡು ಕಂತುಗಳನ್ನು ಪೂರ್ಣವಾಗಿ ಕೊಡಬೇಕೆಂದು ಅವನಿಗೆ ಫರ್ಮಾಯಿಸುವದರ ಬದಲಾಗಿ, ಅವನು ತನ್ನ ವಾಡಿಕೆಯ ಕಂತನ್ನು ಅಥವಾ ಅದಕ್ಕಿಂತ ಒಂದಿಷ್ಟು ಹೆಚ್ಚಿನ ರಕಮನ್ನು ಕೊಡಬೇಕೆಂದು ಫರ್ಮಾಯಿಸುವದು ಹೆಚ್ಚಿಗೆ ಜಾಣತನದ್ದಾಗಬಹುದು. ಇದನ್ನು ಪ್ರತಿಯೊಂದು ಪ್ರಸಂಗದ ಮೇರೆಗೆ ನಿರ್ಣಯಿಸಬೇಕು. ಮುಂದಿನ ವರ್ಷದ ಮಾಗಣಿಯನ್ನು ಗೊತ್ತುಮಾಡುವಾಗ, ಸಾಧಾರಣವಾಗಿ, ತಹಕೂಬಿಗಳನ್ನು ಲೆಕ್ಕದಲ್ಲಿ ಹಿಡಿಯಲಾಗುವದಿಲ್ಲ. ಬಾಕಿಗಳು ಅಧಿಕೃತವಿರುವವೋ ಅಥವಾ ಅನಧಿಕೃತವಿರುವವೋ ಎಂಬದನ್ನು ನಿಶ್ಚಯಿಸುವದರ ಸಲುವಾಗಿ ಮಾತ್ರ ಈ ತಹಕೂಬಿಗಳ ಉಪಯೋಗವಾಗುತ್ತದೆ.

೧೨. ಪ್ರಾಂತ ಅಮಲದಾರನ ಅಥವಾ ಕಲೆಕ್ಟರನ ಮೇಲ್ವಿಚಾರಣೆಗೊಳಪಟ್ಟು, ಪ್ರತಿವರ್ಷದ ಮಾಗಣಿಯನ್ನು ಗೊತ್ತುಮಾಡುವದು ಮಾಮಲೇದಾರನ ಒಂದು ಎಲ್ಲಕ್ಕೂ ಹೆಚ್ಚು ಮಹತ್ವದ ಕೆಲಸವಿರುತ್ತದೆ. ತಪಾಸಣೆ ಮಾಡುವದು ಅವಶ್ಯವಿರುತ್ತದೆಂಬದನ್ನು ಸೂಚಿಸುವದಕ್ಕಾಗಿ ಉಪಯೋಗಿಸಲ್ಪಡುವ ನಿಶಾನೆಗಿಂತ ಬೇರೆಯಾಗಿದ್ದ ಒಂದು ನಿಶಾನೆಯನ್ನು ಅನಧಿಕೃತ ಬಾಕಿಗಳುಳ್ಳ ಯಾವತ್ತು ಲೆಕ್ಕಗಳಿಗೆ ಹಚ್ಚಬೇಕು, (೧೩ನೇ ಕಾನೂನಿನ ಟಿಪ್ಪಣಿಗಳು, ಫುಟಗಳು ೯೬ರಿಂದ ೯೮) ಯಾಕೆಂದರೆ, ಹೀಗೆ ಮಾಡುವದರಿಂದ, ಪ್ರತಿಯೊಂದು ಪ್ರಸಂಗದಲ್ಲಿ, ಲೆಕ್ಕದ ಸಂಬಂಧದಿಂದ ಸರಿಯಾದ ಹುಕುಮುಗಳನ್ನು ಕೊಡಲಿಕ್ಕೆ ಬರುವದು. (೧೨)ನೇದ್ದರಲ್ಲಿ ಹಾಗೂ (೧೩)ನೇದ್ದರಲ್ಲಿ ನೋಂದುಗಳನ್ನು ಸ್ವತಃ ದಾಖಲ ಮಾಡಿ ಅಲ್ಲಿ ಚಿಕ್ಕ ಸಹಿ ಮಾಡುವದು, ಈ ಹುಕುಮುಗಳನ್ನು ಕೊಡುವ ಅತ್ಯುತ್ತಮ ಮಾರ್ಗವಿರುತ್ತದೆ.

೧೩. ಪ್ರತಿವರ್ಷ ಸಪ್ಟೆಂಬರ ತಿಂಗಳ ಕೊನೆಗೆ ಬಡ್ಡಿಯನ್ನು ಕೂಡಿಸಬೇಕು. ಬಡ್ಡಿಯ ಲೆಕ್ಕವನ್ನು ಸಪ್ಟೆಂಬರ ತಿಂಗಳ ಕೊನೆಯ ತಾರೀಖಿಗಿಂತ ನಂತರದ ಯಾವದೊಂದು ತಾರೀಖಿನ ದಿವಸ ಮಾಡಿದ್ದರೂ, ಆ ಬಡ್ಡಿಯನ್ನು ಸಪ್ಟೆಂಬರ ತಿಂಗಳ ಕೊನೆಯ ತಾರೀಖಿನ ದಿವಸದ್ದೆಂದು ದಾಖಲ ಮಾಡಬೇಕು. ಸಪ್ಟೆಂಬರ ತಿಂಗಳ ಉತ್ತರಾರ್ಧದಲ್ಲಿ ಸಿಬಂದಿಯವರು ಭೂಮಿಯ ಮಹಸೂಲಿನ ಲೆಕ್ಕಗಳ ಯಾವದೇ ಕೆಲಸದಿಂದ ಮುಕ್ತರಿರಬೇಕು; ಮತ್ತು ಬಡ್ಡಿಯ ಲೆಕ್ಕಗಳನ್ನು ಸಕಾಲದಲ್ಲಿ ತಯಾರ ಮಾಡುವದಕ್ಕೆ ಬರುವಂತೆ, ಅಕ್ಟೋಬರ ೧ನೇ ತಾರೀಖಿನ ಪೂರ್ವದಲ್ಲಿ ಅವುಗಳನ್ನು ಪ್ರಾರಂಭಿಸುವದಕ್ಕೆ ತರವಾಗಿಯಿರಬೇಕು.

೧೪. ಯಾವ ಬಡ್ಡಿಯ ದರಗಳಿಂದ ಸಾಲಗಳನ್ನು ಕೊಡಲಾಗಿತ್ತೋ ಅವು ಅನೇಕ ಸಾರೆ ಬದಲಾಗಿವೆ; ೧೧ನೇ ಕಾನೂನನ್ನು ನೋಡಿರಿ. ಮೊದಲನೇ ಅತ್ಯ

ವಶ್ಯವಾದ ಸಂಗತಿಯೆಂದರೆ, ಲೆಕ್ಕದ ಮೇಲ್ಬದಿಗೆ ಬಡ್ಡಿಯ ದರವನ್ನು ಸ್ಪಷ್ಟವಾಗಿ ಬರೆಯಬೇಕು: ಮತ್ತು ಅದನ್ನು ೧೧ನೇ ಕಾನೂನಿನನ್ವಯ ಬದಲಾಯಿಸಿದಾಗ್ಗೆಲ್ಲ, ಒಂದು ದಪ್ಪವಾದ ಗೆರೆಯನ್ನು ಎಳೆಯಬೇಕು ಹಾಗೂ ಹೊಸ ದರವನ್ನು ಸ್ಪಷ್ಟವಾಗಿ ಬರೆಯಬೇಕು. ಇದಲ್ಲದೆ, ಯಾವನೊಬ್ಬ ಸಾಲ ತೆಗೆದುಕೊಂಡವನ ಹೆಸರಿನಲ್ಲಿ ಒಂದೇ ಕಾಲಕ್ಕೆ ಬೇರೆ ಬೇರೆ ಬಡ್ಡಿಯ ದರಗಳೆ ಎರಡು ಅಥವಾ ಹೆಚ್ಚಿಗೆ ಸಾಲಗಳು ಇರುವ ಸಂಭವವಿದೆ. ಇಂಥ ಸಾಲಗಳನ್ನು ಒಂದೇ ಲೆಕ್ಕದಲ್ಲಿ ಕೂಡಿಸಬಾರದು (ಮೇಲಿನ ೨ನೇ ಪ್ಯಾರಾವನ್ನು ನೋಡಿರಿ), ಆದರೆ ಇವುಗಳಿಗೆ ೧೧೯-ಅ, ೧೧೯-ಬ ಎಂದು ಮುಂತಾಗಿ ನಂಬರು ಕೊಟ್ಟು ಅವುಗಳನ್ನು ಬೇರೆಬೇರೆಯಾಗಿ ಇಡತಕ್ಕದ್ದು.

ಬಡ್ಡಿಯನ್ನು ಪ್ರತಿವರ್ಷ ಕೂಡಿಸಬೇಕು; ಆ ಮೇಲೆ ಈ ಬಡ್ಡಿಯನ್ನೊಳಗೊಂಡ ಶಿಲುಕು, ಅಕ್ಟೋಬರ ತಿಂಗಳ ೧ನೇ ತಾರೀಖಿನ ವರೆಗೆ ತಯಾರಿಸಿದ ತ. ನ. ೯ರ ಸಲುವಾಗಿ (ರೂಪಾಯಿಯ ಯಾವತ್ತು ಅಪೂರ್ಣಾಂಕಗಳನ್ನು ಬಿಟ್ಟುಬಿಟ್ಟ ತರುವಾಯ ಯಾವ ರಕಮಿನ ಮೇಲೆ ಬಡ್ಡಿಯನ್ನು ಆಕಾರಿಸಲಾಗುವದೋ ಆ ರಕಮು, ಪ್ರತಿ ಮೂರು ತಿಂಗಳ ಕೊನೆಗೆ ಬಾಕಿ ಉಳಿದ ರಕಮಿರುತ್ತದೆ) ಬೇಕಾಗುತ್ತದೆ. ಮೂರು ಮೂರು ತಿಂಗಳ ಯಾವತ್ತು ನಾಲ್ಕು ಅವಧಿಗಳ ಕೊನೆಗಿರುವ ಶಿಲುಕು ಒಂದೇ ಇದ್ದರೆ (ಸದರಿ ವರ್ಷದಲ್ಲಿ ಯಾವದೇ ವಸೂಲಿಯನ್ನು ಮಾಡದಿದ್ದರೆ), ಸದರಿ ವರ್ಷದ ಬಡ್ಡಿಯು ಮೂರು ತಿಂಗಳ ಒಂದು ಅವಧಿಯ ಬಡ್ಡಿಯ ೪ ಪಟ್ಟಿನಷ್ಟಿರುತ್ತದೆ. ಸದರಿ ಶಿಲುಕಿನಲ್ಲಿ ಹೆಚ್ಚುಕಡಿಮೆಯಾದಾಗ, ಬಡ್ಡಿಯ ಲೆಕ್ಕಮಾಡುವ ಎಲ್ಲಕ್ಕೂ ಸುಲಭವಾದ ರೀತಿಯು ಈ ಕೆಳಗಿನಂತಿದೆ:—

(೧) ಮೂರು ಮೂರು ತಿಂಗಳ ಯಾವತ್ತು ನಾಲ್ಕು ಅವಧಿಗಳ ಶಿಲುಕಿನ ಬೇರೀಜು ಮಾಡಬೇಕು (ಇವುಗಳ ಪೈಕಿ ಯಾವದಾದರೂ ಒಂದನ್ನು ಆಲಸ್ಯದ ಮೂಲಕ ಬರೆಯದಿದ್ದರೆ, ಅವುಗಳನ್ನು ಬೇರೀಜಿನಲ್ಲಿ ಕೂಡಿಸುವದಕ್ಕೆ ಮರೆಯದಂತೆ ಬಹಳ ಎಚ್ಚರಪಡಬೇಕು);

(೨) ಆ ಮೇಲೆ, ಈ ಒಟ್ಟು ರಕಮಿನ ಮೇಲೆ ಒಂದು ಮೂರು ತಿಂಗಳ ಅವಧಿಯ ಬಡ್ಡಿಯನ್ನು ಯೋಗ್ಯವಾದ ಬಡ್ಡಿಯ ಕೋಷ್ಟಕಗಳೊಳಗಿಂದ (ಕೊನೆಯಲ್ಲಿದ್ದ ಆ ದಿಂದ ಜ ದ ವರೆಗಿನ ಪರಿಶಿಷ್ಟಗಳು) ತೆಗೆಯಬೇಕು, ಮತ್ತು ಈ ಬಡ್ಡಿಯು ವರ್ಷದ ಸಲುವಾಗಿದ್ದ ಬಡ್ಡಿಯಾಗುವದು.

ಸಿಂಧದ ಬಡ್ಡಿಯ ಕಾನೂನುಗಳು ಈ ಕೆಳಗಿನಂತಿವೆ:—(೧) ಸದರಿ ಅವಧಿಯನ್ನು ಲಗತು ಮುಂದಿನ ಪೂರ್ಣ ತಿಂಗಳುಗಳ ಸಂಖ್ಯೆಯೆಂದು ಹಿಡಿಯಬೇಕು; (೨) ಬಂಡವಾಳವನ್ನು ಲಗತು ಮುಂದಿನ ಪೂರ್ಣ ರೂಪಾಯಿಗಳ ಸಂಖ್ಯೆಯೆಂದು ಹಿಡಿಯಬೇಕು.

೧೫. ಯಾವದೇ ಪರಿಸ್ಥಿತಿಯಲ್ಲಿ, ಸಪ್ಟೆಂಬರ ತಿಂಗಳ ಕೊನೆಯಿಂದ ನಿಜವಾಗಿ ಬಡ್ಡಿಯನ್ನು ಖರ್ಚು ಹಾಕಿದ ದಿವಸದ ನಡುವೆ, ತ. ನ. ೩ರಲ್ಲಿ ಯಾವದೊಂದು ಬಾಬನ್ನು ಜಮಾ ಮಾಡಬೇಕಾದರೆ ಅಥವಾ ಖರ್ಚು ಹಾಕಬೇಕಾದರೆ, ಹೀಗೆ ಎರಡನೇ ನೋಂದನ್ನು ಮಾಡುವ ಮುಂಚೆ ಬಡ್ಡಿಯ ಲೆಕ್ಕಮಾಡಿ ಅದನ್ನು ಖರ್ಚು ಹಾಕಬೇಕು. ಆದರೆ ಇಂಥ ಪ್ರಸಂಗವು ಬಹಳೇ ವಿರಳ. ಆದರೆ ಸೂಟು ಬಿಟ್ಟದ್ದರ

ಸಲುವಾಗಿ ಅಥವಾ ಖಟ್ಲಾದ ಬಾಕಿಯೆಂದು ಬಿಟ್ಟುಕೊಟ್ಟವ್ವರ ಸಲುವಾಗಿ ಪೂರ್ಣ ಅಧಿಕಾರವನ್ನು (೨)ನೇಪ್ರರಲ್ಲಿ ಬರೆಯಬೇಕು.

೧೬. ಹೆಚ್ಚಿಗೆ ವಸೂಲು ಮಾಡೋಣ—ಯಾವ ರಕಮನ್ನು ವಸೂಲ ಮಾಡ ತಕ್ಕದ್ದೆಂದು ಬರೆಯಲಾಗಿದೆಯೋ ಅದಕ್ಕಿಂತ ಯಾವದೇ ಹೆಚ್ಚಿನ ರಕಮನ್ನು ಕುಲ ಕರ್ಣಿಯು ಎಂದಿಗೂ ವಸೂಲ ಮಾಡತಕ್ಕದ್ದಲ್ಲ. ಇದು ಮೊದಲನೇ ಸಂರಕ್ಷಣೆ ಯಾಗಿರುತ್ತದೆ. ಆದರೆ ತಪ್ಪಾಗಿ ಅಥವಾ ಅಕಸ್ಮಾತ್ತಾಗಿ ಬಹಳೇ ಹೆಚ್ಚಿಗೆ ವಸೂಲ ಮಾಡಿದರೆ, ಚಲನವು ತಾಲೂಕ ಕಚೇರಿಗೆ ಬಂದು ಮುಟ್ಟಿದಾಗ ಈ ಸಂಗತಿಯ ಟೀಪು ಮಾಡಬೇಕು. ಆ ಮೇಲೆ ಹೆಚ್ಚಿನ ರಕಮನ್ನು ಕೂಡಲೇ ಹಿಂತಿರಿಗಿ ಕೊಡ ಬೇಕು, ಇಲ್ಲವೆ, ಕೂಡಲೇ ಹಿಂತಿರಿಗಿ ಕೊಡುವವರ ಸಲುವಾಗಿ ಮಹಸೂಲಿನ ಅಮಾ ನತುಗಳಲ್ಲಿ ಜಮಾ ಮಾಡಬೇಕು; ಇಲ್ಲವೆ, ಸಂಬಂಧಪಟ್ಟ ಪಕ್ಷಕಾರನು ಹಾಗೆ ಇಚ್ಛಿಸಿದರೆ, ಸದರಿ ಹೆಚ್ಚಿನ ರಕಮನ್ನು ಭೂಮಿಯ ಮಹಸೂಲೆಂದು ಹೆಚ್ಚಿಗೆ ವಸೂಲ ಮಾಡಿದ ರಕಮೆಂದು ತಿಳಿದು, ಮುಂದಿನ ಕಾಲದ ಭೂಮಿಯ ಮಹಸೂಲಿನ ಬಾಕಿ ಗಳನ್ನು ಕೊಡುವವರ ಸಲುವಾಗಿ ಅವನ ಹೆಸರಿನಲ್ಲಿ ಜಮಾ ಹಿಡಿಯಬಹುದು. ಇದು ಎರಡನೇ ಸಂರಕ್ಷಣೆಯಿರುತ್ತದೆ, ಆದರೆ, ಇವೆರಡರ ಪೈಕಿ ಯಾವದೇ ಉಪಾ ಯವು ನಿರರ್ಥಕವಾಗಿರುವದೆಂದು ಕಂಡುಬಂದರೆ, ಹಾಗೂ ರಕಮನ್ನು ಹೆಚ್ಚಿಗೆ ವಸೂಲ ಮಾಡಿ ಅದನ್ನು ಲೆಕ್ಕದಲ್ಲಿ ಸಿಜವಾಗಿ ಜಮಾ ಮಾಡಿದರೆ ಮತ್ತು ಈ ಸಂಗ ತಿಯು ಅನಂತರ ಗೊತ್ತಾದರೆ, ಈ ಕೆಳಗಿನಂಥ ಎರಡು ಪ್ರಸಂಗಗಳು ಉದ್ಭವಿಸ ಬಹುದು :—

(ಅ) ಸದರಿ ರಕಮು ಎರಡು ಆಣೆಗಳಿಗಿಂತ ಕಡಿಮೆಯಿದ್ದರೆ, ಅದನ್ನು ಹಿಂತಿರಿಗಿ ಕೊಡಬಾರದು, ಆದರೆ ಸಾಲ ತೆಗೆದುಕೊಂಡವನ ಲೆಕ್ಕದಲ್ಲಿಯ ಬಡ್ಡಿಯ ಮಾಗಣಿಯನ್ನು ಹೊಸತಾಗಿ ಖರ್ಚು ಹಾಕಿ ಈ ರಕಮಿನಿಂದ ಹೆಚ್ಚಿಸ ಬೇಕು, ಮತ್ತು ಹೆಚ್ಚಿನ ರಕಮನ್ನು ಬಡ್ಡಿಯ ಲೆಕ್ಕಕ್ಕೆ ಜಮಾ ಹಿಡಿಯ ಬೇಕು.

(ಬ) ಸದರಿ ರಕಮು ಎರಡು ಆಣೆಗಳಿಗಿಂತ ಕಡಿಮೆಯಿಲ್ಲದಿದ್ದರೆ; ಬಡ್ಡಿಯ ಲೆಕ್ಕ ದಲ್ಲಿ ಹೆಚ್ಚಿಗೆ ರಕಮನ್ನು ಜಮಾ ಹಿಡಿದಿದ್ದರೆ ಮತ್ತು ಸಂಬಂಧಪಡುವ ಮನುಷ್ಯನ ಕಡೆಯಿಂದ ಬಡ್ಡಿಯು ಬರತಕ್ಕದ್ದಿದ್ದರೆ, ಜಮಾ ಹಿಡಿದದ್ದನ್ನು ಹಾಗೆಯೇ ಇಡಬೇಕು, ಹಾಗೂ ಹಿಂತಿರಿಗಿ ಕೊಡುವ ಅವಶ್ಯಕತೆಯಿರುವ ದಿಲ್ಲ. ಬಡ್ಡಿಯ ವಸೂಲಿಯಲ್ಲಿ ಹೆಚ್ಚಿಗೆ ಕೂಡಿಸಿದ ಯಾವದೇ ರಕಮು ತಾನಾಗಿ ಬಡ್ಡಿಯ ಮಾಗಣಿಯನ್ನು ಹೆಚ್ಚಿಸುತ್ತದೆ. ಯಾವದೇ ಬಡ್ಡಿಯು ಸಲ್ಲಬೇಕಾಗಿರದಿದ್ದರೆ, ಸದರಿ ಜಮಾ ಹಿಡಿದ ಬಾಬನ್ನು ಅಸಲಿನ ಲೆಕ್ಕಕ್ಕೆ "ಸ್ವೇಚ್ಛೆಯಿಂದ ಮಾಗಣಿಗಿಂತ ಹೆಚ್ಚಿಗೆ ಕೊಟ್ಟದ್ದೆಂದು" ವರ್ಗಾಯಿಸ ಬೇಕು. ಆದರೆ, ಹೆಚ್ಚಿಗೆ ವಸೂಲ ಮಾಡಿದ ರಕಮಿಗೆ ಸರಿಯಾಗುವಷ್ಟು ಅಸಲು ಸದರಿ ಸಾಲ ತೆಗೆದುಕೊಂಡವನಿಂದ ಸಲ್ಲತಕ್ಕದ್ದಿರದಿದ್ದರೆ, ಈ ಹೆಚ್ಚಿನ ರಕಮನ್ನು ಹಿಂತಿರಿಗಿ ಕೊಡತಕ್ಕದ್ದು. ಇದೇ ಪ್ರಕಾರ, ಅದನ್ನು ಅಸಲಿನ ಬಾಕಿಗೆ ವರ್ಗಾಯಿಸಿದ ನಂತರ ಸಾಲ ತೆಗೆದುಕೊಂಡವನು ಆ ರಕಮನ್ನು, ಅದನ್ನು ಕೊಡುವಾಗ ಅವನಿಗೆ ಬಹಳೇ ತೊಂದರೆಯಾಧ್ದ

ರಿಂದ, ತನಗೆ ಹಿಂತಿರಿಗಿ ಕೊಡಬೇಕೆಂದು ವಿನಂತಿ ಮಾಡಿದರೆ, ಆ ಯಾವತ್ತು ಹೆಚ್ಚಿನ ರಕಮನ್ನು ಹಿಂತಿರಿಗಿ ಕೊಡಬಹುದು. ಆದರೆ, ಸಾಮಾನ್ಯವಾಗಿ, ಆ ರಕಮನ್ನು ಹಾಗೆಯೇ ಉಳಿಯಗೊಟ್ಟು ಸಾಲ ತೆಗೆದುಕೊಂಡವನು ತನ್ನ ಬಾಕಿಯನ್ನೂ ಬಡ್ಡಿಯ ಆಕಾರಣೆಯನ್ನೂ ಕಡಿಮೆ ಮಾಡುವದರಿಂದ ಅವನಿಗೆ ಫಾಯದೆಯಾಗುತ್ತದೆ.

(ಕ) ಪಕ್ಷಕಾರನು ಟ್ರೆಝರಿಯಲ್ಲಿ ಹಾಜರಾದರೆ, ಅವನಿಗೆ ಹಿಂತಿರಿಗಿ ಕೊಡುವ ರಕಮನ್ನು ವಾಡಿಕೆಯಾಗಿ ನಗದಾಗಿ ಕೊಡಲಾಗುತ್ತದೆ; ಆದರೆ ಮೂರು ಆಣೆಗಳಿಗಿಂತ ಕಡಿಮೆಯಲ್ಲದ ಯಾವದೇ ರಕಮನ್ನು ಮನಿಯಾರ್ಡರಿನಿಂದಲೂ ಹಿಂತಿರಿಗಿ ಕೊಡಬಹುದು; ಇದನ್ನು, ಮಾಮಲೇದಾರನು, ೫೦ ರೂಪಾಯಿಗಳ ವರೆಗೆ ತನ್ನ ಸ್ವಂತದ ಅಧಿಕಾರದಿಂದ ಹಾಗೂ ಹೆಚ್ಚಿನ ರಕಮಿನ ಬಾಬತಿನಲ್ಲಿ ಪ್ರಾಂತ ಅಮಲದಾರನ ಮಂಜೂರಿ ಪಡೆದು, ಮಾಡಬಹುದು (ಆರ್. ೭೦೦೧-೧೨), (ಆರ್. ೧೪೬೯—೧೭-೯-೨೪).

೧೭. (೧) ಈ ಕಾನೂನುಗಳ ಪರಿಣಾಮವೇನೆಂದರೆ, ಹೆಚ್ಚಿಸಿದ ಬಡ್ಡಿಯ ಮಾಗಣಿಯಿಂದ ಸರಿಗೊಳಿಸಲ್ಪಟ್ಟ ಸಣ್ಣಪುಟ್ಟ ರಕಮುಗಳ ಹೊರ್ತಾಗಿ, ಬಡ್ಡಿಯೆಂದು ಯಾವದೇ ರಕಮನ್ನು ಹೆಚ್ಚಿಗೆ ವಸೂಲ ಮಾಡಬಾರದು. ನಿಜವಾಗಿ ಸ್ವೇಚ್ಛೆಯಿಂದ ಕೊಡದಿದ್ದಾಗ್ಯೂ ತಪ್ಪಿನಿಂದ ಕೊಟ್ಟ ಯಾವತ್ತು ಹೆಚ್ಚಿನ ರಕಮುಗಳನ್ನು "ಸ್ವೇಚ್ಛೆಯಿಂದ" ಕೊಟ್ಟಂಥವುಗಳೆಂದು ತಿಳಿದ ಹೊರ್ತು, ಅಸಲೆಂದು ಯಾವದೇ ರಕಮನ್ನು ಹೆಚ್ಚಿಗೆ ವಸೂಲ ಮಾಡಬಾರದು. ಈ ಕಾರಣದ ಬಗ್ಗೆ, ಹಿಂತಿರಿಗಿ ಕೊಟ್ಟ ಹಾಗೂ ಹಿಂತಿರಿಗಿ ಕೊಡಬೇಕಾಗಿದ್ದ ಇಂಥ ಯಾವತ್ತು ಹೆಚ್ಚಿಗೆ ವಸೂಲು ಮಾಡಿದ ರಕಮುಗಳನ್ನು ಅರ್ಧವಾರ್ಷಿಕ ಲೆಕ್ಕದಲ್ಲಿ ತೋರಿಸುವ ಬಗ್ಗೆ ಇದ್ದ ಹಳೇ ವ್ಯವಸ್ಥೆಗಳು ಈಗ ಮಾಯವಾಗಿವೆ.

(೨) <u>ಸ್ವೇಚ್ಛೆಯಿಂದ ಕೊಟ್ಟ ಹೆಚ್ಚಿನ ರಕಮು</u> ಅಂದರೆ, ಯಾವದೊಂದು ವರ್ಷದ ಸಲುವಾಗಿ ವಸೂಲ ಮಾಡಬೇಕೆಂದು ಠರಾಯಿಸಿದ ಮಾಗಣಿಯ ರಕಮಿಗಿಂತ ಹೆಚ್ಚಾಗಿದ್ದು, ಸಾಲ ತೆಗೆದುಕೊಳ್ಳುವವನ ಯಾವತ್ತು ಬಾಕಿಗಳಿಗಿಂತ ಕಡಿಮೆಯಾದ ರಕಮು ಅವನಿಂದ ಕೊಡಲ್ಪಟ್ಟದ್ದರೆ ಅದು ಎಂದು ಅರ್ಥವಾಗುತ್ತದೆ. ಹೆಚ್ಚಿಗೆ ವಸೂಲ ಮಾಡಿದ ರಕಮಿನೊಳಗಿಂದ ಮೂಲತಃ ಉದ್ಭವಿಸಿರಬಹುದಾಗಿದ್ದು, ಸಾಲ ತಕ್ಕೊಂಡವನ ಸಮ್ಮತಿಯಿಂದ ಹೆಚ್ಚಿನ ರಕಮೊಂದು ತಿಳಿಯಲ್ಪಟ್ಟದ್ದರೂ, ಹೀಗೆ ವಸೂಲ ಮಾಡಿದ ರಕಮುಗಳು, ಹೆಚ್ಚಿಗೆ ವಸೂಲ ಮಾಡಿದ ರಕಮುಗಳಾಗುವದಿಲ್ಲ, ಯಾಕಂದರೆ, ಇವುಗಳ ಬಗ್ಗೆ ಪುಸ್ತಕಗಳಲ್ಲಿ ನಿಜವಾದ ಮಾಗಣಿಯಿರುತ್ತದೆ. ಸಲ್ಲತಕ್ಕದ್ದಾದ ಆದರೆ ಕೊಡದಿದ್ದ ಮಾಗಣಿಗಳ ತಿದ್ದಲ್ಪಟ್ಟ ರಕಮನ್ನು ಗೊತ್ತುಮಾಡುವ ಕಾರಣದಿಂದ ಈ ಹೆಚ್ಚಿಗೆ ಕೊಟ್ಟ ರಕಮುಗಳನ್ನು ಅರ್ಧವಾರ್ಷಿಕ ಪತ್ರದಲ್ಲಿ ತೋರಿಸಲಾಗುತ್ತದೆ.

೧೮. ಯಾವದೊಂದು ಸಾಲವು ಖಟ್ಟಾದ ಬಾಕಿಯಿರುತ್ತದೆಂದು ತಿಳಿದು ಅದನ್ನು ಬಿಟ್ಟುಕೊಟ್ಟು ಅದರ ಲೆಕ್ಕವನ್ನು ಬಂದ ಮಾಡಿದಾಗ್ಯೂ, ಬಾಂಡನ್ನೂ ಲೆಕ್ಕವನ್ನೂ ಬಹಳ ಅವಧಿಯ ವರೆಗೆ ಕಾದಿಡತಕ್ಕದ್ದು, ಮತ್ತು ಯಾವದೇ ರಕಮು

ಪ್ರತ್ಯಕ್ಷವಾಗಿಯಾಗಲೀ ಅಪ್ರತ್ಯಕ್ಷವಾಗಿಯಾಗಲೀ ವಸೂಲಾಗುತ್ತದೆಂದು ಕಂಡು ಬಂದರೆ, ಆ ವಸೂಲಾಗದ ರಕಮನ್ನು ತಗಾಯಿ ಲೆಕ್ಕದಲ್ಲಿ ಜಮಾ ಮಾಡಬೇಕು ಮತ್ತು ವಸೂಲಾಗದ ಸಾಲಗಳ ಲೆಕ್ಕದಲ್ಲಿ ಬಿಟ್ಟುಕೊಟ್ಟದ್ದೆಂದು ಕೀಳದು ಹಾಕಿದ ಖರ್ಚನ್ನು ತಿರುವು ಮುರುವು ಮಾಡಬೇಕು. (ಅಡಕತೆಯ ನಮೂನೆ ೩, ೪ನೇ ಬಾಬು, ಘಟಿ ೨೬೪) ಇಂಥ ವಸೂಲಿಯನ್ನು ಅಧಿಕ ಮತ್ತು ವಜಾ ಯಾದಿಯಲ್ಲಿ ಜಮಾ ಹಿಡಿಯತಕ್ಕದ್ದಲ್ಲ, ಯಾಕೆಂದರೆ, ಸೂಟು ಬಿಟ್ಟ ಅಥವಾ ಖಟ್ಟಾವ ಬಾಕಿ ಯೆಂದು ಬಿಟ್ಟುಕೊಟ್ಟ ಅದನ್ನು ಕೊನೆಯದಾಗಿ ಸರಿಗೊಳಿಸಲಾಗಿದೆ. ಅವರ ಪೂರ್ಣ ತಪಶೀಲುಗಳೊಂದಿಗೆ ಇದನ್ನು ಪರಭಾರೆಯಾಗಿ ದಿನವಹಿಯಲ್ಲಿ ಜಮಾ ಹಿಡಿಯಬೇಕು ಹಾಗೂ ಸಾಲ ತೆಗೆದುಕೊಂಡವನ ಖಾತೆಯ ಕೆಳಗೆ ಅದರ ಟಿಪ್ಪಣಿ ಮಾಡಬೇಕು. ಅಸಲಿನ ಖಾತೆಯ ಖರ್ಚಿನ ಬಾಜುವನ್ನು ಬಂದ ಮಾಡಿದ್ದರಿಂದ ಖಟ್ಟಾವ ಬಾಕಿಯೆಂದು ಬಿಟ್ಟುಕೊಟ್ಟ ರಕಮುಗಳನ್ನು ಯಾವ ತಗಾಯಿ ಬಡ್ಡಿಯ ಲೆಕ್ಕದಲ್ಲಿ ಖರ್ಚು ಹಾಕಿರುತ್ತದೋ ಆ ಲೆಕ್ಕದಲ್ಲಿ ಇದನ್ನು ಜಮಾ ಮಾಡಬೇಕು. ಖಟ್ಟಾವ ಬಾಕಿಯೆಂದು ತಿಳಿದು ಬಿಟ್ಟುಕೊಟ್ಟ ಹೀಗೆ ಬಂದು ಮಾಡಿದ ಖಾತೆಗಳ ಪ್ರಕರಣಗಳ ಒಂದು ವಿಶಿಷ್ಟ ಫೈಲನ್ನು ಸುಮಾರು ೩೦ ವರ್ಷಗಳ ವರೆಗೆ ಇಡಬೇಕು.

೧೯. ಸದರಿ ಭೂಮಿಯನ್ನು ಸರಕಾರೀ ಬೀಳುಭೂಮಿಯೆಂದು ಅಥವಾ ಸರಕಾರ ದವರು ಕೊಂಡುಕೊಂಡ ಭೂಮಿಯೆಂದು ದಾಖಲ ಮಾಡಿದ್ದರೆ, ಅನಂತರದ ವರ್ಷ ಗಳಲ್ಲಿ ಸದರಿ ಭೂಮಿಯ ಮಾರಾಟದಿಂದ ಬರುವ ರಕಮನ್ನು, ಅದು, ಯಾವ ತಾರಣದ ಮೇಲಿಂದ ಸಾಲವನ್ನು ಕೊಟ್ಟಿತ್ತೋ ಆ ತಾರಣದ ಬೆಲೆಯಿಂದ ಬಂದ ರಕಮಿದ್ದಾಗ್ಯೂ, ಭೂಮಿಯ ಮಹಸೂಲಿನ ಲೆಕ್ಕಕ್ಕೆ ಜಮಾ ಮಾಡಬೇಕಲ್ಲದೆ ತಗಾಯಿ ಲೆಕ್ಕಕ್ಕೆ ಜಮಾ ಮಾಡತಕ್ಕದ್ದಲ್ಲ.

೨೦. ವಿಶಿಷ್ಟ "ದುಷ್ಕಾಳ, ಸಣ್ಣ ಸಾಲಗಳು" ೩ನೇ ನಮೂನೆಯ ಬದಲಾ ವಣೆ.

ದುಷ್ಕಾಳದಲ್ಲಿ ಅಥವಾ ಇದೇ ಪ್ರಕಾರದ ಜರೂರಿಯ ಕಾಲದಲ್ಲಿ, ಮೂರು ವರ್ಷಗಳಿಗೆ ಮೀರದ ಸಣ್ಣ ಅವಧಿಗಳ ಬಗ್ಗೆ ಅನೇಕ ಸಣ್ಣಪುಟ್ಟ ರಕಮಿನ ಹೊಲ ಮಾಡುವವರ ಸಾಲಗಳನ್ನು ಕೊಡಲಾಗುತ್ತದೆ. ಈ ಸಾಲಗಳನ್ನು, ಸಾಮಾನ್ಯ ವಾಗಿ ಒಂದೆರಡು ಕಂತುಗಳಿಂದ ವಸೂಲ ಮಾಡಲಾಗುತ್ತದೆ. ಯಾವನೊಬ್ಬ ಸಾಲ ತೆಗೆದುಕೊಂಡವನ ಹೆಸರಿನಲ್ಲಿ, ತ. ನ. ೩ರಲ್ಲಿ ಯಾವದೇ ಲೆಕ್ಕವು ಚಾಲೂ ಇಲ್ಲದಿದ್ದರೆ, ಹಾಗೂ ಅವನು ಇಂಥ ಸಣ್ಣ ರಕಮಿನ ಸಾಲವನ್ನು ತಕ್ಕೊಂಡರೆ ಮತ್ತು ಅವನ "ಸಾಮರ್ಥ್ಯದ" ಬಗ್ಗೆ ಯಾವದೇ ಪ್ರಯಾಸದ ಲೆಕ್ಕ ಮಾಡಲಾಗದೆ ಅದನ್ನು ಮೂರು ವರ್ಷಗಳ ಪರಾಕಾಷ್ಠೆಯ ಅವಧಿಯಲ್ಲಿ ವಸೂಲ ಮಾಡಲಿಕ್ಕೆ ಬರುತ್ತಿದ್ದರೆ, ತ. ನ. ೩ರಲ್ಲಿ ಇಂಥ ಸಾಲ ತೆಗೆದುಕೊಳ್ಳುವ ಪ್ರತಿಯೊಬ್ಬನ ಸಲುವಾಗಿ ಒಂದು ಹೊಸ ಲೆಕ್ಕವನ್ನು ಪ್ರಾರಂಭಿಸುವ ಕೆಲಸವು ಬಹಳೇ ಪ್ರಯಾಸದ್ದಿರುತ್ತದೆ. ನಹಿಗಾಂವ ಗ್ರಾಮದಲ್ಲಿ ಒದಗಿದ ಸನ್ ೧೯೧೮ನೇ ಇಸವಿಯ ದುಷ್ಕಾಳದಲ್ಲಿ, ೩ ಜನರು, ಬೀಜದ ಸಲುವಾಗಿ ಪ್ರತ್ಯೇಕವಾಗಿ, ಸನ್ ೧೯೧೯ನೇ ಹಾಗೂ ಸನ್ ೧೯೨೦ನೇ ಇಸವಿಯ ಡಿಸೆಂಬರ ತಿಂಗಳಲ್ಲಿ ಹಿಂತಿರಿಗಿ ಕೊಡತಕ್ಕ

೨೦ ರೂಪಾಯಿಗಳ ಸಾಲಗಳನ್ನು ಸನ್ ೧೯೧೯ನೇ ಇಸವಿಯ ಜೂನ ತಿಂಗಳಲ್ಲಿ ತಕ್ಕೊಂಡರೆಂದು ತಿಳಿಯೋಣ :—

| — | ಸಾಲದ ರಕಮು. | ತಾರೀಖು. | ಸನ್ ೧೯೧೯ನೇ ಇಸವಿಯ ಸಪ್ಟಂಬರ ತಿಂಗಳ ೩೦ನೇ ತಾರೀಖಿನ ದಿವಸದ ಬಾಕಿ. | ಜಮಾ ಮಾಡಲಾದ ರಕಮು + ಹಾಗೂ ಖರ್ಚು ಹಾಕಿದ ರಕಮು—ತಾರೀಖುಗಳ ಸಹಿತವಾಗಿ. |
|---|---|---|---|---|
| | ರೂ. | | | ರೂ. ಆ. ಪೈ. |
| ೧. ಭಿವಾ ತುಕಾರಾವ ಭೋರ್ಡೆ. | ೨೦ | ೩ನೇ ಜೂನ ಸನ್ ೧೯೧೯ನೇ ಇಸವಿ. | ೧ನೇ ನಂಬರಿನ | ಲೆಕ್ಕದಲ್ಲಿ ಬರುತ್ತದೆ. |
| ೨. ಗೋಪಾಳ ಅಣ್ಣಾಜಿ ಶಿಂದೆ. | ೨೦ | ಸದರ .... | ........ | ........ |
| ೩. ಮಹಾದು ಭಿಕಾ ಮಹಾರ. | ೨೦ | ಸದರ .... | ೨೦ | + ೦ ೧೨ ೦ ಇಲ್ಲ —೧೦ ೦ ೦ (೨೦ನೇ ಡಿಸೆಂಬರ ಸನ್ ೧೯೧೯ನೇ ಇಸವಿ.) |

| — | ಸನ್ ೧೯೨೦ ನೇ ಇಸವಿಯ ಮಾರ್ಚ ತಿಂಗಳ ೩೧ನೇ ತಾರೀಖಿನ ದಿವಸದ ಶಿಲುಕು. | ಜಮಾ ಹಾಗೂ ಖರ್ಚು, ತಾರೀಖುಗಳ ಸಹಿತವಾಗಿ. | ೩೦ನೇ ಸಪ್ಟೆಂಬರ ಸನ್ ೧೯೨೦ನೇ ತಾರೀಖಿನ ಶಿಲುಕು, ತಾರೀಖುಗಳ ಸಹಿತವಾಗಿ. | ಜಮಾ ಹಾಗೂ ಖರ್ಚು, ತಾರೀಖುಗಳ ಸಹಿತವಾಗಿ. | ೩೧ನೇ ಮಾರ್ಚ ಸನ್ ೧೯೨೧ ನೇ ದಿವಸದ ಶಿಲುಕು. |
|---|---|---|---|---|---|
| | ರೂ. ಆ. ಪೈ. | ರೂ. | ರೂ. ಆ. ಪೈ | ರೂ. ಆ. ಪೈ. | ರೂ. |
| ೧. ಭಿವಾ ತುಕಾರಾಮ ಭೋರ್ಡೆ. | .... | .... | .... | .... | .... |
| ೨. ಗೋಪಾಳ ಅಣ್ಣಾಜಿ ಶಿಂದೆ. | .... | .... | .... | .... | .... |
| ೩. ಮಹಾದು ಭಿಕಾಮಹಾರ. | ೧೦ ೧೨ ೦ | .... | ೧೦ ೧೨ ೦ | + ೦ ೧೨ ೦<br>ಇಲ್ಲ<br>– ೧೦ ೧೨ ೦ | ಇಲ್ಲ |

ಮೇಲೆ ಮೂರೇ ಹೆಸರುಗಳನ್ನು ಕೊಟ್ಟು, ಒಬ್ಬನೇ ಮನುಷ್ಯನ ಸಂಬಂಧದಿಂದ ಅಂಕೆಗಳನ್ನು ತುಂಬಿದ್ದರೂ, ಯಾವತ್ತು ಸಣ್ಣ ಅವಧಿಗಳ ಸಾಲಗಳ ಸಲುವಾಗಿ, ಯಾವದೊಂದು ಗ್ರಾಮದಲ್ಲಿ ಒಂದೇ ಹಂಗಾಮಿನಲ್ಲಿ ಅನೇಕ ಸಾಲ ತೆಗೆದುಕೊಂಡವರಿದ್ದಾಗ (೧೦ಕ್ಕಿಂತ ಹೆಚ್ಚಿಗೆ), ಈ ತರದ ಪರಿಶಿಷ್ಟವನ್ನು ಸಾಮಾನ್ಯವಾಗಿ ಉಪಯೋಗಿಸಬೇಕು. ತ. ನ. ೪ (೫ ಹಾಗೂ ೬) ಹಾಗೂ ೯ ಇವುಗಳನ್ನು ಬರೆಯುವಾಗ, ಪರಿಶಿಷ್ಟದಲ್ಲಿರುವ ಜನರ ಸಲುವಾಗಿ (ಅಂದರೆ, ಚಾಲೂ ಲೆಕ್ಕವುಳ್ಳ ೧ನೇ ನಂಬರಿನವನನ್ನು ಹೊರ್ತುಪಡಿಸಿರುತ್ತದೆ, ಯಾಕೆಂದರೆ, ಅವನ ಲೆಕ್ಕವು ವಾಡಿಕೆಯ ರೀತಿಯಿಂದ ಬರೆಯಲ್ಪಡುವದು) ತ. ನ. ೩ರಲ್ಲಿ ಖಾತೆಯ ನಂಬರುಗಳನ್ನು ಕೊಡುವದರ ಬದಲಾಗಿ, ತಪಶೀಲವಾರಾಗಿ ಹೆಸರುಗಳನ್ನು ಕೊಟ್ಟಿದ್ದಾಗ (ತ. ನ. ೪, ೫ ಹಾಗೂ ೬ ಇವುಗಳಲ್ಲಿದ್ದಂತೆ) ಪರಿಶಿಷ್ಟ ೧ (೧), ೧ (೨), ೧ (೩) ಎಂತಲೂ, ತ. ನ. ೯ರಲ್ಲಿಯಂತೆ ಬೇರೀಜು ಮಾತ್ರ ಬೇಕಾದಾಗ ಪರಿಶಿಷ್ಟ (೧) (ಬೇರೀಜು) ಎಂತಲೂ ಬರೆಯತಕ್ಕದ್ದು. ಠರಾಯಿಸಿದ ಶರ್ತುಗಳು ಪಾಲಿಸಲ್ಪಟ್ಟಾಗ ಮಾತ್ರ ಈ ಯೋಜನೆಯನ್ನು ಸ್ವೀಕರಿಸಬೇಕು; ದೊಡ್ಡ ರಕಮಿನ ದೀರ್ಘಾವಧಿಯ ಸಾಲಗಳ ಸಲುವಾಗಿ ಅಥವಾ ತ. ನ. ೩ರಲ್ಲಿಯ ತಪಶೀಲವಾರ ಲೆಕ್ಕಗಳ ಬದಲಾಗಿ ಸಾಮಾನ್ಯವಾಗಿ ಈ ಯೋಜನೆಯನ್ನು ಉಪಯೋಗಿಸಿದರೆ ಬಹಳ ಗೊಂದಲವಾಗುವದು ಮತ್ತು ತಗಾಯಿ ಲೆಕ್ಕಗಳನ್ನಿಡುವದು ಅಶಕ್ಯವಾಗುವದು.

ತಗಾಯಿ

ಗ್ರಾಮ ನಹಿಗಾಂವ್ಹ

ಹಪ್ತೆಯ ತಾರೀಖು—೧ನೇ ಎಪ್ರಿಲ

| ಅನುಕ್ರಮ ನಂಬರು. | ಖಾತೆ ನಂಬರು. | ತಗಾಯಿ ತಕ್ಕೊಂಡವನ ಹೆಸರು. | ೧ನೇ ಅಕ್ಟೋಬರ ದಿವಸ ಬರತಕ್ಕ ಬಾಕಿ. | |
|---|---|---|---|---|
| ೧ | ೨ | ೩ | ೪ | |
| | | | ರೂ. | ಆ. |
| ೧ | ೧ | ಭಿವಾ ತುಕಾರಾಮ ಭೋರ್ಡೆ .... | ೨೪೨ | ೧೪ |
| ೨ | ೨೨ | ಸಾಯಿ ಕೋವಸ್ ಸಖಾರಾಮ.... | ೪೯ | ೧೫ |
| ೩ | ೩೪ | ಅನಂತ ಸಖಾರಾಮ .... | ೪೯ | ೪ |
| ೪ | ೫೦ | ತುಕಾರಾಮ ಗೋವಿಂದ ಶಿಂದೆ.... | ೧೮೮ | ೭ |

## ನಮೂನೆ ೪.

ಸನ್ ೧೯೧೨-೧೩ರ ಸಲುವಾಗಿ.

ಸನ್ ೧೯೧೩ನೇ ಇಸವಿ

| ಚಾಲೂ ವರ್ಷದಲ್ಲಿ ವಸೂಲ ಮಾಡತಕ್ಕ ರಕಮು. | ವಸೂಲ ಬಂದ | | ಶರಾ. |
|---|---|---|---|
| | ತಾರೀಖು | ರಕಮು. | |
| ೫ | ೬ | ೭ | ೮ |
| ರೂ. ಆ. | | ರೂ. ಆ. | |
| ೨೬ ೧೪ | ೧೪/೪ | ೨೬ ೧೪ | |
| ೪೯ ೧೫ | ೧೧/೪ | ೮ ೬ | |
| | ೨೮ ೫ | (ಅ) ೪೧ ೮ | (ಅ) ಮಾಮಲೇದಾರನ ಹುಕುಮು ತಗಾಯಿ, ನಹಿಗಾಂವ ೨೨, ತಾರೀಖು ೨೮-೫-೧೩ನೇ ಪ್ರಕಾರ ಖಟ್ಲಾದ ಬಾಕಿ ಎಂದು ಬಿಟ್ಟುಬಿಟ್ಟದ್ದು. |
| ೩೦ ೬ | ೧೧/೪ | ೨೦ ೦ | |
| (ಬ)+ ೨೦ ೬ | ೨೪/೪.೬ | ೩೧ ೦ | (ಬ) ತಪ್ಪು ಮಾಡಿದ್ದಕ್ಕಾಗಿ ವಸೂಲ ಮಾಡಬೇಕಾದ ಬಾಕಿ. |
| | | (ಕ) − ೦ ೨ | (ಕ) ತಪ್ಪಾಗಿ ೨ ಆಣೆಗಳನ್ನು ಹೆಚ್ಚು ವಸೂಲ ಮಾಡಿದ್ದನ್ನು ಮಾಮಲೇದಾರನ ಹುಕುಮಿನ ಪ್ರಕಾರ ತಿರಿಗಿ ಕೊಟ್ಟಿದೆ. |
| ೫೦ ೧೪ | | ೫೦ ೧೪ | |
| ೩೦ ೬ | ೧೩/೪ | ೧೦೪ ೧೧ | (ಡ) ಹಣ ಎತ್ತಿ ಹಾಕಿದ್ದಕ್ಕಾಗಿ ಪೂರ್ಣ ಸಾಲವನ್ನು ವಸೂಲ ಮಾಡಲಿಕ್ಕೆ |
| (ಡ)+ ೧೫೮ ೦ | | | |
| ೧೮೮ ೬ | | | |

## ತಗಾಯಿ ನಮೂನೆ

| ಅನುಕ್ರಮ ನಂಬರು. | ಖಾತೆ ನಂಬರು. | ತಗಾಯಿ ತಕ್ಕೊಂಡವನ ಹೆಸರು. | ೧ನೇ ಅಕ್ಟೋಬರ ದಿವಸ ಬರತಕ್ಕ ಬಾಕಿ. |
|---|---|---|---|
| ೧ | ೨ | ೩ | ೪ |
| | | | ರೂ. ಆ. |

ತಾರೀಖು

ಮಾಮಲೇದಾರ.

(ಒಂದೇ ವರ್ಷದಲ್ಲಿ ಇಷ್ಟು ಅಸಾಮಾನ್ಯ ಸಂಗತಿಗಳ ಟಿಪ್ಪಣಿ ಮಾಡುವ ಪ್ರಸಂಗವು ಯಾವದೇ ಗ್ರಾಮಕ್ಕೆ ಕ್ವಚಿತ್ತಾಗಿ ಬರುವದು.)

೪—(ಸಂಪೂರ್ಣ)

| ಚಾಲೂ ವರ್ಷದಲ್ಲಿ ವಸೂಲ ಮಾಡತಕ್ಕ ರಕಮು. | ವಸೂಲ ಬಂದ | | ಶರಾ. |
|---|---|---|---|
| | ತಾರೀಖು. | ರಕಮು. | |
| ೫ | ೬ | ೭ | ೮ |
| ರೂ. ಆ. | | ರೂ. ಆ. | ಹುಕುಮು ಮಾಡಲಾಯಿತು. ಮಾಮಲೇದಾರನ ಹುಕುಮು, ತಗಾಯಿ, ನಹಿಗಾಂವ ೫೦, ತಾರೀಖು ೧೦—೪—೧೩. |
| | ೯/೯ | (ಇ) ೮೩ ೧೨ | (ಇ) ೯—೯—೧೩ನೇ ಮಾಮಲೇದಾರನ ಹುಕುಮಿನನ್ವಯ ಖಟ್ಟಾದ ಬಾಕಿ ಎಂದು ಬಿಟ್ಟುಬಿಟ್ಟದ್ದು. |
| | | ನಗದು | |
| ೧೩೭ ೧೧ | | ೧೯೦ ೧೪ | ಅನಧಿಕೃತ ಶಿಲುಕು ಇರುವದಿಲ್ಲ. |
| | | ಖಟ್ಟಾದ ಬಾಕಿ ಎಂದು ಬಿಟ್ಟುಬಿಟ್ಟದ್ದು. | |
| + ೧೫೮ ೦ | | ೧೨೫ ೪ | ೨೬—೯—೧೩ |
| ೨೯೫ ೧೧ | | ೩೧೬ ೨ | |
| + ೨೦ ೭ | | | |
| ೩೧೬ ೨ | | | |

## ತ. ನ. ೪ ಇದರ ಮೇಲಿನ ಶರಾಗಳು.

೧. ೩ನೇ ನಮೂನೆಯಲ್ಲಿ ನಾವು ವಾರ್ಷಿಕ ಮಾಗಣಿಯನ್ನು ನಿರ್ಣಯಿಸುವ ಕೆಲಸವನ್ನು ಮುಗಿಸಿದ ಬಳಿಕ, ಪ್ರತಿಯೊಂದು ಗ್ರಾಮದ ಸಲುವಾಗಿರುವ ಮಾಗಣಿಯನ್ನು, ಈ ನಮೂನೆಯಲ್ಲಿ (೫)ನೇದರ ವರೆಗೆ ನಕಲು ಮಾಡಲಾಗುತ್ತದೆ. ತಾಲೂಕ ಕಚೇರಿಯ ಸಿಬಂದಿಯಿಂದಾಗಲಿ, * ಕುಲಕರ್ಣಿಯನ್ನು ತಾಲೂಕ ಕಚೇರಿಗೆ ಕರೆಯಿಸಿ ಅವನ ಕಡೆಯಿಂದಾಗಲಿ ಅದರ ನಕಲನ್ನು ಮಾಡಿಸಬಹುದು, ಮತ್ತು ಇದು, ಸಾಮಾನ್ಯವಾಗಿ ಅಕ್ಟೋಬರ ೩೧ನೇ ತಾರೀಖಿನೊಳಗಾಗಿ ಮುಗಿಯಬೇಕು. ಹೀಗೆ ಮಾಡುವದರಿಂದ, ಮೊದಲನೇ ಕಂತನ್ನು ಕೊಡಬೇಕಾದ ಅವಧಿಯ ಮುಂಚೆ ಬಹಳ ವೇಳೆಯು ದೊರೆಯುತ್ತದೆ. ಆದರೆ ಬೆಳೆಯ ಲಕ್ಷಣವು ಚನ್ನಾಗಿರದಿದ್ದರೆ ಹಾಗೂ ಕಲೆಕ್ಟರನು ಭೂಮಿಯ ಮಹಸೂಲಿನ ಹಾಗೂ ತಗಾಯಿಯ ತಹಕೂಬಿಗಳ ಸಲುವಾಗಿ ಕೊನೆಯ ಹುಕುಮುಗಳನ್ನು ಕೊಟ್ಟಿರದಿದ್ದರೆ, ಇಂಥ ಹುಕುಮುಗಳು ಕೊಡಲ್ಪಡುವವರೆಗೆ ಈ ನಮೂನೆಯನ್ನು ಕೊಡುವದನ್ನು ಮುಂದೆ ಹಾಕಬೇಕು. ಭೂಮಿಯ ಮಹಸೂಲಿನ ಮೊದಲನೇ ಕಂತಿನ ತಾರೀಖಿನ ಮುಂಚೆ ಹುಕುಮುಗಳನ್ನು ಹೊರಡಿಸುವದು ಅವಶ್ಯವಿರುತ್ತದೆ. (ಮುಲ್ಕೀ ಲೆಕ್ಕಗಳ ಪುಸ್ತಕದಲ್ಲಿ ಗ್ರಾ. ನ ೮-ಬ ದ ಮೇಲಿನ ಸಮಜೂತಿಯ ಕಲಮುಗಳ ೩ನೇ ಹಾಗೂ ೮ನೇ ಪ್ಯಾರಾಗಳನ್ನು ನೋಡಿರಿ). "ಖಾಲಸಾ ಗ್ರಾಮಗಳಲ್ಲಿ ಹಾಗೂ ಜಪ್ತೀ ಗ್ರಾಮಗಳಲ್ಲಿ ಮತ್ತು ತಮ್ಮ ಹುಕುಮತಿನ ಹೊರಗಿರುವ ತಾಲೂಕದಾರೀ ಗ್ರಾಮಗಳಲ್ಲಿ ತಗಾಯಿಯನ್ನು ವಸೂಲ ಮಾಡುವ ತಲಾಟಿಗಳಿಗೆ ಪ್ರತಿಫಲವನ್ನು ಕೊಡತಕ್ಕದ್ದು." (ಆರ್. ೨೦೩–೨೦.)

೨. ಪ್ರತಿಯೊಂದು ನಮೂನೆಯ ಮೇಲೆ ಅದು ಸರಿಯಾಗಿದ್ದ ಬಗ್ಗೆ ಮಾಮಲೇದಾರನು ಸಹಿ ಮಾಡಬೇಕು. ಪ್ರತಿಯೊಬ್ಬ ಸಾಲ ತೆಗೆದುಕೊಂಡವನಿಗೆ ಅವನು ಕೊಡಬೇಕಾದ ರಕಮು ಎಷ್ಟಿರುತ್ತದೆಂದು ಯೋಗ್ಯಕಾಲದಲ್ಲಿ ತಿಳಿಸುವದೂ ಅದನ್ನು ವಸೂಲ ಮಾಡುವದೂ ಕುಲಕರ್ಣಿಯ ಕರ್ತವ್ಯವಿರುತ್ತಧೆ. ಮೊದಲನೇ ಕಂತಿನ ಕಾಲದಲ್ಲಿ ಹಾಗೂ ಲಗತು ಮುಂದಿನ ಹತ್ತು ದಿವಸಗಳಲ್ಲಿ ವಸೂಲಿಯನ್ನು ಮಾಡತಕ್ಕದ್ದು. ಭೂಮಿಯ ಮಹಸೂಲಿನ ರಕಮುಗಳು ತಾಲೂಕ ಕಚೇರಿಗೆ ಮುಟ್ಟುವ ದಿನಗಳಲ್ಲಿಯೇ ತಗಾಯಿ ವಸೂಲಿಯ ಅನೇಕ ರಕಮುಗಳು ಅಲ್ಲಿಗೆ ಮುಟ್ಟುವದು ಇಷ್ಟವಿರುವದಿಲ್ಲ. ಯಾಕಂದರೆ, ಈ ಲೆಕ್ಕಗಳನ್ನು ಸಕಾಲದಲ್ಲಿ ಬರೆಯುವದು ಅಲ್ಲಿಯ ಸಿಬಂದಿಗೆ ಬಹಳ ಕಷ್ಟವೆನಿಸುವದು. ಈ ಸಂಗತಿಯ ಸಂಬಂಧದಿಂದ ಮಾಮಲೇದಾರನು ಕುಲಕರ್ಣಿಗೆ ಹುಕುಮುಗಳನ್ನು ಕೊಡುವನು. (ಮುಲ್ಕೀ ಲೆಕ್ಕಗಳ ಪುಸ್ತಕದಲ್ಲಿ, ತಾ. ನ. ೪ರ ಮೇಲಿನ ಸಮಜೂತಿಯ ಕಲಮುಗಳ ೫ನೇ ಪ್ಯಾರಾವನ್ನು ನೋಡಿರಿ.)

೩. ಕೆಲವು ಸಾಲ ತಕ್ಕೊಂಡವರು, ಎರಡು ಅಥವಾ ಹೆಚ್ಚಿಗೆ ಬಾಬತುಗಳ ಸಂಬಂಧದ ತಮ್ಮ ಬಾಕಿಗಳನ್ನು ಬೇರೆ ಬೇರೆ ತಾರೀಖುಗಳ ದಿವಸ ಕೊಡುವ ಸಂಭವವಿರುತ್ತದೆ. ಆದ್ದರಿಂದ, ಪ್ರತಿ ಎರಡು ಹೆಸರುಗಳ ನಡುವೆ ಒಂದಕ್ಕಿಂತ ಹೆಚ್ಚು ಸಾರೆ ಜಮಾ ಮಾಡಿದ ರಕಮುಗಳನ್ನು ಬರೆಯಲಿಕ್ಕೆ ಬರುವಷ್ಟು ಸ್ಥಳವಿರಬೇಕು.

---

* ಇದೇ ಕಾಲಕ್ಕೆ ಅವರು ಜಮಾಬಂದಿಯ ಸಲುವಾಗಿ ಅಲ್ಲಿಗೆ ಬರುತ್ತಾರೆ.

೪. ಕುಲಕರ್ಣಿಯು ಕಳುಹಿಸಬೇಕಾದ ರಕಮುಗಳ ಸಂಖ್ಯೆಯು ಎಷ್ಟರ ಮಟ್ಟಿಗೆ ಸಣ್ಣದಿರುವದೋ ಅಷ್ಟರ ಮಟ್ಟಿಗೆ ಅವನ ಕೆಲಸವು ಕಡಿಮೆಯಾಗುವದು. ಸಣ್ಣ ಸಣ್ಣ ಬಾಕಿಗಳಿರುವ ಗ್ರಾಮುಗಳಲ್ಲಿ ಅವನು, ತನಗೆ ಒಂದೇ ಚಲನವಷ್ಟೆ ಕಳುಹಿಸಲಿಕ್ಕೆ ಬರುವಂತೆ, ಯಾವತ್ತು ಬಾಕಿಗಳನ್ನು ವಸೂಲ ಮಾಡಲಿಕ್ಕೆ ಯತ್ನಿಸತಕ್ಕದ್ದು ಹಾಗೂ ವಸೂಲ ಮಾಡತಕ್ಕದ್ದು. ಮಾಗಣಿಗಳು ದೊಡ್ಡ ರಕಮುಗಳವಿದ್ದರೂ, ಅವುಗಳ ಸಂಖ್ಯೆಯು ದೊಡ್ಡದಿದ್ದರೂ, ಅವನು ಚಲನಗಳ ಒಟ್ಟು ಸಂಖ್ಯೆಯನ್ನು ಆದಷ್ಟು ಕಡಿಮೆ ಮಾಡಲಿಕ್ಕೆ ಯತ್ನಿಸತಕ್ಕದ್ದು.

೫. ಈ ನಮೂನೆಯನ್ನು ಕುಲಕರ್ಣಿಯ ಕಡೆಗೆ ಕಳುಹಿಸಿದ ನಂತರ, ಈ ಕೆಳಗಿನ ಎರಡು ಪ್ರಸಂಗಗಳುಂಟಾಗಬಹುದು:—

(೧) ಸಂಕ್ಷಿಪ್ತ ರೀತಿಯಿಂದ ಕೆಲಸ ನಡಿಸಿ ವಸೂಲ ಮಾಡಬೇಕೆಂಬ ಯಾವದೇ ಹುಕುಮಿನ ಕಾರಣದಿಂದ ಅಥವಾ ಯಾವದೊಂದು ಹೊಸ ಸಾಲವನ್ನು ಕೊಟ್ಟಿದ್ದರಿಂದ, ಯಾವನೊಬ್ಬ ವಿಶಿಷ್ಟ ಸಾಲ ತೆಗೆದುಕೊಂಡವನ ಕಡೆಯಿಂದ ದೊಡ್ಡದಾದ ರಕಮನ್ನು ವಸೂಲ ಮಾಡಬೇಕೆಂದು ಠರಾಯಿಸಿರಬಹುದು.

(೨) ಸೂಟು ಬಿಟ್ಟ ಕಾರಣದಿಂದ * ಅಥವಾ ವಾರ್ಷಿಕ ಮಾಗಣಿಯನ್ನು ಇಳಿಸಿದ್ದರಿಂದ ಅಥವಾ ತಡಮಾಡಿ ತಹಕೂಬಿಗಳನ್ನು ಕೊಟ್ಟಿದ್ದರಿಂದ, ಮಾಗಣಿಯನ್ನು ಕಡಿಮೆ ಮಾಡಬಹುದು. ಈ ಸಂಗತಿಗಳ ಪೈಕಿ ಯಾವದೊಂದನ್ನು ತ. ನ. ೩ರಲ್ಲಿ ದಾಖಲ ಮಾಡಿದ ನಂತರ ಅದನ್ನು ಕುಲಕರ್ಣಿಗೆ ತಿಳಿಸಲಾಗುವದು, ಮತ್ತು ಅವನು ಆ ಮೇಲೆ ಸದರಿ ನಮೂನೆಯಲ್ಲಿ ತಿದ್ದುಪಡೆ ಮಾಡುವನು ಮತ್ತು ಹೀಗೆ ಮಾಡಲಿಕ್ಕೆ ಅಧಿಕಾರ ಕೊಡುವ ಹುಕುಮುನ್ನೂ ಶರಾಗಳನ್ನೂ ಬರೆಯುವನು. ಯಾವದೇ ವಿಶಿಷ್ಟ ಕಾರಣದಿಂದ ತಾಲೂಕ ಕಚೇರಿಯಲ್ಲಿ ಯಾವದೇ ವಸೂಲಿಯನ್ನು ಮಾಡಿದರೆ ಇದನ್ನಾದರೂ ಕುಲಕರ್ಣಿಗೆ ತಿಳಿಸಲಾಗುವದು. ಈ ಯಾವತ್ತು ಪ್ರಸಂಗಗಳಲ್ಲಿ, ಅವನು ಇನ್ನುಮುಂದೆ ಕಳುಹಿಸಲಿರುವ ಚಲನದ ಮೇಲ್ಭಾಗದಲ್ಲಿರುವ ಗೋಷ್ವಾರೆಯಲ್ಲಿ ಅವಶ್ಯವಿರುವ ತಿದ್ದುಪಡೆಯನ್ನು ಮಾಡುವನು.

೬. ಯಾವದೇ ರಕಮು, ಅದು ಸಲ್ಲತಕ್ಕ ತಾರೀಖಿನ ದಿವಸ, ವಾಜವೀ ನೋಟೀಸನ್ನು ಕೊಟ್ಟ ನಂತರವೂ ಕೊಡಲ್ಪಡದಿದ್ದರೆ, ಕುಲಕರ್ಣಿಯು ಭೂಮಿಯ ಮಹಸೂಲಿನ ಬಾಬತಿನಲ್ಲಿಯಂತೆಯೇ, ವಾಡಿಕೆಯಾಗಿ, ಮಾಗಣಿಯ ನೋಟೀಸನ್ನು ಕೊಡದೆ, ಹಾಗೂ ಬೆಳೆಯನ್ನು ಹಾಗೂ ಜಂಗಮ ಆಸ್ತಿಯನ್ನು ಜಪ್ತಮಾಡುವ ಕ್ರಮವನ್ನು ಕೈಕೊಂಡು, ಈ ಸಂಬಂಧದಲ್ಲಿಯೂ ಸಕ್ತಿಯ ಕ್ರಮವನ್ನು ಕೈಕೊಳ್ಳುವನು. ಈ ಬಗ್ಗೆ ಉಪಯೋಗಿಸಲ್ಪಟ್ಟ ನಮೂನೆಗಳು, ಯಾವದೇ ಹೆಚ್ಚುಕಡಿಮೆಯಿಲ್ಲದೆ, ಮುಲ್ಕೀ ಲೆಕ್ಕಗಳ ಪುಸ್ತಕದಲ್ಲಿದ್ದ ನಮೂನೆಗಳೇ ಆಗಿರುತ್ತವೆ (ಮುಲ್ಕೀ ಲೆಕ್ಕಗಳ ಪುಸ್ತಕದಲ್ಲಿ, ಗ್ರಾ. ನ. ೧೦ ಹಾಗೂ ತಾ. ನ. ೬ ಇವುಗಳ ನಂತರದ ಸಕ್ತಿಯ ಕ್ರಮದ ನಮೂನೆಗಳನ್ನು ನೋಡಿರಿ): 'ಭೂಮಿಯ ಮಹಸೂಲು ಎಂದಿರುವ

---

* ೨೦ನೇ ಕಾನೂನನ್ನು ಹಾಗೂ ಟಿಪ್ಪಣಿಗಳನ್ನು ನೋಡಿರಿ.

ಶಿರೋಲೇಖವನ್ನು 'ತಗಾಯಿ' ಎಂದು ಬದಲಾಯಿಸಿದ ಮಾತ್ರಕ್ಕೆ ಆ ನಮೂನೆಗಳಲ್ಲಿರುವ ಯಾವತ್ತು ಶರ್ತುಗಳು ತಗಾಯಿಗೂ ಲಾಗೂ ಆಗುವವು.

೭. ಭೂಮಿಯ ಮಹಸೂಲಿನ ಸಂಬಂಧದಿಂದ ಎಷ್ಟು ಬಿಗಿಯಾದ ರೀತಿಯಿಂದ ಲಕ್ಷ್ಯಗೊಡಬೇಕೋ ಅಷ್ಟೇ ಬಿಗಿಯಾದ ಲಕ್ಷ್ಯವು ಈ ಸಾಲಗಳ ಸಂಬಂಧದಿಂದ ಬೇಕಾಗುವದಿಲ್ಲೆಂದು ಕುಲಕರ್ಣಿಯು ತಿಳಿಯತಕ್ಕದ್ದಲ್ಲ. ಈ ಸಾಲಗಳಿಗೆ ಭೂಮಿಯ ಮಹಸೂಲಿನಷ್ಟು ಪ್ರಾಧಾನ್ಯತೆಯಿಲ್ಲದಿದ್ದರೂ (೧೦೫ನೇ ಪುಟದಲ್ಲಿರುವ ೨ನೇ ಪ್ಯಾರಾವನ್ನು ನೋಡಿರಿ) ಅವುಗಳನ್ನು ಕನಿಷ್ಠ ಪಕ್ಷಕ್ಕೆ ಅಷ್ಟೇ ಬಿಗುಪನ್ನು ಉಪಯೋಗಿಸಿ ವಸೂಲ ಮಾಡಬೇಕು. ಸಾಲ ತೆಗೆದುಕೊಂಡವನು ಮಾಗಣಿಯ ಯಾವತ್ತು ರಕಮನ್ನು ಕೊಡಲಿಕ್ಕೆ ತೀರ ಅಸಮರ್ಥನಿದ್ದರೆ, ಶಕ್ಯವಿದ್ದ ಮಟ್ಟಿಗೆ ಬಡ್ಡಿಯ ರಕಮಿನಷ್ಟನ್ನಾದರೂ ವಸೂಲ ಮಾಡಬೇಕು. ಸಾಲದ ಕಂತನ್ನು ಕೊಡಲಿಕ್ಕೆ ಸಮರ್ಥನಿರುವ ಯಾವನೊಬ್ಬ ಸಾಲ ತೆಗೆದುಕೊಂಡವನು ಯಾವದೊಂದು ಕಂತನ್ನು ಹಟಮಾರಿತನದಿಂದ ಅಥವಾ ಬುದ್ಧಿಪೂರ್ವಕವಾಗಿ ಕೊಡದೆ ಹಿಡಿದಿಟ್ಟರೆ,—ಇಂಥ ಪ್ರಸಂಗವು ಅತ್ಯಂತ ವಿರಳವಿರುತ್ತದೆ—ಪ್ರಾಂತ ಅಮಲದಾರನು, ಸನ್ ೧೯೨೫ನೇ ಇಸವಿಯಲ್ಲಿ ಸುಧಾರಿಸಲ್ಪಟ್ಟ ಭೂಮಿಯ ಮಹಸೂಲಿನ ಕಾಯದೆಯ, ೧೫೭ನೇ ಕಲಮಿನನ್ವಯ ಅವನಿಗೆ ಕಂತಿನ ಒಂದು-ನಾಲ್ಕಾಂಶದಷ್ಟು ರಕಮಿನ ದಂಡವನ್ನು ವಿಧಿಸಬಹುದು. ಇಂಥ ಹೆಚ್ಚಿನ ವಸೂಲಿಯನ್ನು ಪೂರ್ಣವಾಗಿ ಬಡ್ಡಿಯ ಲೆಕ್ಕದಲ್ಲಿ ಜಮಾ ಮಾಡಲಾಗುವದು, ಮತ್ತು ಅದನ್ನು ಬಡ್ಡಿಯ ಮಾಗಣಿಯಲ್ಲಿ ಕೂಡಿಸಲಾಗುವದು; ಅದನ್ನು ಅಸಲಿನ ಲೆಕ್ಕದಲ್ಲಿ ಜಮಾ ಮಾಡುವದರಿಂದ ಅದು ದಂಡವಾಗಲಿಕ್ಕಿಲ್ಲ. ಮೋಸ ಮಾಡುವ ಉದ್ದೇಶದಿಂದ ರಕಮನ್ನು ಕೊಡಲಿಕ್ಕೆ ತಪ್ಪಿಸಿದರೆ, ಕೊನೆಯ ಉಪಾಯವೆಂದು ಅವನನ್ನು ದಸ್ತಗಿರು ಮಾಡಬಹುದು ಹಾಗೂ ದಿವಾಣಿ ತುರುಂಗದಲ್ಲಿಡಬಹುದು.

| ಪಾವತಿ ನಂಬರು ಮತ್ತು ತಾರೀಖು. | ಖಾತೆ ನಂಬರು. | ಸಾಲಗಾರನ ಮತ್ತು ಪ್ರತ್ಯಕ್ಷ ಹಣ ಕೊಡುವವನ ಹೆಸರು. | ಕೊಟ್ಟ ರಕಮು. | ದಿನದ ಮತ್ತ ಚಲನವಾರ ಒಟ್ಟು. |
|---|---|---|---|---|
| ೧ | | | ರೂ. ಆ. | ರೂ. ಆ. |
| ೧೧—೪ | ೨೨ | ಸಾಯಿ ಕೋಮ ಸಖಾರಾಮು, ಲಿಲಾವಿನಲ್ಲಿ ಕೊಂಡುಕೊಂಡ ಶೇಖ ಅಬ್ದುಲ ಕಾದಿರ ವಲ್ಲದ ಅಬ್ದುಲ ಮಜೀದ ಇವರ ಮುಖಾಂತರ. | ೮ ೭ | |

ತಾರೀಖು ೧೧—೪—೧೩. ತಗಾಯಿ ಪಾವತಿ

ನಂ. ೧.

ಗ್ರಾಮ ನಹಿಗಾಂವ. ಖಾತೆ ನಂ. ೨೨.

ಸಾಯಿ ಕೋಮ ಸಖಾರಾಮು ಇವರ ಕಡೆಯಿಂದ ಮುಟ್ಟಿತು.

ಲಿಲಾವಿನಲ್ಲಿ ಕೊಂಡುಕೊಂಡ ಶೇಖ ಅಬ್ದುಲ ಕಾದಿರ ವಲ್ಲದ ಅಬ್ದುಲ ಮಜೀದ ಇವರ ಮುಖಾಂತರ.

ರೂಪಾಯಿ ಎಂಟು......; ಆಣೆ ಏಳು........ಮಾತ್ರ.

(೮—೭—೦)

ಕುಲಕರ್ಣಿ—ರಾಮಚಂದ್ರ ರಘುನಾಥ. ಪಾಟೀಲ—ಭಾವು ಪಾಟೀಲ.

ಈ ನಮೂನೆಯಲ್ಲಿದ್ದ ಹೊರ್ತು, ತಗಾಯಿಯ ಬಗ್ಗೆ ಕೊಟ್ಟ ಯಾವ ಪಾವತಿಯೂ ಕಾಯದೇಶೀರವಾಗ ಲಿಕ್ಕಿಲ್ಲ.

ತಗಾಯಿ ನಮೂನೆ ನಂ. ೪ರಲ್ಲಿಯ ತನ್ನ ಲೆಕ್ಕವನ್ನು ನೋಡಲಿಕ್ಕೆ ಪ್ರತಿಯೊಬ್ಬ ಸಾಲಗಾರನಿಗೆ ಹಕ್ಕು ಇರುತ್ತದೆ ಮತ್ತು (ಅಸಮಾಧಾನವಾದರೆ) ಅವನು ತಾಲೂಕಿನಲ್ಲಿಯ ತನ್ನ ಖತಾವಣಿಯನ್ನು ನೋಡಬಹುದು.

## ತಗಾಯಿ ನಮೂನೆ ೫—(ಮುಂದೆಸಾಗಿದ್ದು.)

| ಪಾವತಿ ನಂಬರು ಮತ್ತು ತಾರೀಖು. | ಖಾತೆ ನಂಬರು. | ಸಾಲಗಾರನ ಮತ್ತು ಪ್ರತ್ಯಕ್ಷ ಹಣ ಕೊಡುವವನ ಹೆಸರು. | ಕೊಟ್ಟ ರಕಮು. | ದಿನದ ಮತ್ತು ಜಲನವಾರ ಒಟ್ಟು. | ತಾರೀಖು ೧೧—೪—೧೩. ತಗಾಯಿ ಪಾವತಿ ನಂ. ೨. ಗ್ರಾಮ ನಹಿಗಾಂವ. ಖಾತೆ ನಂ. ೩೪. |
|---|---|---|---|---|---|
| | | | ರೂ. ಆ. | ರೂ. ಆ. | ಅನಂತ ಸಖಾರಾಮು ಇವರ ಕಡೆಯಿಂದ ಮುಟ್ಟಿತು. ಖುದ್ದು ಅವರಿಂದ. |
| ೨<br>೧೧—೪ | ೩೪ | ಅನಂತ ಸಖಾರಾಮು .... | ೨೦ ೦ | | ರೂಪಾಯಿ ಇಪ್ಪತ್ತು.........ಆಣೆ.......ಮಾತ್ರ. (೨೦—೦—೦)<br>ಕುಲಕರ್ಣಿ—ರಾಮಚಂದ್ರ ರಘುನಾಥ. ಪಾಟೀಲ—ಭಾವು ಪಾಟೀಲ.<br>ಈ ನಮೂನೆಯಲ್ಲಿಷ್ಟ ಹೊರ್ತು ತಗಾಯಿಯ ಬಗ್ಗೆ ಕೊಟ್ಟ ಯಾವ ಪಾವತಿಯೂ ಕಾಯದೇಶೀರವಾಗ ಲಿಕ್ಕಿಲ್ಲ. |
| | | | | ೨೫ ೭ | ತಗಾಯಿ ನಮೂನೆ ನಂ. ೪ರಲ್ಲಿಯು ತನ್ನ ಲಿಕ್ಕವನ್ನು ನೋಡಲಿಕ್ಕೆ ಪ್ರತಿಯೊಬ್ಬ ಸಾಲಗಾರನಿಗೆ ಹಕ್ಕು ಇರುತ್ತದೆ ಮತ್ತು (ಅಸಮಾಧಾನವಾದರೆ) ಅವನು ತಾಲೂಕಿನಲ್ಲಿಯು ತನ್ನ ಖತಾವಣಿಯನ್ನು ನೋಡಬಹುದು. |

## ತಗಾಯಿ ನಮೂನೆ ೫—(ಮುಂದೆಸಾಗಿದ್ದು.)

| ಪಾವತಿ ನಂಬರು ಮತ್ತು ತಾರೀಖು. | ಖಾತೆ ನಂಬರು. | ಸಾಲಗಾರನ ಮತ್ತು ಪ್ರತ್ಯಕ್ಷ ಹಣ ಕೊಡುವವನ ಹೆಸರು. | ಕೊಟ್ಟ ರಕಮು. | ದಿನದ ಮತ್ತು ಚಲನವಾರ ಒಟ್ಟು. | |
|---|---|---|---|---|---|
| | | | | | ತಾರೀಖು ೧೩—೪—೧೩. ತಗಾಯಿ ಪಾವತಿ ನಂ ೩.<br>ಗ್ರಾಮ ನಹಿಗಾಂವ. ಖಾತೆ ನಂ. ೫೦. |
| ೩<br>೧೩—೪ | ೫೦ | ತುಕಾರಾಮು ಗೋವಿಂದ ಶಿಂದೆ, ಒತ್ತೆ ತೆಗೆದುಕೊಂಡ ಗಿರಧರಲಾಲ ರಾಮುಲಾಲ ಮಾರವಾಡಿ, ಇವರ ಮುಖಾಂತರ. | ರೂ. ಆ.<br>೧೦೪ ೧೧ | ರೂ. ಆ. | ತುಕಾರಾಮು ಗೋವಿಂದ ಶಿಂದೆ ಇವರ ಕಡೆಯಿಂದ ಮುಟ್ಟಿತು.<br>ಒತ್ತೆ ತೆಗೆದುಕೊಂಡ ಗಿರಧರಲಾಲ ರಾಮುಲಾಲ ಮಾರವಾಡಿ, ಇವರ ಮುಖಾಂತರ.<br>ರೂಪಾಯಿ ಒಂದುನೂರನಾಲ್ಕು.................ಆಣೆ ಹನ್ನೊಂದು........ಮಾತ್ರ. (೧೦೪—೧೧—೦)<br>ಕುಲಕರ್ಣಿ—ರಾಮುಚಂದ್ರ ರಘುನಾಥ. ಪಾಟೀಲ—ಭಾವು ಪಾಟೀಲ.<br>ಈ ನಮೂನೆಯಲ್ಲಿದ್ದ ಹೊರ್ತು ತಗಾಯಿಯ ಬಗ್ಗೆ ಕೊಟ್ಟ ಯಾವ ಪಾವತಿಯೂ ಕಾಯದೇಶೀರವಾಗಲಿಕ್ಕಿಲ್ಲ.<br>ತಗಾಯಿ ನಮೂನೆ ನಂ. ೪ರಲ್ಲಿಯ ತನ್ನ ಲೆಕ್ಕವನ್ನು ನೋಡಲಿಕ್ಕೆ ಪ್ರತಿಯೊಬ್ಬ ಸಾಲಗಾರನಿಗೆ ಹಕ್ಕು ಇರುತ್ತದೆ ಮತ್ತು (ಅಸಮಾಧಾನವಾದರೆ) ಅವನು ತಾಲೂಕಿನಲ್ಲಿಯ ತನ್ನ ಖತಾವಣಿಯನ್ನು ನೋಡ ಬಹುದು. |
| | | | | ೧೩೩ ೨ | |

## ತಗಾಯಿ ನಮೂನೆ ೫—(ಮುಂದೆಸಾಗಿದ್ದು.)

| ಪಾವತಿ ನಂಬರು ಮತ್ತು ತಾರೀಖು. | ಖಾತೆ ನಂಬರು. | ಸಾಲಗಾರನ ಮತ್ತು ಪ್ರತ್ಯಕ್ಷ ಹಣ ಕೊಡುವವನ ಹೆಸರು. | ಕೊಟ್ಟ ರಕಮು. | ದಿನದ ಮತ್ತು ಚಲನವಾರ ಒಟ್ಟು. | ತಾರೀಖು ೧೭–೪–೧೩. ತಗಾಯಿ ಪಾವತಿ ನಂ. ೪. ಗ್ರಾಮ ಸಹಿಗಾಂವ. ಖಾತೆ ಸಂ. ೧. |
|---|---|---|---|---|---|
| ೪ | | | ರೂ. ಆ. | ರೂ. ಆ. | ಭಿವಾ ತುಕಾರಾಮ ಭೋರ್ಡೆ ಇವರ ಕಡೆಯಿಂದ ಮುಟ್ಟಿತು. ಖುದ್ದು ಅವರಿಂದ. |
| ೧೪–೪ | ೧ | ಭಿವಾ ತುಕಾರಾಮ ಭೋರ್ಡೆ .... | ೨೬ ೧೪ | | ರೂಪಾಯಿ ಇಪ್ಪತ್ತಾರು........ ಆಣೆ ಹದಿನಾಲ್ಕು........ ಮಾತ್ರ. (೨೬–೧೪–೦) |
| ೧೭–೪ | | ಯಶವಂತ ಹಣಮಂತ ಮಹಾರ ಇವರ ಮುಖಾಂತರ ಒಂದು ನೂರಾಅರವತ್ತು ರೂಪಾಯಿಗಳನ್ನು ಮಾತ್ರ ಕಳುಹಿಸಿತು. | | | ಕುಲಕರ್ಣಿ—ರಾಮಚಂದ್ರ ರಘುನಾಥ. ಪಾಟೀಲ—ಭಾವು ಪಾಟೀಲ. |
| | | ಚಲನ ನಂ. ೧. | | | ಈ ನಮೂನೆಯಲ್ಲಿದ್ದ ಹೊರ್ತು ತಗಾಯಿಯ ಬಗ್ಗೆ ಕೊಟ್ಟ ಯಾವ ಪಾವತಿಯೂ ಕಾಯದೇಶೀರವಾಗಲಿಕ್ಕಿಲ್ಲ. |
| — | | | | ೧೬೦ ೦ | ತಗಾಯಿ ನಮೂನೆ ನಂ. ೪ರಲ್ಲಿಯ ತನ್ನ ಲೆಕ್ಕವನ್ನು ನೋಡಲಿಕ್ಕೆ ಪ್ರತಿಯೊಬ್ಬ ಸಾಲಗಾರನಿಗೆ ಹಕ್ಕು ಇರುತ್ತದೆ ಮತ್ತು (ಅಸಮಾಧಾನವಾದರೆ) ಅವನು ತಾಲೂಕಿನಲ್ಲಿಯ ತನ್ನ ಖತಾವಣಿಯನ್ನು ನೋಡಬಹುದು. |

## ತಗಾಯಿ ನಮೂನೆ ೫—(ಮುಂದೆಸಾಗಿದ್ದು.)

| ಪಾವತಿ ನಂಬರು ಮತ್ತು ತಾರೀಖು. | ಖಾತೆ ನಂಬರು. | ಸಾಲಗಾರನ ಮತ್ತು ಪ್ರತ್ಯಕ್ಷ ಹಣ ಕೊಡುವವನ ಹೆಸರು. | ಕೊಟ್ಟ ರಕಮು. | | ದಿನದ ಮತ್ತು ಚಲನವಾರ ಒಟ್ಟು. | | |
|---|---|---|---|---|---|---|---|
| | | | ರೂ. | ಆ. | ರೂ. | ಆ. | ತಾರೀಖು ೨೪—೪. ತಗಾಯಿ ಪಾವತಿ ನಂ. ೫. ಗ್ರಾಮ ನಹಿಗಾಂವ. ಖಾತೆ ನಂ. ೩೪. |
| ೫<br>೨೪—೪ | ೩೪ | ಅನಂತ ಸಖಾರಾಮ ಧರ್ಣೆ .... | ೩೧ | ೦ | | | ಅನಂತ ಸಖಾರಾಮ ಧರ್ಣೆ ಇವರ ಕಡೆಯಿಂದ ಮುಟ್ಟಿತು. ಖುದ್ದು ಅವರಿಂದ. |
| | | ಭಾವು ಪಾಟೀಲನ ಮುಖಾಂತರ ಚಲನ ನಂ. ೨ರ ಸಂಗಡ ಕಳುಹಿಸಿತು. | | | | | ರೂಪಾಯಿ ಮೂವತ್ತೊಂದು .... .... ಆಣೆ.......... ಮಾತ್ರ. (೩೧—೦—೦) |
| | | ರೂಪಾಯಿ ಮೂವತ್ತೊಂದು ಮಾತ್ರ. | | | ೩೧ | ೦ | ಕುಲಕರ್ಣಿ—ರಾಮಚಂದ್ರ ರಘುನಾಥ. ಪಾಟೀಲ—ಭಾವು ಪಾಟೀಲ. |
| | | ಹೆಚ್ಚಿನ ವಸೂಲಿ ಎಂದು ಮಾಮಲೇದಾರನ ಕಡೆಯಿಂದ ಪರತ ಬಂದದ್ದು. | —೦ | ೨ | —೦ | | ಈ ನಮೂನೆಯಲ್ಲಿದ್ದ ಹೊರ್ತು ತಗಾಯಿಯ ಬಗ್ಗೆ ಕೊಟ್ಟ ಯಾವ ಪಾವತಿಯೂ ಕಾಯದೇಶೀರವಾಗಲಿಕ್ಕಿಲ್ಲ. |
| | | | ೩೦ | ೧೪ | ೩೦ | ೧೪ | ತಗಾಯಿ ನಮೂನೆ ನಂ. ೪ರಲ್ಲಿಯ ತನ್ನ ಲೆಕ್ಕವನ್ನು ನೋಡಲಿಕ್ಕೆ ಪ್ರತಿಯೊಬ್ಬ ಸಾಲಗಾರನಿಗೆ ಹಕ್ಕು ಇರುತ್ತದೆ ಮತ್ತು (ಅಸಮಾಧಾನವಾದರೆ) ಅವನು |
| | | ವಾರ್ಷಿಕ ಒಟ್ಟು ನಗದು, ೧೯೧೨—೧೩. | | | ೧೯೦ | ೧೪ | ತಾಲೂಕಿನಲ್ಲಿಯ ತನ್ನ ಖಜಾವಣಿಯನ್ನು ನೋಡಬಹುದು. |

# ತಗಾಯಿ ನಮೂನೆ ೫—(ಸಂಪೂರ್ಣ.)

| ಪಾವತಿ ನಂಬರು ಮತ್ತು ತಾರೀಖು. | ಖಾತೆ ನಂಬರು. | ಸಾಲಗಾರನ ಮತ್ತು ಪ್ರತ್ಯಕ್ಷ ಹಣ ಕೊಡುವವನ ಹೆಸರು. | ಕೊಟ್ಟ ರಕಮು. | ದಿನದ ಮತ್ತು ಚಲನವಾರ ಒಟ್ಟು. |
|---|---|---|---|---|
| ೩ | | ಖಾಲಿ. | ರೂ. ಆ. | ರೂ. ಆ. |

ತಾರೀಖು. ತಗಾಯಿ ಪಾವತಿ ನಂ. ೬.

ಗ್ರಾಮ. ಖಾತೆ ನಂ.

................ಇವರ ಕಡೆಯಿಂದ ಮುಟ್ಟಿತು. ರದ್ದು ಮಾಡಿತು.

................ಮುಖಾಂತರ. (ಆರ್. ಆರ್.)

ರೂಪಾಯಿ ಆಣೆ ಮಾತ್ರ. ( ).

ಕುಲಕರ್ಣಿ— ಪಾಟೀಲ—

ಈ ನಮೂನೆಯಲ್ಲಿದ್ದ ಹೊರ್ತು ತಗಾಯಿಯ ಬಗ್ಗೆ ಕೊಟ್ಟ ಯಾವ ಪಾವತಿಯೂ ಕಾಯದೇಶೀರವಾಗ ಲಿಕ್ಕಿಲ್ಲ.

ತಗಾಯಿ ನಮೂನೆ ಸಂ. ೪ರಲ್ಲಿಯ ತನ್ನ ಲಿಕ್ಕವನ್ನು ನೋಡಲಿಕ್ಕೆ ಪ್ರತಿಯೊಬ್ಬ ಸಾಲಗಾರನಿಗೆ ಹಕ್ಕು ಇರುತ್ತದೆ ಮತ್ತು (ಅಸಮಾಧಾನವಾದರೆ) ಅವನು ತಾಲೂಕಿನಲ್ಲಿಯ ತ ್ನ ಖತಾವಣಿಯನ್ನು ನೋಡ ಬಹುದು.

ತಗಾಯಿ ನಮೂನೆ

| ಗ್ರಾಮ ನಹಿಗಾಂವ. | ಚಲನ ನಂಬರು ೧. |
|---|---|

| ಖಾತೆ ನಂಬರು (ತ. ನ. ೪ನೇದರ ಆಸನ ೨.) ೧ | ಸಾಲಗಾರನ ಹೆಸರು. ೨ | | ವಸೂಲ ಬಂದ ತಾರೀಖು. ೩ |
|---|---|---|---|
| ೧ | ಭಿವಾ ತುಕಾರಾಮ ಭೊರ್ಡೆ | .... | ೧೪–೪ |
| ೨೨ | ಸಾಯಿ ಕೋಮ ಸಖಾರಾಮ | .... | ೧೧–೪ |
| ೩೪ | ಅನಂತ ಸಖಾರಾಮ | .... | ೧೧–೪ |
| ೫೦ | ತುಕಾರಾಮ ಗೋವಿಂದ ಶಿಂದೆ | .... | ೧೩–೪ |

ಒಟ್ಟು ರಕಮು (ಅಕ್ಷರದಲ್ಲಿ) ರೂಪಾಯಿ ಒಂದುನೂರಾಅರವತ್ತು ಆಣೆ ಇಲ್ಲ ಮಾತ್ರ.

| ಕರನ್ಸಿ ನೋಟುಗಳು. | ಭಂಗಾರದ ನಾಣ್ಯಗಳು. | ರೂಪಾಯಿಗಳು. |
|---|---|---|
| ರೂ. ೧೦ರ ೧೦ | ಇಲ್ಲ | ೪೨ |
| ರೂ. ೫೦ ರ ೩ | | |

ಯಶವಂತ ಹಣಮಂತ ಮಹಾರ ಇವನ ಮುಖಾಂತರ ಕಳುಹಿಸಿತು.

ತಾರೀಖು ೧೭–೪–೧೩.

ರೂಪಾಯಿ ಒಂದುನೂರಾ ಅರವತ್ತು. ಆಣೆ ಇಲ್ಲ. (ರೂ.೧೬೦–೦–೦) ಮಾತ್ರ

೬—ಚಲನ.

| | ರೂ. | ಆ. |
|---|---|---|
| ವಸೂಲ ಮಾಡತಕ್ಕ ರಕಮು .... .... | ೨೯೫ | ೧೧ |
| ಈ ಮೊದಲು ವಸೂಲಾದದ್ದು (ತಾಲೂಕದಲ್ಲಿ ವಸೂಲಾದದ್ದು ಸಹಿತ.) | ........ | |
| ಇವರ ಸಂಗಡ ಕಳಿಸಿದ ರಕಮು.... .... | ೧೬೦ | ೦ |
| ಈ ಹೊತ್ತಿನ ವರೆಗೆ ವಸೂಲಾದ ಒಟ್ಟು ರಕಮು. | ೧೬೦ | ೦ |

| ವಸೂಲಾದ ರಕಮು. | | ತಾಲೂಕ ಕಚೇರಿಯಲ್ಲಿ ತುಂಬತಕ್ಕದ್ದು. ಬಂದ ಹಣದ ತಪಶೀಲು. | | | | ಶರಾ. |
|---|---|---|---|---|---|---|
| | | ಅಸಲು. | | ಬಡ್ತಿ. | | |
| ೪ | | ೫ಅ. | | ೫ಬ. | | ೬ |
| ರೂ. | ಆ. | ರೂ. | ಆ. | ರೂ. | ಆ. | |
| ೨೬ | ೧೪ | ೧೧ | ೦ | ೧೫ | ೧೪ | |
| ೮ | ೭ | ........ | | ೮ | ೭ | |
| ೨೦ | ೦ | ೧೬ | ೯ | ೩ | ೭ | |
| ೧೦೪ | ೧೧ | ೯೬ | ೪ | ೮ | ೭ | ತಾರೀಖು ೧೮ನೇ ಎಪ್ರಿಲ ಸನ್ ೧೯೧೩ನೇ ಇಸವಿಯ ದಿನ ತಗಾಯಿ ನಮೂನೆ ೩ರಲ್ಲಿ ನೋಂದು ಮಾಡಿದ್ದು. |
| ೧೬೦ | ೦ | | | | | |
| | | ೧೨೩ | ೧೩ | ೩೬ | ೩ | ಅ. ಬ. ತಗಾಯಿ ಕಾರಕೂನ. |

| ಸಣ್ಣ ಬೆಳ್ಳಿಯ ನಾಣ್ಯಗಳು. | ನಿಕೆಲ್ ನಾಣ್ಯಗಳು. | ತಾಮ್ರದ ನಾಣ್ಯಗಳು. |
|---|---|---|
| ೨ ೮ ೦ | ೦ ೮ ೦ | — |

ಪಾಟೀಲ. ಕುಲಕರ್ಣಿ.

ತಾರೀಖು ೧೮—೪—೧೩ನೇ ದಿನ ಮುಟ್ಟಿತು.

ಸರಾಫ ಕಾರಕೂನ.

ಎಲ್. ಎಮ್.,

ಹೆಡ್ ಕಾರಕೂನ.

ಕೆ. ಜಿ

ಮಾಮಲೇದಾರ.

## ತ. ನ. ೫ ಹಾಗೂ ೬ ಇವುಗಳ ಮೇಲಿನ ಶರಾಗಳು.

೧. ಈ ನಮೂನೆಗಳು, ಮುಲ್ಕೀ ಲೆಕ್ಕಗಳ ಪುಸ್ತಕದಲ್ಲಿಯ ಗ್ರಾ. ನ. ೯ ಹಾಗೂ ೧೦ ಇವುಗಳಿಗೆ ಬಹುತರವಾಗಿ ಯಾವತ್ತು ಬಾಬತುಗಳಲ್ಲಿ ಸರಿಹೋಗುವದರಿಂದ, ಇವುಗಳ ವಿಷಯದಲ್ಲಿ ಯಾವದೇ ಹೆಚ್ಚಿನ ವಿವರಣೆಯು ಅವಶ್ಯವಿರುವದಿಲ್ಲ. ಆ ನಮೂನೆಗಳ ವಿಷಯವಲ್ಲಿ ಮಾಡಿದ ಶರಾಗಳನ್ನು ಸ್ವಲ್ಪಮಟ್ಟಿಗೆ ಬದಲಾಯಿಸಿದರೆ ಅವುಗಳು ಈ ತಗಾಯಿ ನಮೂನೆಗಳಿಗೂ ಲಾಗೂ ಆಗುವವು. ಪ್ರತಿಯೊಂದು ಪಾವತಿಯನ್ನು ಉಪಯೋಗಿಸಬೇಕು. ಪಾವತಿಯ ಕೊನೆಯ ಪ್ರತಿಯಲ್ಲಿದ್ದ ಖಾಲಿ ಸ್ಥಳದಲ್ಲಿ ಕಳಿಸಿದ ರಕಮುಗಳನ್ನು ದಾಖಲ ಮಾಡಬೇಕು. ಭೂಮಿಯ ಮಹಸೂಲಿನ ರಕಮನ್ನು ಕಳುಹಿಸಿದ ಬಳಿಕ ಯಾವ ತಜವೀಜು ಮಾಡಲಾಗುತ್ತದೋ ಅದೇ ಸ್ವರೂಪದ ತಜವೀಜನ್ನು, ಕೆಟ್ಟ, ಕಡಿಮೆ ತೂಕದ ಅಥವಾ ದೋಷಯುಕ್ತ ನಾಣ್ಯಗಳನ್ನು ಕಳುಹಿಸಿಕೊಟ್ಟ ಬಳಿಕ ಮಾಡಲಾಗುವದು. ತಾಲೂಕ ಕಚೇರಿಯಲ್ಲಿ ಮಾಡಿದ ವಸೂಲನ್ನು ಕುಲಕರ್ಣಿಗೆ (ಎರಡನೇ ಸಾರೆ ವಸೂಲ ಮಾಡುವದನ್ನು ಪ್ರತಿಬಂಧಿಸುವದರ ಸಲುವಾಗಿ) ತಿಳಿಸಲಾಗುವದು, ಮತ್ತು ಗ್ರಾಮದ ಲೆಕ್ಕವನ್ನು ಸರಿಗೊಳಿಸುವದರ ಸಲುವಾಗಿ ದಾಖಲ ಮಾಡಲಾಗುವದು. ಪ್ರತಿ ತಿಂಗಳ ಕೊನೆಗೆ ರಕಮುಗಳ ಒಟ್ಟು ಬೇರೀಜನ್ನು ಮಾಡದೆ, ಪ್ರತಿ ಚಲನದ ಸಲುವಾಗಿ ಬೇರೀಜನ್ನು ಮಾಡಲಾಗುವದು. ಕಟ್ಟಕಡೆಯ ಚಲನವನ್ನು ಹಾಗೂ ೫ನೇ ನಮೂನೆಯ ಕೊನೆಯ ಬೇರೀಜನ್ನು ವರ್ಷದ ಕೊನೆಯ ತಾಲೂಕದ ಲೆಕ್ಕದೊಂದಿಗೆ ತುಲನೆಮಾಡಿ ನೋಡುವ ವಿಧಾನವು, ಭೂಮಿಯ ಮಹಸೂಲಿನ ಲೆಕ್ಕಗಳ ಸಂಬಂಧದಿಂದಿರುವ ತುಲನೆಮಾಡುವ ವಿಧಾನವೇ ಇರುವದು.

೨. ಸಪ್ಟೆಂಬರ ತಿಂಗಳ ೨೬ನೇ ಹಾಗೂ ೩೦ನೇ ತಾರೀಖುಗಳ ನಡುವೆ ಯಾವದೇ ರಕಮನ್ನು ಕಳುಹಿಸತಕ್ಕದ್ದಲ್ಲ. ಸಪ್ಟೆಂಬರ ತಿಂಗಳ ೨೬ನೇ ತಾರೀಖಿನ ನಂತರ ಯಾವದೇ ವಸೂಲಿಯನ್ನು ಮಾಡಿದ್ದರೆ, ಅವನ್ನು ಅಕ್ಟೋಬರ ೧ನೇ ತಾರೀಖಿನ ದಿವಸ ಬಂದದ್ದೆಂದು ಜಮಾ ಮಾಡಲಾಗುವದು. ಆದರೆ ಪ್ರತಿಯೊಬ್ಬ ಕುಲಕರ್ಣಿಯು ತನ್ನ ಯಾವತ್ತು ವಸೂಲಿಗಳನ್ನು ಸಪ್ಟೆಂಬರಕ್ಕಿಂತ ಬಹಳ ಮುಂಚಿತವಾಗಿ ವಸೂಲ ಮಾಡಲಿಕ್ಕೆ ಯತ್ನಿಸತಕ್ಕದ್ದು. ಮುಂದಿನ ವರ್ಷದ ನಮೂನೆಯು ಅಕ್ಟೋಬರ ತಿಂಗಳ ಕೊನೆಯ ವರೆಗೆ ಬರಲಿಕ್ಕಿಲ್ಲವಾದ ಕಾರಣ, (ಸಪ್ಟೆಂಬರ ತಿಂಗಳ ಕೊನೆಯ ಹಾಗೂ ಹೊಸ ನಮೂನೆಯು ಬಂದು ಮುಟ್ಟುವ ಅವಧಿಯ ನಡುವೆ ಯಾವದೇ ರಕಮುಗಳು ಇನ್ನೂ ವಸೂಲಾಗದೆ ಉಳಿದಿದ್ದರೆ) ನಮೂನೆ ೪ ಇದನ್ನು ಚಾಲೂ ಇಡಲಾಗುತ್ತದೆ ೫ನೇ ನಮೂನೆಯು ಪೂರ್ಣ ತುಂಬುವ ವರೆಗೆ ಅದನ್ನು ಚಾಲೂ ಇಡಲಾಗುವದು, ಮತ್ತು ಪ್ರತಿ ಅಕ್ಟೋಬರದ ೧ನೇ ತಾರೀಖಿಗೆ ಒಂದು ಹೊಸ ಪುಟವನ್ನು ಜೋಡಿಸಲಾಗುವದು.

೩. ಪೈಗಳುಳ್ಳ ಯಾವದೇ ರಕಮನ್ನು ವಸೂಲ ಮಾಡಬಾರದು ಅಥವಾ ಜಮಾ ಹಿಡಿಯಬಾರದು. ಯಾವತ್ತು ಮಾಗಣಿಗಳು ಪೂರ್ಣ ರೂಪಾಯಿ ಹಾಗೂ ಆಣೆಗಳಲ್ಲಿ ಮಾತ್ರ ಇರತಕ್ಕದ್ದು. ಸರಿಯಾದ ರಕಮನ್ನೇ ವಸೂಲು ಮಾಡುವ ಬಗ್ಗೆ ಕಾಳಜಿಯನ್ನು ತಕ್ಕೊಳ್ಳತಕ್ಕದ್ದು; ಹೆಚ್ಚಿಗೆ ವಸೂಲ ಮಾಡಲಾಗುವ ಚಿಲ್ಲರೆ ರಕಮುಗಳಿಂದ ಬಹಳ ತೊಂದರೆಯಾಗುತ್ತದೆ.

